# ರುದ್ರಭಾಷ್ಯಪ್ರಕಾಶ



ಅಧ್ಯಾತ್ಮಪ್ರಕಾಶಕಾರ್ಯಾಲಯ,

ಹೊಳೆನರಸೀಪುರ.

1978

ಅಧ್ಯಾತ್ಮಗ್ರಂಥಾವಳಿ

# ರುದ್ರಭಾಷ್ಯಪ್ರಕಾಶ

(ರುದ್ರಾಧ್ಯಾಯದ ವಿವರಣರೂಪವಾದ ಉಪನ್ಯಾಸಗಳು)

ಹೊ.ನಾ. ವೆಂಕಟೇಶಶರ್ಮ
ಬೆಂಗಳೂರು. 1985

ಲೇಖಕ :
ಅಧ್ಯಾತ್ಮವಿದ್ಯಾಪ್ರವೀಣ
ಹೆಚ್. ಎಸ್. ಲಕ್ಷ್ಮೀನರಸಿಂಹಮೂರ್ತಿ

ಕ್ರಮಾಂಕ ೧೮೧

ಪ್ರಕಾಶಕರು :
ಅಧ್ಯಾತ್ಮಪ್ರಕಾಶಕಾರ್ಯಾಲಯ,
ಹೊಳೆನರಸೀಪುರ.
1978

ಒಂದನೆಯ ಮುದ್ರಣ

೧೦೦೦ ಪ್ರತಿಗಳು



ಸೂಚನೆ : ಈ ಗ್ರಂಥವನ್ನು ೩೩ನೆಯ ಪುಟದಿಂದ ಪೂರ (ಮುಖಪತ್ರಾದಿಗಳ ಸಮೇತ) ಕರ್ನಾಟಕಸರ್ಕಾರದವರು ಒದಗಿಸಿರುವ ರಿಯಾಯಿತಿ ಬೆಲೆಯ ಕಾಗದದಲ್ಲಿ ಮುದ್ರಿಸಲಾಗಿದೆ.

ಮುದ್ರಣಸ್ಥಾನ :

ಆಧ್ಯಾತ್ಮಪ್ರಕಾಶಮುದ್ರಣಾಲಯ,

ಹೊಳೆನರಸೀಪುರ.

# ಬಿನ್ನಹ

ಅಧ್ಯಾತ್ಮಪ್ರಕಾಶಕಾರ್ಯಾಲಯದ ಮುಖ್ಯ ಚಟುವಟಿಕೆಯಾದ ಗ್ರಂಥ ಪ್ರಕಟನೆಯ ಕಾರ್ಯದಲ್ಲಿ ಈವರೆಗೆ ಹೊರತಂದಿರುವ ನೂರಾರು ಅಧ್ಯಾತ್ಮ ಗ್ರಂಥಗಳ ಜೊತೆಗೆ ಈಗ ವಾಚಕರಿಗೆ 'ರುದ್ರಭಾಷ್ಯಪ್ರಕಾಶ'ವೆಂಬ ಈ ಗ್ರಂಥವನ್ನು ಅರ್ಪಿಸಲು ಬಹಳ ಸಂತೋಷವಾಗಿದೆ. ಕಾರ್ಯಾಲಯದ ಸಂಸ್ಥಾಪಕರಾದ ಬ್ರಹ್ಮೀಭೂತ ಪೂಜ್ಯ ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಸ್ವಾಮಿಗಳವರ ಶಿಷ್ಯರಾದ ವೇ|| ಬ್ರ|| ಶ್ರೀ|| ಲಕ್ಷ್ಮೀನರಸಿಂಹಮೂರ್ತಿಗಳು ಈ ಗ್ರಂಥವನ್ನು ಬರೆದುಕೊಟ್ಟಿರುತ್ತಾರೆ.

ಹೊಳೆನರಸೀಪುರದಲ್ಲಿ ಕೆಲವು ಆಸ್ತಿಕಮಹಾಜನರು ವೈದಿಕಕರ್ಮಗಳಿಗೆ ಅತ್ಯುಪಯುಕ್ತವಾದ ಹಲವು ವೇದಮಂತ್ರಗಳನ್ನು ಕಲಿಯಲು ಇಚ್ಛಿಸಿ ತಾ|| 14-10-1973 ರಂದು ವೇ|| ಲಕ್ಷ್ಮೀನರಸಿಂಹಮೂರ್ತಿಗಳ ಆಚಾರ್ಯತ್ವದಲ್ಲಿ ಒಂದು ವೇದಪಾಠಶಾಲೆಯನ್ನು ಸ್ಥಳೀಯ ಶಂಕರಮಠದಲ್ಲಿ ಆರಂಭಿಸಿದರು. ಅಲ್ಲಿ ದೇವತಾರ್ಚನಮಂತ್ರ, ರುದ್ರ, ಚಮಕಗಳೇ ಮುಂತಾದ ವೇದಭಾಗಗಳ ಅಧ್ಯಯನವು ಸುಮಾರು ಒಂದು ವರ್ಷಕ್ಕೂ ಮೇಲ್ಪಟ್ಟು ಕಾಲ ಯಶಸ್ವಿಯಾಗಿ ನಡೆಯಿತು. ಅನಂತರ ಕೆಲವರ ಪ್ರಾರ್ಥನೆಯಂತೆ ರುದ್ರಭಾಷ್ಯವನ್ನು ಕುರಿತ ಉಪನ್ಯಾಸಗಳನ್ನು ತಾ|| 3-4-1975 ರಿಂದ ಸುಮಾರು ಹತ್ತುದಿನಗಳ ಕಾಲ ವೇದಮೂರ್ತಿಗಳು ನಡೆಯಿಸಿಕೊಟ್ಟರು. ಆ ಉಪನ್ಯಾಸಗಳಿಂದ ಪ್ರಭಾವಿತರಾದ ಶ್ರೋತೃಗಳು ಗ್ರಂಥರೂಪದಲ್ಲಿಯೂ ಅದನ್ನು ಬರೆದು ಪ್ರಕಟಿಸುವಂತೆ ಕೇಳಿಕೊಂಡಾಗ ವೇ|| ಮೂರ್ತಿಗಳು ಸಂತೋಷದಿಂದ ಒಪ್ಪಿ ಭಾಗಭಾಗವಾಗಿ ಲೇಖನಗಳನ್ನು ಬರೆದು 'ಅಧ್ಯಾತ್ಮ ಪ್ರಕಾಶ' ಮಾಸಪತ್ರಿಕೆಯಲ್ಲಿ 1975ನೇ ಮೇ ಸಂಚಿಕೆಯಿಂದ ಪ್ರಕಟಿಸುತ್ತಾ ಬಂದರು. ರುದ್ರಾಧ್ಯಾಯವನ್ನು ಕುರಿತ ಈ ವಿವರಣಲೇಖನಗಳ ವಿಷಯಕ್ಕೆ ವಾಚಕರಿಂದ ಪ್ರಶಂಸೆಗಳು ಬಂದದ್ದರ ಜೊತೆಗೆ ಪ್ರತ್ಯೇಕಪುಸ್ತಕವಾಗಿಯೇ ಇದನ್ನು ಹೊರತರಬೇಕೆಂಬ ಒತ್ತಾಯವೂ ಬಂದಿತು. ಅದಕ್ಕೆ ತಕ್ಕಂತೆ ನಮ್ಮ ಹಿರಿಯ ಅಣ್ಣಂದಿರಾದ ಮೈಸೂರಿನ ಸುಪ್ರಸಿದ್ಧ ಅಡ್ವೊಕೇಟ್ ಶ್ರೀ|| ಎ. ವೆಂಕಟೇಶಯ್ಯನವರು ಈ ಗ್ರಂಥದ ಮುದ್ರಣಕ್ಕೆ ಯಥೋಚಿತಸಹಾಯ

ದ್ರವ್ಯವನ್ನೂ ಕೊಟ್ಟರು. ಹಾಗೆಯೇ ನಮ್ಮ ತಂದೆಯವರಾದ ದಿ|| ಅರಕಲಗೂಡು ಶ್ರೀಕಂಠಯ್ಯನವರ ಹೆಸರಿನಲ್ಲಿ ನಮ್ಮ ಪೂಜ್ಯ ಮಾತೃಶ್ರೀಯವರಾದ ಶ್ರೀಮತಿ ಭಾಗೀರಥಮ್ಮನವರೂ ಈ ಪ್ರಕಟನೆಗೆ ಯಥೋಚಿತದ್ರವ್ಯ ಸಹಾಯವನ್ನು ನೀಡಿದರು. ಹೀಗೆ ಸದುದ್ದೇಶಗಳಿಂದ ಕೂಡಿ ಹೊರಬಂದ ಈ ಕೃತಿಯು ಈಗ ವಾಚಕರ ಕರಕಮಲವನ್ನು ಅಲಂಕರಿಸಿದೆ. ಇದು ಆಸ್ತಿಕ ಮಹಾಜನರಲ್ಲಿ ಹೆಚ್ಚುಹೆಚ್ಚು ಪ್ರಚಾರವಾಗಿ ರುದ್ರಾಧ್ಯಾಯದ ಮಹಿಮೆಯು ಸರ್ವತ್ರವೂ ಹರಡಿ ಲೋಕಕ್ಕೆಲ್ಲ ಕ್ಷೇಮವುಂಟಾಗಲೆಂದು ಪ್ರಾರ್ಥಿಸುವೆನು.

ಗ್ರಂಥಕರ್ತರ ವಿಷಯವಾಗಿ ಹೆಚ್ಚಿಗೆ ಹೇಳಬೇಕಾದದ್ದೇನೂ ಇಲ್ಲ. ಇವರು ನಂಜನಗೂಡು ಶಂಕರಮಠದ ವೇದಪಾಠಶಾಲಾ ಪ್ರಾಧ್ಯಾಪಕರಾಗಿದ್ದ ಶೃಂಗೇರಿ ವೇ|| ಹೆಚ್. ಶ್ರೀಕಂಠಘನಪಾಠಿಗಳವರ ಸತ್ಪುತ್ರರು. ವೇದ-ವೇದಾಂತಗಳನ್ನು ಗುರುಮುಖದಿಂದ ಅಭ್ಯಾಸಮಾಡಿ ವಿದ್ವತ್ತನ್ನು ಸಂಪಾದಿಸಿ ತಮ್ಮ ವಿನಯ, ಸದಾಚಾರಾದಿಗಳಿಂದ ನಮಗೆಲ್ಲ ಪೂಜ್ಯರಾಗಿರುತ್ತಾರೆ. ಕಾರ್ಯಾಲಯಕ್ಕೆ ಇಂಥ ಪಂಡಿತರು ದೊರೆತಿರುವದು ಒಂದು ಸುಯೋಗವೆಂದೇ ಹೇಳಬೇಕು. ಇವರು ಈ ಗ್ರಂಥವನ್ನು ತಮ್ಮ ತೀ||ರವರಿಗೆ ಸಮರ್ಪಿಸಿರುವದು ಇವರ ಪಿತೃಭಕ್ತಿಯ ಕುರುಹಾಗಿದೆ. ಭಗವಂತನು ಇವರಿಗೆ ಸರ್ವವಿಧವಾದ ಶ್ರೇಯಸ್ಸನ್ನೂ ಉಂಟುಮಾಡಲೆಂದು ಪ್ರಾರ್ಥಿಸುವೆನು. ಈ ಗ್ರಂಥದ ಹಕ್ಕುಬಾಧ್ಯತೆಗಳನ್ನೆಲ್ಲ ಶ್ರೀಯುತರು ಕಾರ್ಯಾಲಯಕ್ಕೇ ಗುರುಕಾಣಿಕೆಯಾಗಿ ಸಮರ್ಪಿಸಿದ್ದಾರೆ.

ವಾಚಕರು ಎಂದಿನಂತೆ ಈ ಗ್ರಂಥವನ್ನು ಬರಮಾಡಿಕೊಂಡು ಓದಿ ತಮ್ಮ ಮಿತ್ರಮಂಡಲಿಯಲ್ಲಿಯೂ ಪ್ರಚಾರಮಾಡಬೇಕೆಂದು ಕೋರುತ್ತೇನೆ.

ಇತಿ–

ಹೊಳೆನರಸೀಪುರ,
ತಾ|| 10-7-78.

ಅರಕಲಗೂಡು ತಾಂಡವೇಶ್ವರ,
ಅಧ್ಯಕ್ಷ,
ಕಾರ್ಯಕಾರಿಸಮಿತಿ.



ವೇ॥ ಬ್ರ॥ ಶ್ರೀ॥ ಶ್ರೀಕಂಠಘನಪಾಠಿಗಳು.

# ಅರ್ಪಣೆ

ನಂಜನಗೂಡು ಶಂಕರಮಠದ ವೇದಪಾಠಶಾಲಾ ಪ್ರಾಧ್ಯಾಪಕರೂ

ಶ್ರೀ ಕೃಷ್ಣಯಜುರ್ವೇದ ಸಲಕ್ಷಣಘನಾಂತ ಸ್ಮಾರ್ತಪ್ರಯೋಗ
ಉಭಯವಿದ್ವಾಂಸರೂ ಆಗಿದ್ದ

## ಪೂಜ್ಯ ಪಿತೃವರ್ಯರಾದ

ವೇ|| ಬ್ರ|| ಶ್ರೀ|| ಹೊರಂಟೂರು ಶ್ರೀಕಂಠಘನಪಾಠಿಗಳವರ

## ದಿವ್ಯಚರಣಾರವಿಂದಗಳಿಗೆ

ಈ ಗ್ರಂಥವನ್ನು ಭಕ್ತಿಪೂರ್ವಕವಾಗಿ ಸಮರ್ಪಿಸಿದೆ.

# ಪೀಠಿಕೆ

ನಮ್ಮ ಭರತಖಂಡದ ಸಂಸ್ಕೃತಿಯ ಜೀವಾಳವಾದ, ಅತಿ ಪುರಾತನವಾದ ವೇದಗಳಿಗೆ ಇಡಿಯ ನಾಗರಿಕ ಪ್ರಪಂಚದಲ್ಲೆಲ್ಲ ಮನ್ನಣೆಯೂ ಪೂಜ್ಯಸ್ಥಾನವೂ ಇದ್ದುಕೊಂಡಿದೆ. ವೇದ-ಎಂದರೆ ಏತರಿಂದ ತತ್ತ್ವವನ್ನು ಅರಿಯುವರೋ ಅದು-ಎಂಬರ್ಥವು ಪ್ರಸಿದ್ಧವಾಗಿದೆ. ಜ್ಞಾನರಾಶಿಯಾಗಿರುವ ಈ ವೇದವು ಅಪೌರುಷೇಯವೆಂದೇ ಸನಾತನಾರ್ಯರೆಲ್ಲರೂ ನಂಬುತ್ತಾರೆ. ಐತಿಹಾಸಿಕರು ಕೂಡ ವೇದಗಳೇ ಈ ನಾಗರಿಕಜಗತ್ತಿನ ಪ್ರಪ್ರಥಮ ಸಾಹಿತ್ಯವೆಂದು ಒಪ್ಪಿರುತ್ತಾರೆ. ವೇದಗಳನ್ನು ಗುರುಶಿಷ್ಯರ ಪರಂಪರೆಯಿಂದಲೇ ಅಧ್ಯಯನಕ್ರಮದಿಂದ ಕಾಪಾಡಿಕೊಂಡು ಬಂದ ಋಷಿಗಳು ನಮಗೆ ಎಂದೆಂದಿಗೂ ಪೂಜ್ಯರಾಗಿರುತ್ತಾರೆ. ಇಂಥ ಋಷಿಗಳ ಋಣವನ್ನು ತೀರಿಸುವದಕ್ಕಾಗಿ ಪ್ರತಿಯೊಬ್ಬ ದ್ವಿಜನೂ ಸ್ವಲ್ಪವಾದರೂ ವೇದಾಧ್ಯಯನವನ್ನು ಮಾಡಲೇಬೇಕೆಂದೂ ಇದಕ್ಕೆ ಬ್ರಹ್ಮಯಜ್ಞವೆಂದೂ ನಮ್ಮ ಶಾಸ್ತ್ರಗಳಲ್ಲಿ ವಿಧಿಸಿದೆ. ಈ ವೇದಗಳು ಕಿವಿಯಿಂದ ಕೇಳಿ ಮೇಧಾಶಕ್ತಿಯಿಂದ ನೆನಪಿಟ್ಟು ಕಾಪಾಡಿಕೊಂಡು ಬಂದಿರುವ ಸಾಹಿತ್ಯಗಳಾದ್ದರಿಂದ “ಶ್ರುತಿ” ಎಂಬ ಪವಿತ್ರವಾದ ಹೆಸರನ್ನೂ ಇವುಗಳಿಗೆ ಕೊಟ್ಟಿರುತ್ತಾರೆ. ಹೀಗೆ ವೇದಗಳು ಜಗತ್ತಿನ ಜ್ಞಾನಭಂಡಾರಗಳಾಗಿವೆ-ಎಂದು ಹೇಳಬಹುದು.

ಆದರೆ ಕಾಲಕ್ರಮದಲ್ಲಿ ಜನರಿಗೆ ಕಾಮವು ಹೆಚ್ಚಾಗಿದ್ದು-ಅದರಲ್ಲಿಯೂ ಕಲಿಯುಗದಲ್ಲಿ ಈ ವೇದಗಳ ಅಧ್ಯಯನವು ಸರಿಯಾಗಿ ನಡೆಯದೆ ಎಷ್ಟೋ ಭಾಗಗಳು ಲುಪ್ತವಾಗಿಹೋಗಿಬಿಟ್ಟವು. ಕಲಿಯುಗದ ಆದಿಯಲ್ಲಿ ವೇದಗಳನ್ನು ವಿಂಗಡಿಸಿ ಋಕ್ಕು, ಯಜುಸ್ಸು, ಸಾಮ, ಅಥರ್ವಣ- ಎಂದು ಪ್ರವಿಭಾಗ ಮಾಡಿ ವೇದವ್ಯಾಸಮುನಿಗಳು ತಮ್ಮ ಬೇರೆಬೇರೆಯ ಶಿಷ್ಯರಿಗೆ ಅಧ್ಯಯನ ಮಾಡಿಸಿದ್ದರು. ಆದರೆ ಅವುಗಳಲ್ಲಿಯೂ ಶಾಖೋಪಶಾಖೆಗಳುಂಟಾಗಿ ಕ್ಷೀಣವಾಗುತ್ತಲೇ ಬಂದ ಈ ವೇದಗಳು ಈಗ ಮುದ್ರಣಸೌಕರ್ಯಗಳು ದೊರೆತದ್ದರ ಫಲವಾಗಿ ಕೆಲವೇ ಭಾಗಗಳು ಗ್ರಂಥರೂಪವಾಗಿಯಾದರೂ ಉಳಿದುಕೊಂಡಿವೆ. ಎಲ್ಲೋ ಕೆಲವೇ ಜನರು ವೇದಾಧ್ಯಯನಸಂಪನ್ನರು ಈಗ ಭಾರತದೇಶದಲ್ಲಿ ದೊರಕುತ್ತಾರೆ. ಹೀಗಿದ್ದರೂ ರಾಮೇಶ್ವರದಿಂದ ಬದರೀಕ್ಷೇತ್ರದವರೆಗೂ

ಹಿಂದೂಗಳಲ್ಲಿ ಇನ್ನೂ ಕೆಲವು ವೈದಿಕಕರ್ಮಗಳೂ ಅನುಷ್ಠಾನಗಳೂ ಪ್ರಚಾರ ದಲ್ಲಿದ್ದುಕೊಂಡಿವೆ. ಇವುಗಳನ್ನು ಪುನರುಜ್ಜೀವನಗೊಳಿಸಲು ಕೆಲವು ಸನಾತನ ಧರ್ಮಾಭಿಮಾನಿಗಳು ಪ್ರಯತ್ನಪಡುತ್ತಲೇ ಇದ್ದಾರೆ. ಆದರೂ ಅಪಾರವಾದ ವೇದಗಳ ದೃಷ್ಟಿಯಿಂದ ಈ ಪ್ರಯತ್ನಗಳು ಏನೇನೂ ಸಾಲದಾಗಿವೆ. ಭಗವ ದನುಗ್ರಹದಿಂದಲೇ ವೇದಪುರುಷನ ಪುನರುದ್ಧಾರವಾಗಬೇಕಾಗಿದೆ- ಎಂದು ಮಾತ್ರ ಹೇಳಬಹುದು.

ಪ್ರಕೃತ- ಯಜುರ್ವೇದವು ಕರ್ಮಗಳ ಸ್ವರೂಪವನ್ನು ತಿಳಿಸಿ ಅವುಗಳ ನ್ನು ವಿಧಿಸುತ್ತದೆ. ಆದ್ದರಿಂದ ವೇದಗಳಲ್ಲಿ ಪ್ರಧಾನವಾದದ್ದಾಗಿದೆ. ಯಜಸ್ಸು ಎಂದರೆ ಗದ್ಯವು. ಇದರ ಹೆಚ್ಚು ಭಾಗವು ಗದ್ಯರೂಪವಾಗಿರುವದರಿಂದ ಈ ಭಾಗವನ್ನು ಯಜುರ್ವೇದವೆಂದೇ ಕರೆಯಲಾಗಿದೆ. ಈ ಯಜುರ್ವೇದದ ೮೬ ಶಾಖೆಗಳಲ್ಲಿ ಬಹಳಮಟ್ಟಿಗೆ ಎಲ್ಲವೂ ಲುಪ್ತವಾಗಿದ್ದು ಈಗ ಅಧ್ಯಯನ ಪರಂಪರೆಯಲ್ಲಿ ಕಂಡುಬರುತ್ತಿರುವದು ತೈತ್ತಿರೀಯ ಶಾಖೆ-ಮಾತ್ರವಾಗಿದೆ. ಇದರಲ್ಲಿ ಸಂಹಿತೆ, ಬ್ರಾಹ್ಮಣ, ಆರಣ್ಯಕಗಳೆಂಬ ಮೂರು ಭಾಗಗಳಿವೆ. ಆರಣ್ಯಕಗಳ ಕೊನೆಯಲ್ಲಿಯೇ ಉಪನಿಷತ್ತುಗಳಿವೆ. ಸಂಹಿತಾಭಾಗವನ್ನು ಅಧ್ಯಯನಸೌಕರ್ಯಕ್ಕಾಗಿ ಏಳು ಕಾಂಡಗಳೆಂದು ವಿಂಗಡಿಸಿದ್ದಾರೆ. ಮಂತ್ರ ದ್ರಷ್ಟಾರರಾದ ಋಷಿಗಳ ದೃಷ್ಟಿಯಿಂದ ಪ್ರಾಜಾಪತ್ಯಾದಿ ಐದು ಕಾಂಡ ಗಳೆಂದೂ ವಿಭಾಗಮಾಡಲಾಗಿದೆ. ಇವುಗಳಲ್ಲಿ ಆಗ್ನೇಯಕಾಂಡಕ್ಕೆ ಸೇರಿದ್ದು ನಾಲ್ಕನೆಯ ಕಾಂಡದ ಐದನೆಯ ಪ್ರಶ್ನರೂಪವಾದ ರುದ್ರಾಧ್ಯಾಯವು ಈ ಗ್ರಂಥದ ವಿಷಯವಾಗಿದೆ. ಈಗಿನ ಸಂದರ್ಭದಲ್ಲಿ ವೈದಿಕರೆಲ್ಲರೂ ಈ ರುದ್ರಾ ಧ್ಯಾಯವನ್ನು ಸರಿಸಮಾನವಾಗಿ ಎಂದರೆ ಋಗ್-ಯಜು-ಸ್ಸಾಮವೇದಿಗಳೆಲ್ಲ ರೂ ಅಧ್ಯಯನ ಮಾಡುತ್ತಿದ್ದಾರೆ. ಈ ಮಂತ್ರಗಳಿಂದಲೇ ಈಶ್ವರನಿಗೆ ಅಭಿ ಷೇಕಾರ್ಚನೆಗಳು, ರುದ್ರಹೋಮವೇ ಮುಂತಾದ ಪವಿತ್ರಕಾರ್ಯಗಳನ್ನು ನೆರವೇರಿಸುತ್ತಿದಾರೆ. ಉಪನೀತನಾದ ಬ್ರಹ್ಮಚಾರಿಗೆ ಮೊದಮೊದಲಿಗೆ ಈ ಮಂತ್ರಗಳನ್ನೇ ಅಧ್ಯಯನಮಾಡಿಸುತ್ತಾರೆ. ಹೀಗೆ ಇನ್ನೂ ಪ್ರಚಾರದಲ್ಲಿರುವ ಈ ರುದ್ರಭಾಗಕ್ಕೆ ಅರ್ಥವಿವರಣೆಗಳನ್ನು ಕನ್ನಡದಲ್ಲಿ ಬರೆದರೆ ಜನರಿಗೆ ಉಪ ಯುಕ್ತವಾದೀತೆಂದು ಭಾವಿಸಿ ಈ ಪ್ರಯತ್ನವನ್ನು ಕೈಗೊಳ್ಳಲಾಯಿತು.

ಶತರುದ್ರಿಯವೆಂದು ಪ್ರಸಿದ್ಧವಾಗಿರುವ ಈ ರುದ್ರಾಧ್ಯಾಯವು ಅಮೃತತ್ವ ಸಾಧನವೆಂದು ಜಾಬಾಲೋಪನಿಷತ್ತಿನಲ್ಲಿ ತಿಳಿಸಿದೆ. ನಿತ್ಯಮುಕ್ತನಾದ ಪರಮೇಶ್ವರನ ನಾಮಧೇಯಗಳಿಂದ ಕೂಡಿದ ಈ ಶತರುದ್ರಿಯಮಂತ್ರಜಪವೇ ಮೋಕ್ಷಪ್ರಾಪ್ತಿಗೆ ಸಾಧನವೆಂದು ಅಲ್ಲಿ ವಿವರಿಸಿದೆ. ಬ್ರಹ್ಮಹತ್ಯಾದಿ ಮಹಾಪಾತಕಗಳೂ ಉಪಪಾತಕಗಳೂ ಈ ಮಂತ್ರಜಪಮಾತ್ರದಿಂದ ನಾಶವಾಗುವವೆಂದು ಕೈವಲ್ಯೋಪನಿಷತ್ತಿನಲ್ಲಿಯೂ ತಿಳಿಸಿದೆ. ಒಂದಾನೊಂದು ಕಾಲದಲ್ಲಿ ರುದ್ರಜಪದಿಂದ ಸಕಲರ ಪಾಪಗಳೂ ನಷ್ಟವಾಗಿ ಪಾಪಿಗಳೇ ಇಲ್ಲದ್ದರಿಂದ ಚಿತ್ರಗುಪ್ತ, ಯಮ–ಮುಂತಾದವರಿಗೆ ಕೆಲಸವೇ ಇಲ್ಲವಾಯಿತಂತೆ. ಈ ವಿಚಾರವನ್ನು ಬ್ರಹ್ಮದೇವರಲ್ಲಿ ತಿಳಿಸಲಾಗಿ ಆಗ ಬ್ರಹ್ಮನಿಂದ ಅಪ್ಪಣೆ ಮಾಡಲ್ಪಟ್ಟ ಅಶ್ರದ್ಧೆ, ಅನಾಚಾರಗಳೇ ಮುಂತಾದವುಗಳು ಲೋಕವನ್ನು ರುದ್ರವಿಮುಖವನ್ನಾಗಿ ಮಾಡಿದವು ; ಆಗ ಪಾಪಿಗಳ ಸಂಖ್ಯೆ ಏರಲಾರಂಭಿಸಿತು –ಎಂದು ಬ್ರಹ್ಮೋತ್ತರಖಂಡದಲ್ಲಿ ಒಂದು ಕಥೆಯಿದೆ. ಹೀಗೆ ಈ ಶತರುದ್ರಿಯದ ಮಹಿಮೆಯನ್ನು ನಾನಾರೀತಿಯಿಂದ ಹೊಗಳುವ ಅನೇಕ ಕಥೆಗಳು ಪುರಾಣಗಳಲ್ಲಿ ಕಂಡುಬರುತ್ತವೆ. ಅಂತೂ ಈ ರುದ್ರಮಂತ್ರಗಳು ಪರಮಪವಿತ್ರವೂ ಪಾಪನಾಶಕಗಳೂ ಆಗಿರುವವೆಂಬುದರಲ್ಲಿ ಸಂಶಯವಿಲ್ಲ.

ಈ ರುದ್ರಾಧ್ಯಾಯದ ಅನುವಾಕಗಳನ್ನು ಮೂರು ವಿಭಾಗವಾಗಿ, ಅಥವಾ ಮಂತ್ರಗಳನ್ನು ಮೂರು, ಆರು, ಹದಿನಾರು, ನಲವತ್ತೆಂಟು, ನೂರ ಅರವತೊಂಭತ್ತು–ಈ ರೀತಿ ಆರುವಿಧವಾಗಿ ವಿಭಾಗಮಾಡಿ ಹೋಮಮಾಡಬಹುದು. ಹನ್ನೊಂದು ಜನ ಋತ್ವಿಜರು ಮೊದಲು ಹನ್ನೊಂದಾವರ್ತಿ ರುದ್ರಪಾರಾಯಣಮಾಡಿದರೆ ೧೨೧ ಜಪವಾಗುವದು. ಅನಂತರ ಅದರ ಹತ್ತನೆಯ ಒಂದು ಭಾಗ ಹೋಮವು ನಡೆಯುವದು. ಅನಂತರ ಚಮಕ ಮಂತ್ರದಿಂದ ವಸೋರ್ಧಾರೆಯು ನಡೆಯುವದು. ಈ ರೀತಿ ನಡೆಯುವ ಹೋಮವನ್ನು 'ರುದ್ರೈಕಾದಶಿನೀ' ಅಥವಾ 'ರುದ್ರಹೋಮ'ವೆನ್ನುವರು. "ಷಡಂಗೈಕಾದಶೀ ರುದ್ರೋ ರುದ್ರೈಕಾದಶರುದ್ರತಃ । ಏಕಾದಶಭಿರೇತಾಭಿಃ ಮಹಾರುದ್ರಶ್ಚ ಕಥ್ಯತೇ । ಏಕಾದಶಮಹಾರುದ್ರೈರತಿರುದ್ರ ಇತೀರಿತಃ" ಎಂಬ ವಚನದಂತೆ ಈ ರುದ್ರಹೋಮವು ಹನ್ನೊಂದಾವರ್ತಿಯಾದರೆ ಮಹಾರುದ್ರವು. ಈ ಮಹಾರುದ್ರವು ಹನ್ನೊಂದುಸಲ ಆಚರಿಸಲ್ಪಟ್ಟರೆ ಅತಿರುದ್ರವು

-ಎನಿಸಿಕೊಳ್ಳುವದು. ಅಂತೂ ಈಗಿನ ಕಾಲದಲ್ಲಿಯೂ ಈ ಅನುಷ್ಠಾನವು ಆಗಾಗ್ಗೆ ಅಲ್ಲಲ್ಲಿ ನಡೆಯುವದು ಕಂಡುಬರುತ್ತಿದೆ. ಇದಲ್ಲದೆ ಒಂದೊಂದೇ ಮಂತ್ರವನ್ನೇ ಬೇರೆಬೇರೆಯ ಇಷ್ಟಾರ್ಥಸಿದ್ಧಿಗಾಗಿ ಹೋಮಮಾಡಬಹು ದೆಂದೂ ಕೆಲವು ಸ್ಮೃತಿಗಳಲ್ಲಿ ತಿಳಿಸಿದ್ದಾರೆ. ಶಾಂತಿ, ಪುಷ್ಟಿ, ತುಷ್ಟಿ, ಆರೋಗ್ಯ, ಪುತ್ರಪ್ರಾಪ್ತಿ, ಶತ್ರುನಾಶ, ಐಶ್ವರ್ಯ, ಜನಸಂಗ್ರಹ, ಭಯ ನಾಶವೇ-ಮುಂತಾದ ಅನೇಕಫಲಗಳನ್ನು ಉದ್ದೇಶಿಸಿ ಈ ಮಂತ್ರಗಳಲ್ಲಿ ಕೆಲವನ್ನು ಆರಿಸಿಕೊಂಡು ಪುರಶ್ಚರಣೆಮಾಡಿ ಹೋಮಮಾಡುವ ಪದ್ಧತಿಗಳ ನ್ನೂ ಅಲ್ಲಲ್ಲಿ ತಿಳಿಸಿರುತ್ತದೆ. ಹೀಗೆ ಕಾಮ್ಯವಾಗಿಯೂ ಈ ಮಂತ್ರಗಳನ್ನು ಉಪಯೋಗಿಸಬಹುದಾಗಿದೆ.

ಈ ಮಂತ್ರಗಳು ಉಪನಿಷತ್ತುಗಳ ಸಾರವಾಗಿವೆಯಾದ್ದರಿಂದಲೂ ಆತ್ಮಾ ಶ್ರಮಿಗಳಾದ ಸಂನ್ಯಾಸಿಗಳೂ ಇವುಗಳನ್ನು ಜಪಮಾಡಬೇಕೆಂತ ಕೆಲವು ವಚನಗಳು ತಿಳಿಸುವದರಿಂದಲೂ ಇದರ ಮಹಿಮೆಯು ಎಷ್ಟು ಹೆಚ್ಚಿನದೆಂಬುದು ಗೊತ್ತಾಗುವದು. 'ಶ್ರೀರುದ್ರಂ ಪ್ರಣವಂ ಚೈವ ನಿತ್ಯಮಾವರ್ತಯೇದ್ ಯತಿಃ' ಎಂಬ 'ವಿಶ್ವೇಶ್ವರಸ್ಮೃತಿ' ವಾಕ್ಯವು ಇದಕ್ಕೆ ಪ್ರಮಾಣವಾಗಿದೆ. ವೇದ ಗಳನ್ನೇ ಸಂನ್ಯಾಸಮಾಡಿರುವ ಯತಿಗಳೂ ಈ ಶತರುದ್ರಿಯಮಂತ್ರಗಳನ್ನು ಆವರ್ತನೆಮಾಡಬೇಕೆಂದು ತಿಳಿಸಿರುವದರ ಉದ್ದೇಶವೇನೆಂದರೆ : ಈ ಮಂತ್ರ ಗಳಲ್ಲಿ ಸಾಕ್ಷಾದ್ ಪರಬ್ರಹ್ಮವನ್ನೇ ರುದ್ರನೆಂಬ ಹೆಸರಿನಿಂದ ನಾನಾರೂಪ ಗಳಲ್ಲಿ ಸ್ತುತಿಸಿರುವದೇ ಆಗಿದೆ. ಈ ಅರ್ಥದಲ್ಲಿ ಬ್ರಹ್ಮಾನುಸಂಧಾನಕ್ಕೆ ಈ ರುದ್ರಮಂತ್ರಗಳು ಸಂಪೂರ್ಣವಾಗಿ ಉಪಯುಕ್ತವಾಗಿರುವವು. ಮತ್ತು 'ಯಾವನು ಶ್ರದ್ಧೆಯಿಂದ ಶತರುದ್ರಿಯವನ್ನು ಪಠನಮಾಡುವನೋ ಅವನು ಜ್ಞಾನವನ್ನು ಹೊಂದಿ ಪರಮಗತಿಯನ್ನೈದುವನು' ಎಂಬ ಸೂತಸಂಹಿತಾ ವಾಕ್ಯವೂ ಈ ವಿಚಾರವನ್ನು ತಿಳಿಸುತ್ತದೆ. ಇಂಥ ಸರ್ವವೇದಸಾರಭೂತ ವಾದ ಶತರುದ್ರಿಯವು ಜಪಾರ್ಚನಾಭಿಷೇಕಹೋಮಗಳಲ್ಲಿ ವಿನಿಯುಕ್ತ ವಾಗಿದೆ. ರುದ್ರನಿಗೆ ಘೋರ, ಅಘೋರ-ಎಂಬ ಎರಡು ಶರೀರಗಳಿದ್ದು ಅವು ಗಳಲ್ಲಿ ಘೋರಶರೀರವು ಈ ರುದ್ರಹೋಮದಿಂದ ಶಾಂತವಾಗುವದೆಂದೂ ಪಾಪಕ್ಷಯ, ಆಯುರಾರೋಗ್ಯಾದಿ ಅನೇಕಫಲಗಳು ಈ ಹೋಮಜಪಾ ರ್ಚನಾದಿಗಳಿಂದ ದೊರಕುವದೆಂದೂ ಸ್ಮೃತಿಗಳಲ್ಲಿ ತಿಳಿಸಿರುತ್ತದೆ.

ಈಗ ರುದ್ರಾಧ್ಯಾಯಮಂತ್ರಗಳ ಅರ್ಥವನ್ನು ಸ್ವಲ್ಪ ಒಳಹೊಕ್ಕು ನೋಡೋಣ. ಇಲ್ಲಿ ರುದ್ರನಿಗೆ ತ್ರಿಶೂಲ, ಖಡ್ಗ– ಮುಂತಾದವುಗಳನ್ನು ಆಯುಧಗಳಾಗಿ ವರ್ಣಿಸದೆ ಬಹುಮುಖ್ಯವಾಗಿ ಬಿಲ್ಲುಬಾಣಗಳನ್ನೇ ಆಯುಧಗಳನ್ನಾಗಿ ವರ್ಣಿಸಿರುತ್ತದೆ. ಬಾಣಗಳನ್ನು ಶಾಂತಗೊಳಿಸುವಿಕೆ, ಧನುಸ್ಸಿನ ಹಗ್ಗವನ್ನು ಸಡಿಲಿಸುವಿಕೆ–ಮುಂತಾದ ರೀತಿಯಿಂದ ರುದ್ರನನ್ನು ಸಮಾಧಾನಗೊಳಿಸುವ ಪ್ರಾರ್ಥನೆಗಳೇ ಹೆಚ್ಚಾಗಿವೆ. ಇದರ ತಿರುಳೇನೆಂದರೆ : ಪುರಾಣಗಳಲ್ಲಿ ರುದ್ರನು ತ್ರಿಪುರಾಸುರರನ್ನು ಸಂಹಾರಮಾಡಿದನೆಂಬ ಕಥೆಯು ಪ್ರಸಿದ್ಧವಾಗಿದೆಯಷ್ಟೆ! ಆಧ್ಯಾತ್ಮಿಕವಾಗಿ ಆ ಕಥೆಯನ್ನು ಹೀಗೆ ವಿವರಿಸಬಹುದು. ಪುರವೆಂದರೆ ವಾಸಸ್ಥಾನ. ಜೀವನಿಗೆ ಸ್ಥೂಲಸೂಕ್ಷ್ಮಕಾರಣಗಳೆಂಬ ಶರೀರಗಳೇ ವಾಸಸ್ಥಾನಗಳು. ತ್ರಿಪುರಗಳೆಂದರೆ ಇವೇ. ಇನ್ನು ಅಸುರ ಎಂದರೆ ದುಃಖಪ್ರದವಾದದ್ದು. ಎಲ್ಲಿಯವರೆಗೆ ಈ ಮೂರು ಪುರಗಳು ಜೀವನಿಗೆ ಇರುವವೋ ಅಲ್ಲಿಯವರೆಗೂ ದುಃಖವು ತಪ್ಪಲಾರದು. ಆದ್ದರಿಂದ ಇಂಥ ತ್ರಿಪುರಾಸುರರ ದಾಹವು (ಸುಡುವಿಕೆಯು) ಬಾಣಪ್ರಯೋಗದಿಂದ ಆಗಬೇಕು. ಇಲ್ಲಿ ವಿಷ್ಣುವೇ ಬಾಣವು. ವಿಷ್ಣುವೆಂದರೆ ವ್ಯಾಪಕನೆಂದರ್ಥ. ಆತ್ಮನು ವ್ಯಾಪಕನಾಗಿರುವದರಿಂದ 'ಶರೋ ಹ್ಯಾತ್ಮಾ' ಎಂಬ ಉಪನಿಷದ್ವಚನದಂತೆ ಆತ್ಮನೆಂಬ ಬಾಣದಿಂದಲೇ ತ್ರಿಪುರದಾಹವು ಸಂಭವಿಸುತ್ತದೆ. ಆತ್ಮಜ್ಞಾನವೆಂಬುದೇ ಇಲ್ಲಿ ಬಾಣಪ್ರಯೋಗವು. ಜ್ಞಾನವನ್ನು ಅಗ್ನಿಯೆಂದೂ ವರ್ಣಿಸಿರುವದು ಪ್ರಸಿದ್ಧವೇ ಆಗಿರುವದು. ಹೀಗೆ ಬ್ರಹ್ಮವೆಂಬ ಲಕ್ಷ್ಯದಲ್ಲಿ ಆತ್ಮನೆಂಬ ಬಾಣವನ್ನು ಹೊಗಿಸಿ ತನ್ಮಯನಾದೊಡನೆಯೇ ಜ್ಞಾನಾಗ್ನಿಯ ಆವಿರ್ಭಾವವಾಗಿ ತ್ರಿಪುರಗಳೆಂಬ ಸಂಸಾರದ ದಾಹವಾಗಿ ಬಿಡುವದು. ಇದು ಪರಮೇಶ್ವರನ ದಯೆಯಿಂದ ಮಾತ್ರ ಸಾಧ್ಯ. ಇಂಥ ತ್ರಿಪುರಸಂಹಾರತತ್ತ್ವವನ್ನು ಬೋಧಿಸಲು ಧನುರ್ಬಾಣಗಳನ್ನೇ ಇಲ್ಲಿ ಮುಖ್ಯವಾದ ಆಯುಧಗಳನ್ನಾಗಿ ಪರಿಗಣಿಸಿ ಪರಮೇಶ್ವರನಾದ ರುದ್ರನನ್ನು ಸ್ತುತಿಸಿವೆ.

ಇನ್ನು ಈ ಮಂತ್ರಗಳಲ್ಲಿ ಪರಮೇಶ್ವರನ ಸರ್ವೈಶ್ವರ್ಯ, ಸರ್ವಾತ್ಮಕತ್ವ, ಸರ್ವಾಂತರ್ಯಾಮಿತ್ವಾದಿ ಮಹಿಮಾವಿಶೇಷಗಳನ್ನು ಬಾಯಿತುಂಬ ಹೊಗಳಿರುತ್ತದೆ. ಇವುಗಳನ್ನೆಲ್ಲ ಆಯಾ ಮಂತ್ರವಿವರಣೆಯ ಭಾಗದಿಂದಲೇ ವಾಚಕರು ಅರಿತುಕೊಳ್ಳಬಹುದಾಗಿದೆ. ನೀಲಗ್ರೀವತ್ವ, ಪಿನಾಕಪಾಣಿತ್ವವೇ

ಮುಂತಾದ ವಿಶೇಷಣಗಳಿಂದ ಭಕ್ತಾನುಗ್ರಹತತ್ಪರತೆ, ಭವಸ್ಯ ಹೇತ್ಯೈ- ಮುಂತಾದ ಸ್ತುತಿಗಳಲ್ಲಿ ಸಂಸಾರಕಾರಣನಾಗಿರುವಿಕೆ, ಭವಾಯ, ರುದ್ರಾಯ, ಶರ್ವಾಯ, ಮುಂತಾದ ಸ್ತೋತ್ರಗಳಿಂದ ಜಗತ್ತಿನ ಉತ್ಪತ್ತಿಸ್ಥಿತಿಲಯ ಕರ್ತೃತ್ವಗಳು- ಹೀಗೆ ಪರಮೇಶ್ವರನ ನಾನಾವಿಧವಾದ ಗುಣಕರ್ಮಲೀಲೆ ಗಳನ್ನು ಇಲ್ಲಿ ಕೊಂಡಾಡಿರುತ್ತದೆ.

ಈಗ ರುದ್ರ, ಶಿವ ಎಂಬೀ ಎರಡು ನಾಮಗಳ ಮಹಿಮೆಯನ್ನು ಸ್ವಲ್ಪ ವಿಚಾರಮಾಡಬಹುದಾಗಿದೆ. ಭಗವಂತನಾದ ರುದ್ರನಿಗೆ ನಾಮರೂಪವಿಶಿಷ್ಟ ವಾದ ರೂಪವೊಂದು, ನಾಮರೂಪಗಳಿಲ್ಲದ ಸ್ವರೂಪವೊಂದು- ಹೀಗೆ ಎರಡು ವಿಧವಾದ ರೂಪಗಳಿವೆ. ಸ್ವತಃ ನಿರ್ಗುಣನೂ ನಾಮರೂಪಾತೀತನೂ ಆಗಿ ದ್ದರೂ ಪರಮೇಶ್ವರನು ತನ್ನ ಇಚ್ಛಾವಶದಿಂದ ಮಾಯಾಮಯವಾದ ರೂಪ ವನ್ನು ಸಾಧಕರ ಅನುಗ್ರಹಕ್ಕಾಗಿ ಸ್ವೀಕರಿಸಬಹುದು- ಎಂದು ಶ್ರೀ ಶಂಕರಾ ಚಾರ್ಯರು ತಮ್ಮ ಭಾಷ್ಯಗ್ರಂಥಗಳಲ್ಲಿ ತಿಳಿಸಿರುತ್ತಾರೆ. ಇಂಥ ಮಾಯಾ ವಿಶಿಷ್ಟವಾದ ಉಪಾಧಿಗಳ ಅಪೇಕ್ಷೆಯಿಂದಲೇ ರುದ್ರ, ಶಿವ-ಮುಂತಾದ ಹೆಸರು ಗಳು ಭಗವಂತನ ವಿಷಯಕ್ಕೆ ವ್ಯವಹೃತವಾಗುತ್ತವೆ. ರುದ್ರಶಬ್ದದ ಅರ್ಥ ವನ್ನು ಅದರ ವ್ಯುತ್ಪತ್ತಿಯನ್ನು ಬಲ್ಲವರು ನಾನಾವಿಧವಾಗಿ ವರ್ಣಿಸಿರುತ್ತಾರೆ. ಕೆಲವನ್ನು ಇಲ್ಲಿ ಉದಾಹರಿಸುವೆನು.

(೧) ರುದಂ ಸಂಸಾರದುಃಖಂ ದ್ರಾವಯತಿ ನಾಶಯತೀತಿ ರುದ್ರಃ- ಎಂದರೆ ಸಂಸಾರವೆಂಬ ಸುಖದುಃಖಭೋಗರೂಪವಾದ ಕರ್ಮಫಲಗಳ ಸಂತಾನ ವನ್ನು ನಾಶಗೊಳಿಸುವವನಾದ್ದರಿಂದ ರುದ್ರನು. ಸಂಸಾರದುಃಖನಾಶಕನೆಂದು ಅಭಿಪ್ರಾಯ. (೨) ರುತಿಂ ಶಬ್ದಂ ವೇದರೂಪಂ ರಾತಿ ದದಾತೀತಿ ರುದ್ರಃ- ಎಂದರೆ ಶಬ್ದರೂಪವಾದ ವೇದರಾಶಿಯನ್ನು ಜಗತ್ತಿಗೆ ಅನುಗ್ರಹಿಸಿದವನು ರುದ್ರನು- ಎಂದೂ ಹೇಳಬಹುದು. 'ಯೋ ವೈ ವೇದಾಂಶ್ಚ ಪ್ರಹಿಣೋತಿ' ಎಂದು ಉಪನಿಷತ್ತಿನಲ್ಲಿ ತಿಳಿಸಿರುವಂತೆ ಜಗತ್‌ಸೃಷ್ಟಿಯ ಆದಿಕಾಲದಲ್ಲಿ ಚತುರ್ಮುಖಬ್ರಹ್ಮನಿಗೆ ವೇದಗಳನ್ನು ಅನುಗ್ರಹಿಸಿದವನು-ಎಂದಭಿಪ್ರಾಯ. (೩) 'ರುತ್ ರೋಧಿಕಾ ಬಂಧಿಕಾ ಮೋಹಿಕಾ ಶಕ್ತಿಃ ತದ್ವಾನ್ ರುದ್ರಃ' ಎಂಬ ವ್ಯುತ್ಪತ್ತಿಯಂತೆ ರೋಧಕ (ತಡೆಯುವಿಕೆ) ಬಂಧಕ (ಕಟ್ಟಿಹಾಕುವಿಕೆ) ಮೋಹಕ (ಮೋಹವುಂಟುಮಾಡುವಿಕೆ)- ಈ ಶಕ್ತಿಗಳುಳ್ಳವನು. ಪಾಪಿ ಗಳನ್ನು ಬಂಧಿಸುವವನೂ ಮೋಹಗೊಳ್ಳುವಂತೆ ಮಾಡುವವನೂ ಭಕ್ತರನ್ನು

ಪಾಪಗಳಿಂದ ತಡೆದು ನರಕದಿಂದ ಎತ್ತಿ ಉದ್ಧರಿಸುವವನೂ ರುದ್ರನೇ ಎಂದಭಿಪ್ರಾಯವಾಗುತ್ತದೆ. (೪) 'ರುತ್ಯಾ ವೇದರೂಪಯಾ ಧರ್ಮಾದೀನವ ಲೋಕಯತಿ ಪ್ರಾಪಯತೀತಿ ವಾ ರುದ್ರಃ'- ಎಂದರೆ ವೇದರೂಪವಾದ ವಾಕ್ಕಿನಿಂದ ಧರ್ಮಾಧರ್ಮಗಳನ್ನು ನಿಯಮನಮಾಡುತ್ತಾ ಅವುಗಳಿಗೆ ತಕ್ಕಂತೆ ಫಲವನ್ನು ಕೊಡುವವನು - ಎಂದೂ ಅರ್ಥಮಾಡಬಹುದಾಗಿದೆ. (೫) 'ರುತ್ಯಾ ಪ್ರಣವರೂಪಯಾ ಸ್ವಾತ್ಮಾನಂ ಪ್ರಾಪಯತೀತಿ ರುದ್ರಃ'- ಎಂದರೆ ಓಂಕಾರರೂಪವಾದ ಶಬ್ದದಿಂದ ಸ್ವಸ್ವರೂಪನೇ ಆದ ಆತ್ಮನನ್ನು ಪಡೆಯುವಂತೆ ಪ್ರೇರಿಸುವವನು-ಎಂದೂ ಅರ್ಥಮಾಡಬಹುದು. ಹೀಗೆ ರುದ್ರಶಬ್ದಕ್ಕೆ ನಾನಾವಿಧವಾದ ಅರ್ಥವಿಶೇಷಗಳನ್ನು ತಿಳಿದವರು ವರ್ಣಿಸುತ್ತಾರೆ. ಅಂತೂ ಎಲ್ಲಾ ಅರ್ಥಗಳಿಂದಲೂ ತಿಳಿದುಬರುವದೇನೆಂದರೆ : ಸರ್ವಾತ್ಮಕನಾದ ಪರಬ್ರಹ್ಮನೇ ರುದ್ರನು- ಎಂಬೀ ವಿಷಯದಲ್ಲಿ ಸಂಶಯವಿಲ್ಲ.

ಈಗ ಶಿವಶಬ್ದದ ಅರ್ಥವನ್ನು ಸ್ವಲ್ಪ ವಿಚಾರಮಾಡಬಹುದಾಗಿದೆ. ಏಕೆಂದರೆ ಈ ರುದ್ರಾಧ್ಯಾಯದ 'ನಮಃ ಸೋಮಾಯ' ಎಂಬ ಅನುವಾಕದಲ್ಲಿ 'ನಮಃ ಶಿವಾಯ' ಎಂಬ ಪಂಚಾಕ್ಷರೀಮಂತ್ರವು ಬಂದಿದೆ. ಆದ್ದರಿಂದ ಆ ಪರಮಮಂತ್ರದಲ್ಲಿ ಅಡಕವಾಗಿರುವ 'ಶಿವ' ಶಬ್ದದ ಮೀಮಾಂಸೆಯು ಅವಶ್ಯವಾಗಿರುತ್ತದೆ. (೧) ಶಿವ ಎಂದರೆ ಹದಿನಾರು ಶಿವಗುಣಗಳು ಉಳ್ಳವನು ಎಂದರ್ಥ. ಹೇಗೆಂದರೆ : ಸರ್ವಜ್ಞತ್ವ, ತೃಪ್ತಿ, ಅನಾದಿಜ್ಞಾನ, ಸ್ವಾತಂತ್ರ್ಯ, ಅಲುಪ್ತಶಕ್ತಿ, ಅನಂತಶಕ್ತಿ- ಈ ಆರಕ್ಕೂ ಷಡಂಗಗಳೆಂದು ಹೆಸರು. ಜ್ಞಾನ, ವೈರಾಗ್ಯ, ಐಶ್ವರ್ಯ, ತಪಸ್ಸು, ಸತ್ಯ, ಕ್ಷಮೆ, ಧೃತಿ, ಸ್ರಷ್ಟೃತ್ವ, ಆತ್ಮಜ್ಞಾನ, ಅಧಿಷ್ಠಾತೃತ್ವ- ಈ ಹತ್ತಕ್ಕೆ ಅವ್ಯಯಗಳೆಂದು ಹೆಸರು. ಈ ಹದಿನಾರು ಶಿವಗುಣಗಳಿರುವದರಿಂದ ಭಗವಂತನಿಗೆ 'ಶಿವ'ನೆಂಬ ಹೆಸರು ಬಂದಿದೆ. (೨) ಆಣವ, ಕಾರ್ಮಣ, ಮಾಯೇಯ- ಎಂಬ ಮೂರುಬಗೆಯ ಮಲವೂ ಇಲ್ಲದೆ ಶುದ್ಧನಾಗಿರುವದರಿಂದಲೂ ಶಿವನೆಂಬ ಹೆಸರು ಬಂದಿದೆ- ಎಂದೂ ಹೇಳಬಹುದು. ಅಣು ಎಂದರೆ ಜೀವನು. ಅವನಿಗೆ ಜೀವತ್ವವನ್ನುಂಟುಮಾಡಿರುವ ಅನಾದಿಯಾದ ಅವಿದ್ಯೆಯೇ ಆಣವಮಲವೆನಿಸುತ್ತದೆ. ಅನಾದಿಯಾದ ಕರ್ಮಫಲವಾಸನೆಯೇ ಕಾರ್ಮಣಮಲವು. ಇದಾನೆ, ಬೆಳಗುತ್ತಾನೆ -ಎಂಬ ವ್ಯವಹಾರಕ್ಕೆ ತಕ್ಕವನಾದರೂ ಇಲ್ಲ, ತೋರುವದಿಲ್ಲ-ಎಂಬ ರೀತಿ

ಯಿಂದ ವ್ಯವಹಾರವಾಗುವಂತೆ ಮಾಡಿರುವ ಆವರಣವೇ ಮಾಯೇಯ ಮಲವು. ಈ ಮಲತ್ರಯವು ಇಲ್ಲದ್ದರಿಂದ ಪರಿಶುದ್ಧನಾಗಿರುವ ಪರಮೇಶ್ವರ ನಿಗೆ ಶಿವನೆಂದು ಹೆಸರು- ಎಂದು ಶಿವಾಗಮಜ್ಞರು ಹೇಳುತ್ತಾರೆ. (೩) ಈತ ನನ್ನೇ ಜಗತ್ತೆಲ್ಲವೂ ಆಧಾರವಾಗಿ ಮಾಡಿಕೊಂಡಿರುವುದರಿಂದ (ಶೇತೇ ಅಸ್ಮಿನ್ ಇತಿ ಶಿವಃ) ಈತನಿಗೆ ಶಿವನೆಂದು ಹೆಸರು. (೪) ಅಥವಾ ಲೋಕ ಹಿತವನ್ನು ಬಯಸುತ್ತಾನಾದ್ದರಿಂದ ಶಿವನು (ವಷ್ಟೀತಿ ಶಿವಃ) 'ವಶಕಾನ್ತೌ ಶಿವಃ ಸ್ಮೃತಃ । ಕಾಂತಿರಿಚ್ಛಾ'- ಎಂಬ ವಿವರಣೆಯಂತೆ ವಶ್-ಬಯಸು ಎಂಬ ಧಾತುವಿನಿಂದ ಶಿವನೆಂದು ಆಗಿರುತ್ತದೆ ಎಂದೂ ಬಲ್ಲವರು ಹೇಳುತ್ತಾರೆ. (೫) ಶಿವ-ಎಂದರೆ ಸಕಲರಿಗೂ ಮಂಗಳವನ್ನುಂಟುಮಾಡುತ್ತಾನಾದ್ದರಿಂದ ಶಿವನು ಎಂದೂ ಹೇಳಬಹುದು (ಪುಟ ೯೬ನ್ನು ನೋಡಿರಿ). ಹೀಗೆ ಶಿವನೆಂಬ ಹೆಸರಿನ ಪರಮೇಶ್ವರನು ಈ ರುದ್ರಾಧ್ಯಾಯದಲ್ಲಿ ಪ್ರತಿಪಾದ್ಯನಾಗಿರುವನು. ಸ್ವತಃ ನಿರ್ಗುಣನೂ ನಿರಾಕಾರನೂ ಆದ ಈ ಭಗವಂತನನ್ನು ಉಪನಿಷತ್ತಿನಲ್ಲಿಯೂ 'ಪ್ರಪಂಚೋಪಶಮಂ ಶಾನ್ತಂ ಶಿವಮ್' ಎಂದು ಶಿವಶಬ್ದದಿಂದಲೇ ತಿಳಿಸಿದೆ. ಹೀಗೆ ಶಿವನಾಮವು ಎಲ್ಲಾರೀತಿಯಿಂದಲೂ ಅರ್ಥವತ್ತಾಗಿಯೂ ವೇದಗಳ ಸಾರವಾಗಿಯೂ ರುದ್ರಾಧ್ಯಾಯದ ಮಧ್ಯಮಣಿಯಾಗಿಯೂ ವಿರಾಜಮಾನವಾಗಿದೆ.

ಈ ರುದ್ರಾಧ್ಯಾಯಕ್ಕೆ ಸಾಯಣಾಚಾರ್ಯರ ಭಾಷ್ಯವಲ್ಲದೆ, ಭಟ್ಟ ಭಾಸ್ಕರಭಾಷ್ಯ, ಶ್ರೀಮದಭಿನವ ಶಂಕರಾಚಾರ್ಯಭಾಷ್ಯ- ಎಂಬೀ ಎರಡು ಎರಡು ಭಾಷ್ಯಗಳಿವೆ. ಸಾಯಣಾಚಾರ್ಯರು ಇಡಿಯ ನಾಲ್ಕು ವೇದಗಳಿಗೂ ಭಾಷ್ಯರಚನೆಯನ್ನು ಮಾಡಿರುವ ಮಹನೀಯರು. ಭಟ್ಟಭಾಸ್ಕರರು ಯಜುರ್ವೇದಭಾಷ್ಯಕಾರರು. ಅಭಿನವಶಂಕರರೆಂಬವರು ರುದ್ರಾಧ್ಯಾಯಕ್ಕೆ ಮಾತ್ರ ತಮ್ಮ ಭಾಷ್ಯವನ್ನು ರಚಿಸಿದ್ದಾರೆ. ಇವರು ಯಾರೆಂಬ ಬಗ್ಗೆ ಹೆಚ್ಚಾಗಿ ತಿಳಿದಿಲ್ಲ. ಆದರೂ ಇವರು ಅದ್ವೈತಸಂಪ್ರದಾಯದ ಗ್ರಂಥಕರ್ತರಲ್ಲೊಬ್ಬರಾದ ಭಗವದ್ಗೀತೆಗೆ "ಬ್ರಹ್ಮಾನಂದಗಿರಿ" ಎಂಬ ವ್ಯಾಖ್ಯಾನವನ್ನು ಬರೆದಿರುವ ವೇಂಕಟನಾಥರ ಗುರುಗಳಾಗಿರಬೇಕೆಂದು ಊಹಿಸಲಾಗಿದೆ. ಏಕೆಂದರೆ ವೇಂಕಟನಾಥರು ತಮ್ಮ ಗುರುಗಳನ್ನು ಅಭಿನವಶಂಕರರೆಂದು ಹೇಳಿಕೊಂಡಿದ್ದಾರೆ. ಮತ್ತು ಅವರು ಬರೆದಿರುವ 'ಪಾಷಂಡಗಜಕೇಸರೀ' ಎಂಬ ಗ್ರಂಥ

ವೊಂದನ್ನೂ ಹೆಸರಿಸಿರುತ್ತಾರೆ. ಈ ಗ್ರಂಥದ ಹೆಸರು ರುದ್ರಭಾಷ್ಯದಲ್ಲಿಯೂ 'ನಮಃ ಸಸ್ಪಿಂಜರಾಯ ತ್ವಿಷೀಮತೇ ಪಥೀನಾಂ ಪತಯೇ'ಎಂಬೀ ಭಾಗದಲ್ಲಿ ಉಲ್ಲೇಖಿಸಲ್ಪಟ್ಟಿದೆ. ಆದ್ದರಿಂದ ಈ ರುದ್ರಭಾಷ್ಯಕಾರರೂ ಶ್ರೀವೇಂಕಟನಾಥರ ಗುರುಗಳೂ ಒಬ್ಬರೇ ಆಗಿರಬೇಕೆಂದು ಶ್ರೀ॥ ಟಿ. ಕೆ. ಬಾಲಸುಬ್ರಹ್ಮಣ್ಯಂ ಎಂಬವರು ರುದ್ರಭಾಷ್ಯದ ಪ್ರಾರಂಭದಲ್ಲಿ ಬರೆದಿರುವ ಮುನ್ನುಡಿಯಲ್ಲಿ ತಿಳಿಸಿದ್ದಾರೆ. ಈ ರುದ್ರಭಾಷ್ಯಗ್ರಂಥವು 'ವಾಣೀವಿಲಾಸ ಮುದ್ರಣಾಲಯ, ಶ್ರೀರಂಗಮ್' ಇವರಿಂದ 1962ರಲ್ಲಿ ಪ್ರಕಾಶಿತವಾಗಿದೆ.

ಪ್ರಕೃತ- ರುದ್ರಭಾಷ್ಯಕಾರರುಗಳಲ್ಲಿ ಅಭಿನವಶಂಕರರ ಭಾಷ್ಯವನ್ನೇ ನಾನು ಹೆಚ್ಚಾಗಿ ಅನುಸರಿಸಿದ್ದೇನೆ. ಈ ಭಾಷ್ಯಕಾರರು ಪ್ರಾರಂಭದಲ್ಲಿ ಸುಮಾರು ನಲವತ್ತು ಪುಟಗಳಷ್ಟು ದೊಡ್ಡ ಪೀಠಿಕೆಯನ್ನೇ ಬರೆದಿದ್ದಾರೆ. ಅದರಲ್ಲಿ ಶತರುದ್ರಿಯದ ಹಿರಿಮೆ, ಅವಿಮುಕ್ತೋಪಾಸನಾವಿಚಾರ, ಶ್ರೀರುದ್ರ ಎಂಬ ಶಬ್ದವು ಬ್ರಹ್ಮವಾಚಕ- ಎಂಬ ವಿಚಾರ, ಬೋಧಾಯನೋಕ್ತ ಮಹಾನ್ಯಾಸದ ಅರ್ಥ- ಇವೇ ಮುಂತಾದ ವಿಷಯಗಳನ್ನು ವಿಸ್ತಾರವಾಗಿ ಪ್ರತಿಪಾದಿಸಿರುತ್ತಾರೆ. ಅನಂತರ ರುದ್ರಮಂತ್ರಗಳಿಗೆ ಅರ್ಥವಿವರಣೆಯನ್ನೂ ಕೊಟ್ಟಿದ್ದಾರೆ. ಈ ವಿವರಣೆಗಳ ಆಧಾರದಿಂದ ನಾನು ಈಗಿನ ನಾಗರಿಕ ಪ್ರಪಂಚದ ಜನರ ವ್ಯವಹಾರದೃಷ್ಟಿಗೂ ಹೊಂದುವಂತೆ ಸಮನ್ವಯಗೊಳಿಸಿ ರುದ್ರಭಾಷ್ಯದ ವಿವರಣೆಯನ್ನು ಸ್ವತಂತ್ರವಾಗಿಯೇ ಬರೆದಿರುತ್ತೇನೆ. ಹಾಗೆ ಬರೆಯುವಾಗ ಜನಸಾಮಾನ್ಯರಿಗೆಲ್ಲ ಅರ್ಥವಾಗುವಂಥ ಶೈಲಿಯನ್ನು ಅನುಸರಿಸಿದ್ದೇನೆ. ರುದ್ರಮಂತ್ರಾರ್ಥವನ್ನು ಸರಳವಾಗಿ ತಿಳಿಯಲು ಇದು ಎಲ್ಲರಿಗೂ ಉಪಯೋಗಕರವಾದೀತೆಂದು ಭಾವಿಸಿದ್ದೇನೆ. ಇದರಲ್ಲಿ ಸಂಭವಿಸಿರಬಹುದಾದ ಭಾಷೆಯ ಹಾಗೂ ವಿಚಾರಸರಣಿಯ ದೋಷಗಳನ್ನು ಗುಣಜ್ಞರಾದ ವಾಚಕರು ತಿಳಿಸಿಕೊಟ್ಟಲ್ಲಿ ಸರಿಪಡಿಸಿಕೊಳ್ಳುವೆನು. ಈ ಪೀಠಿಕೆಯಲ್ಲಿ ಪ್ರಸ್ತಾಪಿಸಿರುವ ಅನೇಕವಿಷಯಗಳನ್ನು ನಂಜನಗೂಡು ತೇರಾಕೋಟಿ ರಾಮನಾಮೋತ್ಸವದ ವರದಿಯಲ್ಲಿ ಶ್ರೀ॥ ತುರುವೇಕೆರೆ ವಿಶ್ವೇಶ್ವರದೀಕ್ಷಿತರು ಪ್ರಕಟಿಸಿರುವ ಲೇಖನದಿಂದ ಸ್ವೀಕರಿಸಿದ್ದೇನೆ. ಈ ಬಗ್ಗೆ ಅವರಿಗೆ ಕೃತಜ್ಞನಾಗಿದ್ದೇನೆ.

ಈ ಗ್ರಂಥವನ್ನು ನನ್ನ ಪೂಜ್ಯತಂದೆಯವರಾದ ದಿವಂಗತ ಶೃಂಗೇರಿ ಶ್ರೀ॥ ಹೆಚ್. ಶ್ರೀಕಂಠಘನಪಾಠಿಗಳವರಿಗೆ ಸಮರ್ಪಿಸಿದ್ದೇನೆ. ಅವರು ಕೃಷ್ಣ

ಯಜುರ್ವೇದ ಸಲಕ್ಷಣ ಘನಾಂತ ಮತ್ತು ಸ್ಮಾರ್ತಪ್ರಯೋಗಗಳ ಉಭಯ ವಿದ್ವಾಂಸರೂ ಕಾಶೀಕ್ಷೇತ್ರದಲ್ಲಿ ಮೂರು ವರ್ಷಗಳಕಾಲ ವಾಸವಾಗಿದ್ದು ಸಾಹಿತ್ಯ, ತರ್ಕ, ವೇದಾಂತಾದಿ-ಶಾಸ್ತ್ರಗಳನ್ನು ಅಭ್ಯಾಸಮಾಡಿದವರೂ ಶ್ರೋತ್ರಿಯಪುಂಗವರೂ ರುದ್ರಭಕ್ತರೂ ಆಗಿದ್ದರು. ನಂಜನಗೂಡು ಶಂಕರ ಮಠದ ವೇದಪಾಠಶಾಲಾ ಪ್ರಾಧ್ಯಾಪಕರಾಗಿದ್ದು (1927 ರಿಂದ 35) ಹತ್ತಾರುಜನ ಶಿಷ್ಯರಿಗೆ ಕ್ರಮಾಂತ-ಘನಾಂತವೇದಾಧ್ಯಯನವನ್ನು ಮಾಡಿಸಿ ಪ್ರಸಿದ್ಧರಾಗಿದ್ದರು. ಅವರ ಶಿಷ್ಯರುಗಳಲ್ಲಿ ಇತ್ತೀಚೆಗೆ ಬ್ರಹ್ಮೀಭೂತರಾದ ಕೂಡ್ಲಿಶೃಂಗೇರಿಜಗದ್ಗುರುಪೀಠಾಧಿಪರಾಗಿದ್ದ ಶ್ರೀಶ್ರೀಸಚ್ಚಿದಾನಂದ ಶಂಕರ ಭಾರತೀ ಸ್ವಾಮಿಗಳೂ ಪೂರ್ವಾಶ್ರಮದಲ್ಲಿ ಒಬ್ಬರಾಗಿದ್ದರು. ಅವರ ವೇದೋಚ್ಚಾರಣೆಯ ಹಾಗೂ ಪಾಠಪ್ರವಚನಗಳ ವೈಶಿಷ್ಟ್ಯವನ್ನು ಈಗಲೂ ಬಲ್ಲವರು ನೆನೆಯಿಸಿಕೊಳ್ಳುತ್ತಾರೆ. ಇಂಥ ಮಹನೀಯರು ನನಗೆ ಸಕಾಲಕ್ಕೆ ಎಂದರೆ ಎಂಟನೆಯ ವರ್ಷಕ್ಕೆ ಸರಿಯಾಗಿ ಉಪನಯನವನ್ನು ಮಾಡಿ ಈ ರುದ್ರಾಧ್ಯಾಯದ ವೇದಭಾಗವನ್ನು ಸ್ವತಃ ಪಾಠಹೇಳಿಕೊಟ್ಟಿದ್ದರು. ಆದರೆ ನನ್ನ ಕೇವಲ ಹದಿನಾಲ್ಕನೆಯ ವಯಸ್ಸಿನಲ್ಲಿಯೇ ಅವರನ್ನು ಕಳೆದುಕೊಂಡದ್ದರಿಂದ ಹೆಚ್ಚಾಗಿ ಅವರ ಮಹಿಮೆಯನ್ನು ನಾನು ಅರಿಯಲಾಗಲಿಲ್ಲ. ಆದರೂ ಗುರುಗಳೂ ತಂದೆಯವರೂ ಆಗಿ ನನ್ನನ್ನು ಉದ್ಧಾರಮಾಡಿದ ಆ ಮಹನೀಯರ ನೆನಪಾಗಿ ಈ ಗ್ರಂಥವನ್ನು ಅವರ ಪಾದಕಮಲಗಳಲ್ಲಿ ಅರ್ಪಿಸಿರುತ್ತೇನೆ.

ಇನ್ನು ನನ್ನ ಜನ್ಮಾಂತರದ ಪುಣ್ಯವಿಶೇಷದಿಂದಲೋ, ಎಂಬಂತೆ ನನಗೆ ವೇದಾಂತಶಾಸ್ತ್ರವನ್ನು ಉಪದೇಶಮಾಡಿ ಪ್ರವಚನ-ಲೇಖನಾದಿಗಳ ಶಕ್ತಿಯನ್ನು ಅನುಗ್ರಹಿಸಿ ನಿರಂತರವೂ ತಮ್ಮ ಕೃಪಾಕಟಾಕ್ಷದಿಂದ ಸಲಹುತ್ತಿರುವ ಪರಮಪೂಜ್ಯ ಸದ್ಗುರು ಪರಮಹಂಸ ಶ್ರೀಶ್ರೀ ಸಚ್ಚಿದಾನಂದೇಂದ್ರಸರಸ್ವತೀ ಮಹಾಸ್ವಾಮಿಗಳವರ ದಿವ್ಯಚರಣಾರವಿಂದಗಳಿಗೆ ಸಾಷ್ಟಾಂಗನಮಸ್ಕಾರಗಳನ್ನು ಸಮರ್ಪಿಸಿ ಈ ಪೀಠಿಕೆಯನ್ನು ಪೂರ್ಣಗೊಳಿಸುತ್ತೇನೆ.

ಇತಿ—

ಕಾಳಯುಕ್ತಿ ಸಂ॥ ರದ ಜ್ಯೇಷ್ಠ ಕೃ॥ ೧೦ — ಸಜ್ಜನವಿಧೇಯ,

ಶುಕ್ರವಾರ, ತಾ॥ 30-6-1978. — ಗ್ರಂಥಕರ್ತ.

|| ಓಂ ||

|| ನಮೋ ಭಗವತೇ ರುದ್ರಾಯ ||

# ಶ್ರೀ ರುದ್ರವಿವೃತಿಃ

(ವೇ॥ ಬ್ರ॥ ಶ್ರೀ॥ ತುರುವೇಕೆರೆ ವಿಶ್ವೇಶ್ವರದೀಕ್ಷಿತರ ರಚನೆ)

[ಸೂಚನೆ : ಇದರಲ್ಲಿ ಪ್ರತಿಯೊಂದು ಮಂತ್ರದ ಅರ್ಥವೂ ಶ್ಲೋಕರೂಪವಾಗಿ ಹೆಣೆಯಲ್ಪಟ್ಟು ಕಾವ್ಯದಂತೆ ಮನೋಹರವಾಗಿದೆ. ಆಯಾ ಮಂತ್ರಗಳ ಪ್ರತೀಕವನ್ನು ಶ್ಲೋಕಗಳ ಮೇಲ್ಭಾಗದಲ್ಲಿ ಸೂಚಿಸಿದೆ. ರುದ್ರಾಧ್ಯಾಯವನ್ನು ಸ್ವರಸಹಿತವಾಗಿ ಅಧ್ಯಯನ ಮಾಡಲು ಅವಕಾಶವಿಲ್ಲದವರು ಈ ಶ್ಲೋಕಗಳಿಂದಲೇ ರುದ್ರಾಭಿಷೇಕವನ್ನು ಧಾರಾಳವಾಗಿ ನೆರವೇರಿಸಬಹುದು. ಈ ಕೃತಿಯನ್ನು ಮೆಚ್ಚಿ ಶ್ರೀ ಶೃಂಗೇರಿ ಜಗದ್ಗುರು ಪೀಠಾಧೀಶ್ವರರರಾದ ಶ್ರೀಮತ್ಪರಮಹಂಸೇತ್ಯಾದಿ ಬಿರುದಾಂಕಿತ ಶ್ರೀಮದಭಿನವ ವಿದ್ಯಾತೀರ್ಥ ಮಹಾಸ್ವಾಮಿಗಳವರು ಲೇಖಕರಿಗೆ ತಮ್ಮ ಶ್ರೀಮುಖವನ್ನು ನೀಡಿರುತ್ತಾರೆ.]

## ಮಂಗಳಾಚರಣಮ್

ಅಚಲಶರಾಸನಮಚ್ಯುತವಿಶಿಖಂ
  ವಿಶ್ವಾತ್ಮಕಮುಮಯಾಂಚಿತವಾಮಮ್ ॥
ಉಪಹತಕಾಮಂ ತ್ರಿಪುರವಿರಾಮಂ ।
  ಪ್ರಣಮೋ ಮುಕುಟಮಣೀಕೃತಸೋಮಮ್ ॥

## ರುದ್ರವಿವೃತಿಃ

### ( ಒಂದನೆಯ ಅನುವಾಕ )

(ಓಂ ನಮಸ್ತೇ ರುದ್ರ................ಉತ ತೇ ನಮಃ)

ನಮಾಮಿ ಹೇ ರುದ್ರ ತವ ಪ್ರಕೋಪಂ
  ಬಾಣಂ ಚ ಚಾಪಂ ತವ ಪಾಣಿಯುಗ್ಮಮ್ ।
ಕೋಪೇಷುಚಾಪಾ ಭವತಃ ಪ್ರಶಾಂತಾಃ
  ಭೂಯಾಸುರಸ್ಮಾಸು ಮಹೇಶ ನಿತ್ಯಮ್ ॥ ೧ ॥

(ಯಾ ತ ಇಷುಃ..................ರುದ್ರ ಮೃಡಯ)

ಹೇ ರುದ್ರ ಬಾಣಸ್ತ್ವವ ಯಃ ಪ್ರಶಾಂತಃ
ಶಾಂತಂ ಧನುಃ ಶಾಂತತಮೇಷುಧಿರ್ಯಾ |
ಧೃತಾ ತ್ವಯಾ ಭಕ್ತಸುಖಾಯ ಶೀಘ್ರಂ
ತಯಾ ಮಹಾತ್ಮನ್ ಪರಿಪಾಲಯಾಸ್ಮಾನ್ || ೨ ||

(ಯಾ ತೇ ರುದ್ರ.............ಚಾಕಶೀಹಿ)

ಹೇ ರುದ್ರ ಭದ್ರಂ ಭವತಃ ಶರೀರಂ
ಅಕ್ರೂರಮೇತದ್ದುರಿತಾಪ್ರಕಾಶಮ್ |
ಗಿರಿಸ್ಥ ಸರ್ವಪ್ರಿಯದ ಪ್ರಭೋ ಮೇ
ಪ್ರಕಾಶ್ಯ ಸೌಖ್ಯಂ ಚಿರಮಾಶು ದೇಹಿ || ೩ ||

(ಯಾಮಿಷುಂ .............ಪುರುಷಂ ಜಗತ್)

ಹೇ ರುದ್ರ ಹಸ್ತೇ ಭವತಃ ಶರೋ ಯಃ
ತ್ವಯಾರಿಷು ಕ್ಷೇಪಕೃತೇ ಧೃತಸ್ತಮ್ |
ಕೈಲಾಸಪಾಲಾಶು ಕುರು ಪ್ರಶಾಂತಂ
ಮಾ ಮಾರಯಾಸ್ಮಾನಚರಾಂಶ್ಚರಾಂಶ್ಚ || ೪ ||

(ಶಿವೇನ ವಚಸಾ..................ಸುಮನಾ ಅಸತ್)

ಹೇ ರುದ್ರ ಕೈಲಾಸನಿವಾಸ ನಿತ್ಯಂ
ಅಭ್ಯರ್ಥಯೇ ಪ್ರೀತಿಕರೈಃ ಸ್ತವೈಸ್ತ್ವಾಮ್ |
ಚರಾಚರಾ ನಃ ಸಕಲಾ ಭವೇಯುಃ
ಸುನಿರ್ಮಲಾಂತಃಕರಣಾ ಅರೋಗಾಃ || ೫ ||

(ಅಧ್ಯವೋಚತ್.................ಯಾತುಧ್ಯಾನಃ)

ಮಾ ಭೈಷ್ಟ ಪಾಮಿತ್ಯಧಿವಕ್ತುಮರ್ಹನ್
ಹಿಂಸ್ರಾನಹಿವ್ಯಾಧಿಪಿಶಾಚಮುಖ್ಯಾನ್ |
ಸರ್ವಾನ್ ವಿನಾಶ್ಯಾಶು ಭಿಷಕ್ತಮಸ್ತ್ವಂ
ಸರ್ವಾಧಿಕಂ ಮಾಂ ವದ ದೇವದೇವ || ೬ ||

(ಅಸೌ ಯಸ್ತಾಮ್ರಃ..............ಹೇಡ ಈಮಹೇ)

ಯ ಏಷ ತಾಮ್ರಾರುಣಪಿಂಗಲಾಭಃ
ಸೂರ್ಯಾತ್ಮಕಸ್ತಸ್ಯ ಸಹಸ್ರಮುಸ್ರಾಃ ।
ರುದ್ರಾತ್ಮಕಾ ದಿಕ್ಷು ಭುವಿ ಸ್ಥಿತಾ ಯೇ
ತೇಷಾಂ ಪ್ರಣಾಮೈಃ ಶಮಯಾಮಿ ಮನ್ಯುಮ್ ॥ ೭ ॥

(ಅಸೌ ಯೋಽವಸರ್ಪತಿ...............ಮೃಡಯಾತಿ ನಃ)

ಯೋಽತ್ಯನ್ತರಕ್ತಃ ಸವಿತಾತ್ಮಕೋಽಸೌ
ರುದ್ರೋ ವಿಭಾತೀಹ ಸ ಕಾಲಕಂಠಃ ।
ಗೋಪೋದಹೃದ್ಯೋಷಿದಶೇಷಭೂತೈಃ
ಸಾಕ್ಷಾತ್ಕೃತೋಽಸ್ಮಾನ್ ಸುಖಯೇದಜಸ್ರಮ್ ॥ ೮ ॥

(ನಮೋ ಅಸ್ತು ನೀಲಗ್ರೀವಾಯ...........ತೇಭ್ಯೋಽಕರಂ ನಮಃ)

ಹೇ ರುದ್ರ ಜಂಬೂಫಲಕಾಂತಕಂಠಂ
ತ್ವಾಂ ವೃಷ್ಟಿದಂ ನೌಮಿ ಸಹಸ್ರನೇತ್ರಮ್ ।
ವಸಂತಿ ಭೃತ್ಯಾಸ್ತವ ಯೇ ಚ ತೇಭ್ಯಃ
ಸಹಸ್ರಶಃ ಸಂತು ನಮಾಂಸಿ ನಿತ್ಯಮ್ ॥ ೯ ॥

(ಪ್ರಮುಂಚ...........ಭಗವೋ ವಪ)

ಹೇ ರುದ್ರ ಮೌರ್ವೀಮವತಾರಯ ತ್ವಂ
ಚಾಪಸ್ಯ ಕೋಟ್ಯೋರುಭಯೋರ್ಮಹಾತ್ಮನ್ ।
ಹಸ್ತೇ ಸ್ಥಿತಾ ಯೇ ಭವತಃ ಶರಾಸ್ತೇ
ತೂಣೀರ ಏವ ಸ್ಥಿತಿಮಾಲಭಂತಾಮ್ ॥ ೧೦ ॥

(ಅವತತ್ಯ...............ಸುಮನಾ ಭವ)

ಸಹಸ್ರನೇತ್ರಾಗಣಿತೇಷುಧೇ ತ್ವಂ
ಚಾಪಾತ್ ಪಿನಾಕಾದವರೋಪ್ಯ ಮೌರ್ವೀಮ್ ।
ಶೀರ್ಣಾನಿ ಬಾಣಾಗ್ರಮುಖಾನಿ ಕೃತ್ವಾ
ಹೇ ರುದ್ರ ಭದ್ರೋ ಭವ ನಸ್ಸುಚೇತಾಃ ॥ ೧೧ ॥

(ವಿಜ್ಯಂ ಧನುಃ............ನಿಷಂಗಥಿಃ)

ವಿಜ್ಯೋ ಜಟಾಭೂಷ ಭವೇತ್ ಪಿನಾಕಃ
ತೂಣೀರ ಏಷೋಽಸ್ತು ಶರೈರ್ವಿಹೀನಃ ।
ವೇದ್ಧುಂ ಶರಾ ನ ಪ್ರಭವೇಯುರಸ್ಮಾನ್
ಸ್ಯಾತ್ ಖಡ್ಗಕೋಶಸ್ತವ ಖಡ್ಗಶೂನ್ಯಃ ॥ ೧೨

(ಯಾ ತೇ ಹೇತಿಃ............ಪರಿಬ್ಭುಜ)

ಭಕ್ತೇಪ್ಸಿತಾನಾಮಭಿವರ್ಷುಕ ತ್ವಂ
ಹೇ ರುದ್ರ ರೋಗಾಪಹೃತೌ ಸಮರ್ಥಮ್ ।
ಬಿಭರ್ಷಿ ಹಸ್ತೇ ಧನುರಾಯುಧಂ ಯತ್
ತೇನಾನಿಶಂ ಪಾಲಯ ಸರ್ವತೋಽಸ್ಮಾನ್ ॥ ೧೩ ॥

(ನಮಸ್ತೇ ಆಸ್ತ್ವಾಯುಧಾಯ............ಧನ್ವನೇ)

ಅಸಜ್ಜಿತಂ ಧರ್ಷಣಶೀಲಮೇತತ್
ನಮಾಮಿ ಬಾಣಾತ್ಮಕಮಾಯುಧಂ ತೇ ।
ಚಾಪಂ ಪಿನಾಕಂ ತವ ಪಾಣಿಯುಗ್ಮಂ
ಹೇ ರುದ್ರ ಭೂಯಃ ಪ್ರಣಮಾಮ್ಯಜಸ್ರಮ್ ॥ ೧೪ ॥

(ಪರಿ ತೇ............ನಿಧೇಹಿ ತಮ್)

ಮಾ ಬಾಧತಾಂ ತೇ ಧನುಷಃ ಶರೋಽಯಂ
ಪರಿತ್ಯಜೇತ್ ವಿಶ್ವಪ ವಿಶ್ವತೋಽಸ್ಮಾನ್ ।
ತವೇಷುಧಿಂ ರುದ್ರ ಸುದೂರಮಸ್ಮತ್
ತ್ವಂ ಸ್ಥಾಪಯಾಮಿತ್ರಚಯೇಷು ನಿತ್ಯಮ್ ॥ ೧೫ ॥

(ಎರಡನೆಯ ಅನುವಾಕ)

(ನಮೋ ಹಿರಣ್ಯಬಾಹವೇ............ದಿಶಾಂ ಚ ಪತಯೇ ನಮಃ)

ಕನಕವಿಭೂಷಣಭಾಸುರಮೂರ್ತೇ
ವೃಷಮುಖದಿಕ್ಪತಿರೂಪಸವಿತ್ರೇ ।

ಅಸುರಸುರಾದಿಬಲಾಲಿನಿಯಂತ್ರೇ
ಹಿತರಮಣೀಯಭುಜಾಯ ನಮಸ್ತೇ || ೧೬ ||

(ನಮೋ ವೃಕ್ಷೇಭ್ಯಃ...........ಪಶೂನಾಂ ಪತಯೇ ನಮಃ)

ವಿನಶನಶೀಲಚರಾಚರರೂಪಿನ್
ಹರಿತಪಲಾಶಕಚಾಗ್ರನಗಾತ್ಮನ್ ।
ವಿಧಿಮುಖಜೀವಪಶುವ್ರಜಭರ್ತ್ರೇ
ದ್ವಿಪದಚತುಷ್ಪದಪಾಲ ನಮಸ್ತೇ || ೧೭ ||

(ನಮಃ ಸಸ್ಪಿಂಜರಾಯ...........ಪಥೀನಾಂ ಪತಯೇ ನಮಃ)

ನವತೃಣಪಿಂಜರಮಂಜುಲಮೂರ್ತೇ
ಶ್ರುತಿಹಿತಲೌಕಿಕಪದ್ಧತಿನೇತ್ರೇ ।
ಶುಚಿತಮ ದೀಪ್ತ ಚಿದಾತ್ಮಕ ಧೂಮ-
-ಪ್ರಭೃತಿಸೃತಿದ್ವಯವಿಜ್ಞ ನಮಸ್ತೇ || ೧೮ ||

(ನಮೋ ಬಭ್ಲುಶಾಯ...........ಅನ್ನಾನಾಂ ಪತಯೇ ನಮಃ)

ಪ್ರಿಯವೃಷವಾಹನ ಪಿಂಗಲಕಾಂತೇ
ವಿವಿಧಗದಾಧಿತೃಡಾದಿಭಿರುಗ್ರೈಃ ।
ಅರಿತತಿದುಃಷ್ಕೃತಿವರ್ಗನಿಹಂತ್ರೇಽ
ನ್ನದ, ಸಫಲೌಷಧಿನಾಥ ನಮಸ್ತೇ || ೧೯ ||

(ನಮೋ ಹರಿಕೇಶಾಯ...........ಪುಷ್ಟಾನಾಂ ಪತಯೇ ನಮಃ)

ನವಘನನೀಲಕಚಾಯ ಚ ಯೂನೇ
ಲಸದುಪವೀತಸುಮಂಗಲಮೂರ್ತೇ ।
ದಶವಿಧಪುಷ್ಟಿಶಮಾದಿಗುಣಾಢ್ಯೈಃ
ಲಸಿತತನೂಭೃದಧೀಶ ನಮಸ್ತೇ || ೨೦ ||

(ನಮೋ ಭವಸ್ಯ ಹೇತ್ಯೈ...........ಪತಯೇ ನಮಃ)

ಭವಜನಿತಾಖಿಲದುಸ್ಸಹಹಿಂಸಾ-
-ತ್ಮಕ ಭವಕಾನನದಾರಣಹೇತ್ಯೈ ।

ಜನನಿವಹಾನವತೇ ಭವಖಿನ್ನಾನ್
ನಿಖಿಲಚರಾಚರಪಾಲ ನಮಸ್ತೇ || ೨೧ ||

(ನಮೋ ರುದ್ರಾಯ..........ಕ್ಷೇತ್ರಾಣಾಂ ಪತಯೇ ನಮಃ)

ಲಯಸಮಯೇಽಖಿಲರೋದಕ ರುದ್ರ
ಪ್ರವಿತತಕಾರ್ಮುಕ ಪಾಲಿತಲೋಕ ।
ಹೃದಿ ನಿವಸನ್ನವತೇ ವಪುರೇತತ್
ಸುಕೃತತಮಸ್ಥಲಪಾಲ ನಮಸ್ತೇ || ೨೨ ||

(ನಮಃ ಸೂತಾಯ...........ವನಾನಾಂ ಪತಯೇ ನಮಃ)

ಅಭಿಷುತಸೋಮರಸಾತ್ಮಕ ಸಾಕ್ಷಿನ್
ಅಹಮಿತಿಬುದ್ಧಿನಿರೂಢ ಚಿದಾತ್ಮನ್ ।
ಭುವನಶರೀರಸ್ಥಸ್ಯ ನಿಯಂತ್ರೇ
ವಿಷಯವನಾಧಿಪ ನಿತ್ಯ ನಮಸ್ತೇ || ೨೩ ||

(ನಮೋ ರೋಹಿತಾಯ...........ವೃಕ್ಷಾಣಾಂ ಪತಯೇ ನಮಃ)

ದಿನಮುಖಭಾನುಸಮಾನಸುರಕ್ತ
ಧ್ವನಿನಿಹಿತ ಸ್ಥಿತ ವಿಷ್ವಗಶೇಷಮ್ ।
ಜಗದವತೇ ಶಬರಾವಲಿನೇತ್ರೇ
ವಿವಿಧಮಹೀರುಹಪಾಲ ನಮಸ್ತೇ || ೨೪ ||

(ನಮೋ ಮಂತ್ರಿಣೇ...........ಕಕ್ಷಾಣಾಂ ಪತಯೇ ನಮಃ)

ಉಪನಿಷದಾದಿಷು ವಿಶ್ರುತಕೀರ್ತೇ
ಸಚಿವವರಾಯ ವಣಿಗ್ಜನನೇತ್ರೇ ।
ವಣಿಗಿವ ಕರ್ಮವಿನಿರ್ಣಯಕರ್ತ್ರೇ
ಗಿರಿಗಹನಾದ್ಯಧಿಪಾಯ ನಮಸ್ತೇ || ೨೫ ||

(ನಮೋ ಭುವಂತಯೇ...........ಔಷಧೀನಾಂ ಪತಯೇ ನಮಃ)

ಭುವನನಿದಾನ ಸನಾತನ ವಿಷ್ಣೋ
ಧನಮವತೇಽರ್ಜಯತೋ ಧನದಾತ್ರೇ ।

ಪರಿಜನವತ್ಸಲ ಹೇ ವರುಣಾತ್ಮನ್
ವಿವಿಧಮಹೌಷಧಿನಾಥ ನಮಸ್ತೇ ॥ ೨೬ ॥

(ನಮ ಉಚ್ಚೈರ್ಘೋಷಾಯ...........ಪತ್ತೀನಾಂ ಪತಯೇ ನಮಃ)

ಜಲಧರರೂಪ ಸದಾ ನಿಜಭಕ್ತೈಃ
ಕೃತನುತಯೇ ಸ್ವನತೇ ಸ್ವಯಮುಚ್ಚೈಃ ।
ರಿಪುಗಣರೋದಕ ಸಂಯುಗಜೇತ್ರೇ
ಪದಗ ಕದಂಬಕನಾಥ ನಮಸ್ತೇ ॥ ೨೭ ॥

(ನಮಃ ಕೃತ್ಸ್ನವೀತಾಯ...........ಪತಯೇ ನಮಃ)

ಬಹುಬಲಕಂಚುಕವೇಷ್ಟಿತಗಾತ್ರ
ಪ್ರಲಯಹತಾಖಿಲ ಕೇವಲ ಪೂರ್ಣ ।
ದುರಿತವಿಶುದ್ಧಿಕೃತೇ ಲಘುಗಂತ್ರೇ
ನಿಜಶರಣಾಗತಪಾಲ ನಮಸ್ತೇ ॥ ೨೮ ॥

(ಮೂರನೆಯ ಅನುವಾಕ)

(ನಮಃ ಸಹಮಾನಾಯ........ಆವ್ಯಾಧಿನೀನಾಂ ಪತಯೇ ನಮಃ)

ಅಸತಃ ಸಮಸ್ತಾನಭಿಭೂಯ ನಿತ್ಯಂ
ಕ್ಷಮಮಾಣಭಕ್ತಾನಪರಾಧಿನೋಽಪಿ ।
ನಿತರಾಂ ವಿರುದ್ಧಾನಿಹ ದುಃಖಯಿತ್ರೇ
ಪರಿತೋ ವ್ಯಥಾಕೃತ್ಪತಯೇ ನಮಸ್ತೇ ॥ ೨೯ ॥

(ನಮಃ ಕಕುಭಾಯ........ಸ್ತೇನಾನಾಂ ಪತಯೇ ನಮಃ)

ಕಕುದಿ ಪ್ರಕಾಶಾಯ ಮಹೋನ್ನತಾಯ
ಪ್ರಮುಖಾಯ ಸರ್ವತ್ರ ಕೃಪಾಣಪಾಣೇ ।
ಧನಹರ್ತೃಭರ್ತ್ರೇಽಪ್ರತಿಮಾಯ ಚೌರ್ಯೇ
ಧೃತಗೂಢವೇಷಾಯ ಸದಾ ನಮಸ್ತೇ ॥ ೩೦ ॥

(ನಮೋ ನಿಷಂಗಿಣೇ........ತಸ್ಕರಾಣಾಂ ಪತಯೇ ನಮಃ)

ನಿಹಿತಸ್ವಭಕ್ತೌಘನಿತಾಂತಸಕ್ತೇ
ಸತತಾಹಿತಾಜಿಹ್ಮಗಚಾಪಪಾಣೇ ।
ಭುಜಮೂಲಭೂಷಾಯಿತತೂಣಪಂಕ್ತೇ
ಹರತಾಂ ಸಮಕ್ಷಂ ಪತಯೇ ನಮಸ್ತೇ ॥ ೩೧ ॥

(ನಮೋ ವಂಚತೇ........ಸ್ತಾಯೂನಾಂ ಪತಯೇ ನಮಃ)

ಅಟತೇ ಕದಾಚಿತ್ ಜನವಂಚನಾರ್ಥಂ
ಭುವಿ ವಿಪ್ರಲಂಭಾಯ ಸದಾ ಸಮಂತಮ್ ।
ಬಹುಕೈತವಾಕಲ್ಪವಿಶೇಷಭಾಜಾಂ
ಹರತಾಂ ಪಟಾದೇಃ ಪತಯೇ ನಮಸ್ತೇ ॥ ೩೨ ॥

(ನಮೋ ನಿಚೇರವೇ.......ಅರಣ್ಯಾನಾಂ ಪತಯೇ ನಮಃ)

ನಿತರಾಂ ನಿಗೂಢಂ ಚರತೇಽಪಹರ್ತುಂ
ಪರಿತೋ ವಿಪಣ್ಯಾಮಟತೇ ಪ್ರಕಾಶಮ್ ।
ವಿಪಿನಪ್ರದೇಶೇಷು ಕೃತಾಲಯಾನಾಂ
ಪತಯೇ ನಮಸ್ತೇಽಸ್ತು ಮಲಿಮ್ಲುಚಾನಾಮ್ ॥ ೩೩ ॥

(ನಮಃ ಸೃಕಾವಿಭ್ಯಃ........ಮುಷ್ಣತಾಂ ಪತಯೇ ನಮಃ)

ತನುಪಾಲನಾರ್ಥಂ ವಿಧೃತಾಯುಧಾ ಯೇ
ಹನನೇಚ್ಛವೋ ಯೇಽಪಿ ತದಾತ್ಮಕಾಯ ।
ನಿಜಭರ್ತೃಧಾನ್ಯಾದಿಚಯಂ ನಿಗೂಢಂ
ಹರತಾಮಧೀಶಾಯ ನಮೋಽಸ್ತು ನಿತ್ಯಮ್ ॥ ೩೪ ॥

(ನಮೋಽಸಿಮದ್ಭ್ಯೋ ......ಪ್ರಕೃಂತಾನಾಂ ಪತಯೇ ನಮಃ)

ಧೃತಚಂದ್ರಹಾಸಾ ನಿಶಿ ಯೇ ಪೃಥಿವ್ಯಾಂ
ತನುಭೃತ್ಸಮೂಹಂ ಪರಿಬಾಧಮಾನಾಃ ।
ವಿಚರನ್ತಿ ರುದ್ರಾನುಚರಾಶ್ಚ ತೇಭ್ಯಃ
ಪತಯೇ ಚ ಹತ್ವಾ ಹರತಾಂ ನಮೋಽಸ್ತು ॥ ೩೫ ॥

(ನಮ ಉಷ್ಣೀಷಿಣೇ........ಕುಲುಂಚಾನಾಂ ಪತಯೇ ನಮಃ)

ಗಿರಿಕಾನನಾದೌ ವಸನಾದಿ ಹರ್ತುಂ
ಚರತೇ ಶಿರಸ್ತ್ರಾಣಭೃತೇ ಚ ಭೂಮಿಮ್ ।
ಹರತಾಂ ವಿಚಿತ್ರವ್ಯಸನಪ್ರದಾನಾಂ
ಕುಲಲುಂಚಕಾನಾಂ ಪತಯೇ ನಮಸ್ತೇ || ೩೬ ||

(ನಮ ಇಷುಮದ್ಭ್ಯೋ........ಪ್ರತಿದಧಾನೇಭ್ಯಶ್ಚ ವೋ ನಮಃ)

ವಂದೇ ಹೇ ಶ್ರೀರುದ್ರಾ ಯುಷ್ಮಾನ್
ಆಶುಗಕಾರ್ಮುಕಭೂಷಿತಬಾಹೂನ್ ।
ಚಾಪೇ ಮೌರ್ವೀಮಾರೋಪಯಿತ್ವಾನ್
ಶರಸಂಧಾನೇ ಚತುರಾನ್ ವಂದೇ || ೩೭ ||

(ನಮ ಆಯಚ್ಛದ್ಭ್ಯೋ........ವಿಧ್ಯದ್ಭ್ಯಶ್ಚ ವೋ ನಮಃ)

ವಂದೇ ಮೌರ್ವ್ಯಾಕರ್ಷಕರೂಪಾನ್
ಮುಂಚದ್ವಿಶಿಖಾನ್ ಕ್ಷಿಪತೋ ಬಾಣಾನ್ ।
ಲಕ್ಷ್ಯವಿಭೇದನಕುಶಲಾನ್ ಯುಷ್ಮಾನ್
ಅರಿತನುತಾಡನ ನಿಪುಣಾನ್ ವಂದೇ || ೩೮ ||

(ನಮ ಆಸೀನೇಭ್ಯಃ....... ಧಾವದ್ಭ್ಯಶ್ಚ ವೋ ನಮಃ)

ವಂದೇ ಸಂತತಮಾಸೀನಾನ್ ವಃ
ಶಯನಗತಾನ್ ಹೇ ರುದ್ರಾಃ ಸುಪ್ತಾನ್ ।
ಜಾಗ್ರದ್ರೂಪಾನ್ ತಿಷ್ಠದ್ರೂಪಾನ್
ಧಾವದ್ರೂಪಾನನಿಶಂ ವಂದೇ || ೩೯ ||

(ನಮಃ ಸಭಾಭ್ಯಃ........ಅಶ್ವಪತಿಭ್ಯಶ್ಚ ವೋ ನಮಃ)

ವಂದೇ ಸಂಸದ್ರೂಪಾನ್ ಯುಷ್ಮಾನ್
ಸಂಘಾತಾನಾಮಧಿಪತಿರೂಪಾನ್ ।
ಅಶ್ವಾನಶ್ವಾಧೀಶ್ವರರೂಪಾನ್
ಹೇ ವಿಶ್ವಾತ್ಮಕರುದ್ರಾ ವಂದೇ || ೪೦ ||

(ನಾಲ್ಕನೆಯ ಅನುವಾಕ)

(ನಮ ಆವ್ಯಾಧಿನೀಭ್ಯೋ........ತೃಗ್ಂಹತೀಭ್ಯಶ್ಚ ವೋ ನಮಃ)
ವಂದೇ ಪರಿತೋ ವೇದ್ಧುಂ ಶಕ್ತಾನ್
ಬಹುಧಾ ತಾಡನಚತುರಾನ್ ಯುಷ್ಮಾನ್ |
ಉತ್ಕೃಷ್ಟಗಣಾನ್ ಸ್ತ್ರೀರೂಪಧರಾನ್
ಹಿಂಸೋತ್ಪಾದನಶೀಲಾನ್ ವಂದೇ || ೪೧ ||

(ನಮೋ ಗೃತ್ಸೇಭ್ಯೋ .......ವ್ರಾತಪತಿಭ್ಯಶ್ಚ ವೋ ನಮಃ)
ವಂದೇ ವಿಷಯಾಶಾವೃತಚಿತ್ತಾನ್
ತದಧೀಶಾತ್ಮಕರುದ್ರಾನ್ ಯುಷ್ಮಾನ್ |
ನಾನಾಜಾತಿಕದಂಬಕರೂಪಾನ್
ತೇಷಾಂ ಪಾಲಕರೂಪಾನ್ ವಂದೇ || ೪೨ ||

(ನಮೋ ಗಣೇಭ್ಯೋ........ವಿಶ್ವರೂಪೇಭ್ಯಶ್ಚ ವೋ ನಮಃ)
ವಂದೇ ಪ್ರಮಥಪ್ರಭೃತಿಗಣಾನ್ ತ-
ತ್ಪಾಲಕಗಣಪತಿರೂಪಾನ್ ಯುಷ್ಮಾನ್ |
ವಿಕೃತಾವಯವಾನ್ ಧೃತಬಹುರೂಪಾನ್
ಹೇ ಸರ್ವಾತ್ಮಕರುದ್ರಾ ವಂದೇ || ೪೩ ||

(ನಮೋ ಮಹದ್ಭ್ಯಃ........ಅರಥೇಭ್ಯಶ್ಚ ವೋ ನಮಃ)
ವಂದೇ ಮಹತೋಽಷ್ಟೈಶ್ವರ್ಯಯುತಾನ್
ಹೀನಾನ್ ಕ್ಷುದ್ರಜ್ಞಾನಾಕಾರಾನ್ |
ರಥಮಾರೂಢಾನ್ ಸತತಂ ಯುಷ್ಮಾನ್
ರಥರಹಿತಾನ್ ಹೇ ರುದ್ರಾ ವಂದೇ || ೪೪ ||

(ನಮೋ ರಥೇಭ್ಯೋ........ಸೇನಾನಿಭ್ಯಶ್ಚ ವೋ ನಮಃ)
ವಂದೇ ಸ್ಯಂದನರೂಪಾನ್ ಯುಷ್ಮಾನ್
ಹೇ ಶ್ರೀರುದ್ರಾ ರಥಪತಿರೂಪಾನ್ |

ಪತ್ತಿಪ್ರಮುಖಾನೀಕಾಕಾರಾನ್
ಸೇನಾನಾಯಕರೂಪಾನ್ ವಂದೇ || ೪೫ ||

(ನಮಃ ಕ್ಷತ್ತೃಭ್ಯಃ........ರಥಕಾರೇಭ್ಯಶ್ಚ ವೋ ನಮಃ)

ವಂದೇ ಸ್ಯಂದನಶಿಕ್ಷಕರೂಪಾನ್
ಪ್ರಗ್ರಹಸಂಗ್ರಹಿಸಾರಥಿರೂಪಾನ್ |
ವರ್ಧಕಿರೂಪಾನ್ ರುದ್ರಾ ಯುಷ್ಮಾನ್
ರಥನಿರ್ಮಾಣೇ ನಿಪುಣಾನ್ ವಂದೇ || ೪೬ ||

(ನಮಃ ಕುಲಾಲೇಭ್ಯಃ........ನಿಷಾದೇಭ್ಯಶ್ಚ ವೋ ನಮಃ)

ವಂದೇ ಘಟನಿರ್ಮಾಣಪ್ರವರಾನ್
ಲೋಹಕೃದಂತರಧೀಶ್ವರರೂಪಾನ್ |
ವಿಹಗಸಮೂಹವಿಘಾತುಕರೂಪಾನ್
ಯುಷ್ಮಾನ್ ಧೀವರರೂಪಾನ್ ವಂದೇ || ೪೭ ||

(ನಮ ಇಷುಕೃದ್ಭ್ಯೋ........ಶ್ವನಿಭ್ಯಶ್ಚ ವೋ ನಮಃ)

ವಂದೇ ಮಾರ್ಗಣನಿರ್ಮಿತಿನಿಪುಣಾನ್
ಕಾರ್ಮುಕಕಾರಾಕಾರಾನ್ ಯುಷ್ಮಾನ್ |
ಹೇ ಶ್ರೀರುದ್ರಾ ಲುಬ್ಧಕರೂಪಾನ್
ಶ್ವಾಗಣಿಕಾನನುದಿವಸಂ ವಂದೇ || ೪೮ ||

(ನಮಃ ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ)

ವಂದೇ ನಿತ್ಯಂ ಕುಕ್ಕುರರೂಪಾನ್
ಶುನಕಾಧೀಶ್ವರರೂಪಾನ್ ಯುಷ್ಮಾನ್ |
ಲೀಲಾಸ್ವೀಕೃತವಿವಿಧಶರೀರಾನ್
ಹೇ ವಿಶ್ವಾತ್ಮಕರುದ್ರಾ ವಂದೇ || ೪೯ ||

(ಐದನೆಯ ಅನುವಾಕ)

(ನಮೋ ಭವಾಯ........ಪಶುಪತಯೇ ಚ)

ನೌಮಿ ಜಂತುಜನಿಕಾರಣಮೀಶಂ
ಸಂಸೃತಿಪ್ರಭವಶೋಕವಿನಾಶಮ್ ।
ಪೀಡಕಂ ಪ್ರಣತಪಾಪಚಯಾನಾಂ
ಪಾಲಕಂ ಪಶುಸಮಾಜ್ಞಜನಾನಾಮ್ ॥ ೫೦ ॥

(ನಮೋ ನೀಲಗ್ರೀವಾಯ........ವ್ಯುಪ್ತಕೇಶಾಯ ಚ)

ಕಾಲಕೂಟವಿಷಧಾರಣಭಾಸ್ವತ್
ಕಾಲಕಾಂತಸಿತಕಂಧರಮೀಶಮ್ ।
ನೌಮಿ ಮಂಜುಲಜಟಾಕೃತಭೂಷಂ
ವ್ಯುಪ್ತಕೇಶಮಿತಮಸ್ಕರಿವೇಷಮ್ ॥ ೫೧ ॥

(ನಮಃ ಸಹಸ್ರಾಕ್ಷಾಯ........ಶಿಪಿವಿಷ್ಟಾಯ ಚ)

ಶಕ್ರರೂಪಿಣಮಿತಾಕ್ಷಿಸಹಸ್ರಂ
ಸೌಮ್ಯಸಂಖ್ಯವರಕಾರ್ಮುಕಹಸ್ತಮ್ ।
ವಿಷ್ಣುಮಾತ್ತರಜತಾಚಲವಾಸಂ
ಸರ್ವಭೂತಹೃದಯಾಬ್ಜನಿವಿಷ್ಟಮ್ ॥ ೫೨ ॥

(ನಮೋ ಮೀಢುಷ್ಟಮಾಯ........ವರ್ಷೀಯಸೇ ಚ)

ವೃಷ್ಟಿವರ್ಷುಕಪಯೋಧರರೂಪಂ
ಪಾಣಿಭೂಷಿತಶರಂ ಬಹುಶೂರಮ್ ।
ಹ್ರಸ್ವವಾಮನಮಹತ್ತರರೂಪಂ
ನೌಮಿ ರೂಪಸುಗುಣಾದಿಸಮೃದ್ಧಮ್ ॥ ೫೩ ॥

(ನಮೋ ವೃದ್ಧಾಯ........ಪ್ರಥಮಾಯ ಚ)

ನೌಮಿ ವೃದ್ಧವಯಸಂ ಶ್ರುತಿವೇದ್ಯಂ
ವರ್ಧಮಾನಮನಿಶಂ ಸ್ತುತಿವೃಂದೈಃ ।
ಸರ್ವಲೋಕಜನನಾದಪಿ ಪೂರ್ವಂ
ಜಾಗೃತಂ ಸಕಲಸಂಸದಿ ಮುಖ್ಯಮ್ ॥ ೫೪ ॥

(ನಮ ಆಶವೇ........ಶೀಭ್ಯಾಯ ಚ)

ವ್ಯಾಪಕಂ ನಿಖಿಲವಸ್ತುಷು ನಿತ್ಯಂ
ಸರ್ವತೋಗಮನಕೌಶಲವಿಜ್ಞಮ್ ।
ನೌಮಿ ಶೀಘ್ರಗಮನಂ ಹೃದಯಸ್ಥಂ
ಅಪ್ರವಾಹಜಮುಮೇಶಮಜಸ್ರಮ್ ॥ ೫೫ ॥

(ನಮ ಊರ್ಮ್ಯಾಯ........ದ್ವೀಪ್ಯಾಯ ಚ)

ಊರ್ಮಿಸಂಭವಮಹಂ ಬಹುವಾರಂ
ನೌಮ್ಯಧಿಷ್ಠಿತಮವಸ್ವನತೋಯಮ್ ।
ಸ್ರೋತಸಿ ಪ್ರಭವಮತ್ಯಯಮೀಶಂ
ತೋಯಮಧ್ಯಗತದೇಶನಿವಾಸಮ್ ॥ ೫೬ ॥

(ಆರನೆಯ ಅನುವಾಕ)

(ನಮೋ ಜ್ಯೇಷ್ಠಾಯ........ಅಪರಜಾಯ ಚ)

ವಂದೇ ವಿದ್ಯಾವಿಭವಸಮೃದ್ಧಂ
ವೃದ್ಧಂ ಬಾಲಂ ದ್ರವಿಣದರಿದ್ರಮ್ ।
ಪೂರ್ವಂ ಪಶ್ಚಾದಪಿ ಜಗತೋಽಸ್ಮಾತ್
ಸದ್ಬ್ರಹ್ಮೇಶಂ ಪ್ರಲಯಕೃಶಾನುಮ್ ॥ ೫೭ ॥

(ನಮೋ ಮಧ್ಯಮಾಯ........ಬುಧ್ನಿಯಾಯ ಚ)

ವಂದೇ ತಿರ್ಯಙ್ನರಸುರರೂಪೈಃ
ಮಧ್ಯೇ ಕಾಲೇ ಭವಮತಿಬಾಲಮ್ ।
ಧೇನ್ವಾದೀನಾಂ ಕಟಿಪರಭಾಗಾತ್
ಜಾತಂ ರುದ್ರಂ ತರುಮುಖಮೂಲಾತ್ ॥ ೫೮ ॥

(ನಮಃ ಸೋಭ್ಯಾಯ........ಕ್ಷೇಮ್ಯಾಯ ಚ)

ಪುಣ್ಯಾಪುಣ್ಯೋಭಯಗತಭೂಮಿಂ
ರಕ್ಷಾಬಂಧೋಚಿತಜನರೂಪಮ್ ।

ರುದ್ರಂ ವಂದೇ ಯಮಪುರಜಾತಂ
ನಿರ್ವಾಣಾರ್ಹಂ ನೃವರಮಜಸ್ರಮ್ ॥ ೫೯ ॥

(ನಮ ಉರ್ವರ್ಯಾಯ........ಅವಸಾನ್ಯಾಯ ಚ)
ಸಸ್ಯಾಢ್ಯಾಯಾಂ ಭುವಿ ಜನಿಮಂತಂ
ಧಾನ್ಯೋದ್ಭೇದಾಹಿತಖಲಜಾತಮ್ ।
ವೇದ್ಯಂ ಸರ್ವಶ್ರುತಿನಿಗಮಾಂತೈಃ
ಭಕ್ತ್ಯಾ ವಂದೇ ಮುಹುರಹಮೀಶಮ್ ॥ ೬೦ ॥

(ನಮೋ ವನ್ಯಾಯ........ಪ್ರತಿಶ್ರವಾಯ ಚ)
ವೃಕ್ಷಾತ್ಮಾನಂ ವನಭುವಿಜಾತಂ
ಕಕ್ಷೋತ್ಪನ್ನಂ ತೃಣತತಿರೂಪಮ್ ।
ಶಬ್ದಾತ್ಮಾನಂ ಶ್ರುತಮಹಿಮಾನಂ
ರುದ್ರಂ ವಂದೇ ಪ್ರತಿರವರೂಪಮ್ ॥ ೬೧ ॥

(ನಮ ಆಶುಷೇಣಾಯ........ಅವಭಿಂದತೇ ಚ)
ಭೂಯೋ ಭೂಯಸ್ತ್ವರಿತಗಸೇನಂ
ವಂದೇ ರುದ್ರಂ ದ್ರುತಗಶತಾಂಗಮ್ ।
ಶೂರಂ ಯುದ್ಧೇಷ್ವನುಪಮಧೀರಂ
ಧರ್ಮದ್ವೇಷಿಪ್ರಮಥನವೀರಮ್ ॥ ೬೨ ॥

(ನಮೋ ವರ್ಮಿಣೇ........ಶ್ರುತಸೇನಾಯ ಚ)
ಯೋಧಾತ್ಮಾನಂ ವಿಧೃತತನುತ್ರಂ
ವಂದೇ ರುದ್ರಂ ಶ್ರಿತರಥಗುಪ್ತಿಮ್ ।
ಶೀರ್ಷಣ್ಯೋರಶ್ಛದಯುತವೀಶಂ
ವೇದಖ್ಯಾತಂ ಪ್ರಥಿತಸುಸೈನ್ಯಮ್ ॥ ೬೩ ॥

(ಏಳನೆಯ ಅನುವಾಕ)

(ನಮೋ ದುಂದುಭ್ಯಾಯ........ಪ್ರಮೃಶಾಯ ಚ)
ದುಂದುಭಿಸಂಭವನಿಃಸ್ವನರೂಪಂ
ತಾಡನಸಾಧನದಂಡಸಮುತ್ಥಮ್ ।

ಧರ್ಷಣಶೀಲಮಶೇಷಮವಂತಂ
ನೌಮಿ ಸಮಗ್ರವಿಮರ್ಶಸಮರ್ಥಮ್ || ೬೪ ||

(ನಮೋ ದೂತಾಯ........ಇಷುಧಿಮತೇ ಚ)

ವೃತ್ತನಿವೇದಕಪೇಶಲರೂಪಂ
ಪ್ರೈಷಕರಂ ಪರಮಂ ಹಿತಮೀಶಮ್ |
ತೂಣಕೃಪಾಣವಿಭೂಷಿತಕಾಯಂ
ರುದ್ರಮಹಂ ಪ್ರಣಮಾಮ್ಯನುವೇಲಮ್ || ೬೫ ||

(ನಮಸ್ತೀಕ್ಷ್ಣೇಷವೇ........ಸುಧನ್ವನೇ ಚ)

ನೌಮ್ಯಹಮಾತ್ತಖರಾಶುಗಹಸ್ತಂ
ಬಿಭ್ರದದಭ್ರವರಾಯುಧಗಾತ್ರಮ್ |
ಶೋಭನಶೂಲಶರಾಸನಯುಕ್ತಂ
ಕೃತ್ಸ್ನಜಗತ್ಪರಿಪಾಲನಸಕ್ತಮ್ || ೬೬ ||

(ನಮಃ ಸ್ರುತ್ಯಾಯ........ನೀಪ್ಯಾಯ ಚ)

ಅಲ್ಪತರಾಧ್ವಭವಾತ್ಮಕಮೀಶಂ
ಸಂಚರಣಾರ್ಹಮಹಾಪಥಜಾತಮ್ |
ಕ್ಷುದ್ರಸರಿದ್ಭವಮಾಶ್ರಿತಲಿಂಗಂ
ನಿರ್ಜಲದೇಶಭವಂ ಬಹು ವಂದೇ || ೬೭ ||

(ನಮಃ ಸೂದ್ಯಾಯ........ವೈಶಂತಾಯ ಚ)

ಕರ್ದಮಸಂಕುಲದೇಶಜಮೀಶಂ
ತಾಮರಸಾಕರಪುಷ್ಕರರೂಪಮ್ |
ನೌಮಿ ನದೀಗತನಿರ್ಮಲತೋಯಂ
ಮಂಜುಲಪಲ್ವಲಜಾತಮಜಸ್ರಮ್ || ೬೮ ||

(ನಮಃ ಕೂಪ್ಯಾಯ........ಅವರ್ಷ್ಯಾಯ ಚ)

ಕೂಪಗಗರ್ತಗಜೀವನರೂಪಂ
ವರ್ಷಣಜನ್ಯಜಲಾತ್ಮಕಮೀಶಮ್ |

ರುದ್ರಮುವರ್ಷಣಜಾತಸರಸ್ವ-
ತ್ತ್ರೋಯಮಹಂ ಪ್ರಣಮಾಮ್ಯತಿಮಾತ್ರಮ್ ॥ ೬೯ ॥

(ನಮೋ ಮೇಘ್ಯಾಯ........ಆತಪ್ಯಾಯ ಚ)

ನೌಮಿ ಮನೋಹರವಾರಿದರೂಪಂ
ಚಂಚಲವಿದ್ಯುದುದಂಚಿತಮಾಶಮ್ ।
ಭಾಸುರಶಾರದನೀರದಜಾತಂ
ತಪ್ತಜಲೇ ಭವಮಾತಪವೃಷ್ಟಮ್ ॥ ೭೦ ॥

(ನಮೋ ವಾತ್ಯಾಯ ಚ........ವಾಸ್ತುಪಾಯ ಚ)

ಮಾರುತವರ್ಷಭವಾತ್ಮಕಮಾಶಂ
ಘೋರಲಯೋದ್ಭವವರ್ಷಣರೂಪಮ್ ।
ನೌಮಿ ಗವಾಶ್ವಧನಾದಿಸಮಗ್ರಂ
ವೇಶ್ಮನಿವೇಶನಪಾಲಮಜಸ್ರಮ್ ॥ ೭೧ ॥

(ಎಂಟನೆಯ ಅನುವಾಕ)

(ನಮಃ ಸೋಮಾಯ..........ಅರುಣಾಯ ಚ)

ಹೇ ರುದ್ರ ಸೋಮಕ್ರತುಚಂದ್ರರೂಪಿಣೇ
ಗೌರೀಸಹಾಯಾಯ ಭವಾರ್ತಿಶೋಷಿಣೇ ।
ಸಂಧ್ಯಾಮುಖಾರಕ್ತವಿಭಾಕರಾತ್ಮನೇ
ಕಾಂತಾರುಣಾಭಾಯ ಶಿವಾಯ ತೇ ನಮಃ ॥ ೭೨ ॥

(ನಮಃ ಶಂಗಾಯ........ಭೀಮಾಯ ಚ)

ಶಿವಂಕರಾಯಾತ್ಮಭವಾದಿಜೀವಿನಾಂ
ಪಶೂಪಮಾನಾಂ ನಿವಹಸ್ಯ ಪಾಲಿನೇ ।
ವಿರೋಧಿವಿಧ್ವಂಸನರೋಷವೇಷಿಣೇ
ಭಯಂಕರಾಯಾಸ್ತು ಶಿವಾಯ ತೇ ನಮಃ ॥ ೭೩ ॥

(ನಮೋ ಅಗ್ರೇವಧಾಯ ಚ........ಹನೀಯಸೇ ಚ)

ವಧೇ ಸಮರ್ಥಾಯ ಪುರೋಽರಿಸಂತತೇಃ
ತಥೈವ ದೂರಸ್ಥಿತದುಷ್ಟಸಂಹತೇಃ ।
ನಿಹಂತೃರೂಪಾಯ ಸಮಸ್ತಸಂಕ್ಷಯೇ
ವಿನಾಶದಕ್ಷಾಯ ಶಿವಾಯ ತೇ ನಮಃ ॥ ೭೪ ॥

(ನಮೋ ವೃಕ್ಷೇಭ್ಯಃ........ನಮಸ್ತಾರಾಯ)

ಪಾಲಾಶಕೇಶಚ್ಛದಪಂಕ್ತಿಮಂಜುಲ-
ಸ್ವರ್ಗದ್ರುಮಾದ್ಯಾಖಿಲಭೂರುಹಾತ್ಮನೇ ।
"ಓಂ"ಕಾರರೂಪಾಯ ಭವೇ ನಿಮಜ್ಜತಾಂ
ಸಂತಾರಕಾಯಾಸ್ತು ಶಿವಾಯ ತೇ ನಮಃ ॥ ೭೫ ॥

(ನಮಃ ಶಂಭವೇ .......ಮಯಸ್ಕರಾಯ ಚ)

ಹಿತೈಕತಾನಾಯ ಸುಖೈಕಹೇತವೇ
ನೃಣಾಮಮುತ್ರೇಹ ಚ ಸೌಖ್ಯಕಾರಿಣೇ ।
ಸ್ರಗಾದಿಜಾಮೋದ, ವಿಮುಕ್ತಿದಾಯಿನೇ
ಗುರುಸ್ವರೂಪಾಯ ಶಿವಾಯ ತೇ ನಮಃ ॥ ೭೬ ॥

(ನಮಃ ಶಿವಾಯ........ಕೂಲ್ಯಾಯ ಚ)

ಮಾಂಗಲ್ಯರೂಪಾಯ ವಿಕಲ್ಮಷಾತ್ಮನೇ
ಗುಣತ್ರಯಾತೀತಪರಾತ್ಮರೂಪಿಣೇ ।
ಸರಿತ್ಸುತೀರ್ಥಾಮಲಕೂಲವಾಸಿನೇ
ಸುಖಪ್ರದಾಗ್ರ್ಯಾಯ ಶಿವಾಯ ತೇ ನಮಃ ॥ ೭೭ ॥

(ನಮಃ ಪಾರ್ಯಾಯ........ಉತ್ತರಣಾಯ ಚ)

ಸಂಸಾರಪಾರಸ್ಥಿತಮುಕ್ತರೂಪಿಣೇ
ತೀರಾಂತರೇ ಕಾಮ್ಯಫಲಪ್ರದಾಯಿನೇ ।
ಪಾಪೌಘಸಂತಾರಣಮಂತ್ರರೂಪಿಣೇ
ನಾವೇ ಭವಸ್ಯಾಸ್ತು ಶಿವಾಯ ತೇ ನಮಃ ॥ ೭೮ ॥

(ನಮ ಆತಾಯರ್ಾಯ ಚಾಲಾದ್ಯಾಯ ಚ)

ತತ್ತ್ವಂ ವಿದಿತ್ವಾಪಿ ಚ ಕರ್ಮಶೇಷತಃ
ಸಂಸಾರಘೋರಾರ್ಣವಜನ್ಮನೇ ಪುನಃ |
ಕಾಮ್ಯಂ ಸಮಗ್ರಂ ಫಲಮಶ್ನತೇ, ಭವೇ
ಬಂಭ್ರಮ್ಯಮಾಣಾಯ ಶಿವಾಯ ತೇ ನಮಃ ॥ ೭೯ ॥

(ನಮಃ ಶಷ್ಪ್ಯಾಯ........ಪ್ರವಾಹ್ಯಾಯ ಚ)

ತಂ ನೌಮಿ ಗಂಗಾದಿತಟೇ ಯ ಆಸ್ಥಯಾ
ಸ್ನಾನಾದಿಸಕ್ತಃ ಸುಕೃತೀ ಪ್ರಕಾಶತೇ |
ದರ್ಭಾದಿಡಿಂಡೀರಭವಾಯ ಸೈಕತ-
ಸ್ರೋತೋಜರೂಪಾಯ ಶಿವಾಯ ತೇ ನಮಃ ॥ ೮೦ ॥

(ಒಂಭತ್ತನೆಯ ಅನುವಾಕ)

(ನಮ ಇರಿಣ್ಯಾಯ........ಕ್ಷಯಣಾಯ ಚ)

ಸತತಂ ನಮಾಮಿ ಭವಮೂಷರಕ್ಷಿತೌ
ಪ್ರಚುರಪ್ರಚಾರಿತಸದಧ್ವಸಂಭವಮ್ |
ಅತಿಕುತ್ಸಿತಾಶ್ಮಘನಶಾರ್ಕರಸ್ಥಿತಂ
ನಿಲಯಾರ್ಹದೇಶನಿವಸಂತಮೀಶ್ವರಮ್ ॥ ೮೧ ॥

(ನಮಃ ಕಪರ್ದಿನೇ........ಗೃಹ್ಯಾಯ ಚ)

ವಿಕಟಾಟವೀಸಮುಸಟಾವಿಶಂಕಟಂ
ಕಮನೀಯಕುಂತಲಕಲಾಪಸುಂದರಮ್ |
ಪುರತಃ ಸ್ಥಿತಂ ಜನಿಮತಾಂ ಸದಾ ಶಿವಂ
ಪ್ರಣಮಾಮಿ ಗೋಷ್ಠಗೃಹಸಂಭವಾತ್ಮಕಮ್ ॥ ೮೨

(ನಮಸ್ತಲ್ಪ್ಯಾಯ............ಗಹ್ವರೇಷ್ಠಾಯ ಚ)

ಶಯನೇ ಶಯಾನಮನವದ್ಯಸೌಧಜಂ
ಸಕಲಾಶ್ರಿತಾಲಿಸುಲಭಂ ಜಗತ್ಪ್ರಭುಮ್ |

ಪ್ರಣಮಾಮಿ ದುರ್ಗಗಹನೋದ್ಭವಾತ್ಮಕಂ
ವಿಷಮಾದ್ರಿಕಂದರಗುಹಾಂತರಸ್ಥಿತಮ್ ॥ ೮೩ ॥

(ನಮೋ ಹ್ರದಯ್ಯಾಯ........ಹರಿತ್ಯಾಯ ಚ)

ಪ್ರಣಮಾಮ್ಯಗಾಧಸಲಿಲಾಶಯಾಶ್ರಯಂ
ತುಹಿನೋದಕಾತ್ತಜನಿರೂಪಮೀಶ್ವರಮ್ ।
ಪರಮಾಣ್ವವಸ್ಥಿತಮಸೂಕ್ಷ್ಮರೇಣುಜಂ
ವಿರಸಾರ್ದ್ರವಸ್ತುಭವರೂಪಮನ್ವಹಮ್ ॥ ೮೪ ॥

(ನಮೋ ಲೋಪ್ಯಾಯ........ಪರ್ಣಶದ್ಯಾಯ ಚ)

ಕಠಿನಪ್ರದೇಶಭವರೂಪಮೀಶ್ವರಂ
ಪ್ರಣಮಾಮಿ ನಿತ್ಯಮುಲಪಾದಿಸಂಭವಮ್ ।
ವಸುಧಾತಲಾಮಲತರಂಗಜಾತ್ಮಕಂ
ಸುಪಲಾಶನೀರಸದಲಾವಲೀಭವಮ್ ॥ ೮೫ ॥

(ನಮೋಽಪಗುರಮಾಣಾಯ........ಪ್ರಖ್ಖಿದತೇ ಚ)

ಅರಿವರ್ಗನಿಗ್ರಹಕೃತೇ ನಮಾಮಿ ರುದ್ರಂ
ಸತತೋದ್ಯದಾಯುಧಕರಂ ಪುರುಪ್ರಚಂಡಮ್ ।
ಅಭಿತಃ ಪ್ರಹಾರನಿರತಂ ಯಥಾಪರಾಧಂ
ಪರಿಪೀಡಯಂತಮಧಿಕಂ ಚ ಮನಾಗಜಸ್ರಮ್ ॥ ೮೬ ॥

(ನಮೋ ವಃ........ಹೃದಯೇಭ್ಯಃ)

ನಿಜಭಕ್ತಪಂಕ್ತಿವರವಿತ್ತದಾನಶೌಂಡಾನ್
ಸುರವೃಂದಹೃದ್ಯಹೃದಯಾರವಿಂದವಾಸಾನ್ ।
ಸ್ವವಿಲಾಸಕಲ್ಪಿತಚರಾಚರಪ್ರಪಂಚಾನ್
ಪ್ರಣಮಾಮಿ ವಃ ಸತತಮೀಶ್ವರಾಂಶಭೂತಾನ್ ॥ ೮೭ ॥

(ನಮೋ ವಿಕ್ಷೀಣಕೇಭ್ಯಃ........ಆಮೀವತ್ಕೇಭ್ಯಃ)

ಅವಿನಾಶಿನೋಽನಿಶಮಭಕ್ತದುಃಖದಾತ್ರ್ಯಾನ್
ಪ್ರಿಯವಸ್ತುಮಾರ್ಗಣಚಣಾನ್ ಶಿವಾಂಶಭೂತಾನ್ ।

ನಿಹತಾಖಿಲಾಘನಿವಹಾನ್ ವಿಜೃಂಭಮಾಣಾನ್
ಪರಿತಃ ಪುನಃ ಪುನರಹಂ ನಮಾಮಿ ಯುಷ್ಮಾನ್ ॥ ೮೮ ॥

(ಹತ್ತನೆಯ ಅನುವಾಕ)

(ದ್ರಾಪೇ ಅಂಧಸಃ........ಕಿಂಚನಾಮಮತ್)

ದುಷ್ಕರ್ಮದುಃಖದ ವಿರಕ್ತಪತೇಽನ್ನಸಂಕ್ತೇಃ
ಗೌರೀವಿಭೂಷಿತನಿಜಾರ್ಧತನೋ ಮಹಾತ್ಮನ್ ।
ಮಾ ಭೀಷಯಾತ್ಮಜಗವಾದಿಕಮಸ್ಮದೀಯಂ
ನಾಶಂ ರುಜಂ ಚ ಮಮ ಕಿಂಚನ ವಸ್ತು ಮಾಗಾತ್ ॥೮೯॥

(ಯಾ ತೇ ರುದ್ರ........ಜೀವಸೇ)

ಹೇ ರುದ್ರ ಮಂಗಲಕರಂ ತವ ಯಚ್ಛರೀರಂ
ದಿವ್ಯೌಷಧಂ ಸತತಮಾಪದಪೋಹಶಕ್ತಮ್ ।
ಸಂಸಾರರೋಗಹರಭೇಷಜಮಾತ್ಮಬೋಧಾತ್
ತೇನಾಶು ನಃ ಸುಖಯ ಜೀವಯಿತುಂ ದಯಾಬ್ಧೇ ॥ ೯೦ ॥

(ಇಮಾಗ್ಂ ರುದ್ರಾಯ........ಅನಾತುರಮ್)

ಹೇ ರುದ್ರ ನೋ ಮತಿಮಿಮಾಂ ಪರಿಪೋಷಯಾಮಃ
ನಿರ್ವೈರಿಣೋ ಬಲವತಸ್ತವ ಪೂಜನಾದೌ ।
ಸ್ಯಾನ್ನಃ ಸುಖಂ ಸುತಗವಾದಿತತೇಃ ಕಪರ್ದಿನ್
ಅಸ್ಮತ್ಪುರೇ ಸ್ಥಿತಮಶೇಷಮರೋಗಮೃದ್ಧಮ್ ॥ ೯೧ ॥

(ಮೃಡಾ ನೋ ರುದ್ರ... ....ಪ್ರಣೀತೌ)

ಹೇ ರುದ್ರ ನಃ ಸುಖಯ ನಿತ್ಯಸುಖಂ ವಿಧೇಹಿ
ತ್ವಾಂ ನಾಶಿತಾಸ್ಮದಘಮೀಶ ಭಜೇ ಪ್ರಣಾಮೈಃ ।
ಶೋಕಾತ್ ಪೃಥಕ್ ಸುಖಮಶೇಷವಿದಾ ವಿಧಾತ್ರಾ
ಪ್ರಾದಾಯಿ ಯತ್ ತದುಪಯಾಮ ತವ ಪ್ರಸಾದಾತ್ ॥೯೨॥

(ಮಾ ನೋ ಮಹಾಂತಂ........ರೀರಿಷಃ)

ಗರ್ಭಸ್ಥಪೋತಮನುಕಂಪ್ಯ ಶಿಶುಂ ಯುವಾನಂ
ಸಂತಾನದಂ, ಪಿತೃಪಿತಾಮಹಮಾತೃಮುಖ್ಯಾನ್ ।
ಹೇ ರುದ್ರ ನಃ ಪ್ರಿಯತಮಂ ಚ ಶರೀರಜಾತಂ
ಮಾ ಮಾರಯಾನಿಶಮುಮೇಶ ನಮೋಽಸ್ತು ಭೂಯಃ ॥೯೩॥

(ಮಾನಸ್ತೋಕೇ........ವಿಧೇಮ ತೇ)

ಸಂಜಾತಮನ್ಯುರಪಿ ರುದ್ರ ಮದೀಯಭೃತ್ಯಾನ್
ಮಾ ಮಾರಯಾರ್ಭಕಸುತಾಶ್ವಗವಾದಿಕಂ ನಃ ।
ಮಾ ನಾಶಯಾಯುರಪಿ ಕಿಂಚಿದಿಹಾಸ್ಮದೀಯಂ
ತ್ವಾಮರ್ಚಯಾಮಿ ಬಹುಶೋ ಹವಿಷಾ ಪ್ರಣಾಮೈಃ ॥೯೪॥

(ಆರಾತ್ತೇ........ದ್ವಿಬರ್ಹಾಃ)

ಹೇ ರುದ್ರ ಗೋಪುರುಷಭೃತ್ಯಗಣಪ್ರಹಂತುಃ
ಘೋರಾ ತನೂಸ್ತವ ಸದಾಽಸ್ತು ಸುದೂರಮಸ್ಮತ್ ।
ಶಾಂತಾ ತ್ವಿಹೈತು ಪರಿಪಾಲಯ ದೇಹಿ ಸೌಖ್ಯಂ
ಲೋಕದ್ವಯಪ್ರಥಿತಮಾಶ ವದಾಧಿಕಾನ್ ನಃ ॥ ೯೫ ॥

(ಸ್ತುಹಿ ಶ್ರುತಂ........ಸೇನಾಃ)

ಹೇ ರುದ್ರ ನಿತ್ಯತರುಣ ಶ್ರುತ ಹೃನ್ನಿವಾಸಿನ್
ಸಂಹರ್ತುಮುಗ್ರ ಮೃಗರಾಡಿವ ಭೀಷಣ ತ್ವಾಮ್ ।
ಸ್ತೌಮಿ ಸ್ತುತಃ ಸುಖಯ ನೋ ಜರಣೀಯಕಾಯಂ
ಹಿಂಸಂತ್ವಿಹಾಸ್ಮದಿತರಂ ತವ ಭೃತ್ಯವರ್ಗಾಃ ॥ ೯೬ ॥

(ಪರಿಣೋ ರುದ್ರಸ್ಯ........ಮೃಡಯ)

ಹೇ ರುದ್ರ ನಃ ಪರಿತ ಆಯುಧಮುಗ್ರಬುದ್ಧಿಂ
ಕೋಪೋಜ್ಜ್ವಲಸ್ಯ ತವ ವರ್ಜಯ ಹಂತುಮಿಚ್ಛೋಃ ।
ಚಾಪಾನ್ ಸ್ಥಿರಾನವತನುಷ್ವ ಹವಿಷ್ಮದರ್ಥಂ
ಇಷ್ಟಾರ್ಥವರ್ಷಕ ಸುಖಂ ನಯ ಪುತ್ರಪೌತ್ರಾನ್ ॥೯೭॥

(ನಿಷಂಘುಷ್ಟವು........ಅಗಹಿ)

ಕಾಮಾಭಿವರ್ಷುಕ ಶಿವಂಕರ ನಃ ಪ್ರಶಾಂತಃ
ಹೇ ರುದ್ರ ಶೋಭನಮನಾ ಭವ ಸರ್ವಕಾಲಮ್ ।
ಶಾರ್ದೂಲಚರ್ಮ ಪರಿಧಾಯ ದಧತ್ ಪಿನಾಕಂ
ಏಹ್ಯುಚ್ಚಶಾಖಿನಿ ನಿಧಾಯ ತವಾಯುಧಂ ತ್ವಮ್ ॥೯೮॥

(ವಿಕಿರಿದ........ವಪನ್ತು ತಾಃ)

ಕಾಲುಷ್ಯಶೂನ್ಯ ಭಗವನ್ ಭವರೋಗಹರ್ತಃ
ಹೇ ರುದ್ರ ತೇ ಭವತು ನಃ ಸತತಂ ಪ್ರಣಾಮಃ ।
ಯಾನ್ಯಾಯುಧಾನ್ಯಗಣಿತಾನಿ ತವಾತಿವೇಲಂ
ನಿಘ್ನಂತು ತಾನ್ಯರಿಸಮೂಹಮಿಹಾಸ್ಮದನ್ಯಮ್ ॥ ೯೯ ॥

(ಸಹಸ್ರಾಣಿ ಸಹಸ್ರಧಾ........ಕೃಧಿ)

ಹೇ ರುದ್ರ ಹಸ್ತಯುಗಲೇ ತವ ಹೇತಯೋ ಯಾಃ
ಈಶಾನ ದೇವ ಭಗವನ್ ಪ್ರಸಹಸ್ರಸಂಖ್ಯಾಃ ।
ಖಡ್ಗತ್ರಿಶೂಲಧನುರಾದಿಸಹಸ್ರರೂಪಾಃ
ತೂರ್ಣಂ ಪರಾಙ್ಮುಖಮುಖಾ ಕುರು ತಾ ಮಹಾತ್ಮನ್ ॥

(ಹನ್ನೊಂದನೆಯ ಅನುವಾಕ)

(ಸಹಸ್ರಾಣಿ ಸಹಸ್ರಶೋ........ತನ್ಮಸಿ)

ಬಹುಪ್ರಕಾರಾ ಬಹವಃ ಪೃಥಿವ್ಯಾಂ
ವಸಂತಿ ರುದ್ರಾ ವಸುಧಾಧಿಪಾ ಯೇ ।
ತೇಷಾಂ ಚ ಚಾಪಾನವರೋಪಿತಜ್ಯಾನ್
ಸಂಸ್ಥಾಪಯಾಮೋ ಬಹುಯೋಜನಾಂತೇ ॥ ೧೦೧ ॥

(ಅಸ್ಮಿನ್ ಮಹತಿ........ಕ್ಷಮಾಚರಾಃ)

ಸಂದೃಶ್ಯಮಾನೇಽಬ್ಧಿಸಮೇಽನ್ತರಿಕ್ಷೇ
ವಸಂತಿ ರುದ್ರಾ ಗಗನಾಧಿಪಾ ಯೇ ।

ಕಾಕೋಲಕಾಂತಸ್ಫಟಿಕಾಭಕಂಠಾಃ
ರಸಾತಲೇ ಯೇ ವಿಚರನ್ತಿ ರುದ್ರಾಃ || ೧೦೨ ||

(ನೀಲಗ್ರೀವಾಃ........ವಿಲೋಹಿತಾಃ)

ವಿಷಾಸಿತಾಲಿಂಗಿತಗೌರಕಂಠಾಃ
ವಸಂತಿ ರುದ್ರಾಸ್ತ್ರಿದಶಾಲಯೇ ಯೇ |
ಕಾಲಾಭಕಂಠಾ ಬಹುರಕ್ತವರ್ಣಾಃ
ಯೇ ಸಂತಿ ವೃಕ್ಷೇಷು ಚ ಪಿಂಜರಾಭಾಃ || ೧೦೩ ||

(ಯೇ ಭೂತಾನಾಂ........ಜನಾನ್)

ಜಟಾಧರಾ ಮುಂಡಿತಮೂರ್ಧಜಾ ಯೇ
ಭೂತಾಧಿನಾಥಾ ನಿವಸನ್ತಿ ರುದ್ರಾಃ |
ಅನ್ನೇಷು ಪಾನೇಷು ಸದಾ ವಸಂತಃ
ಹಿಂಸಂತಿ ರುದ್ರಾಃ ಪಿಬತೋ ಜನಾನ್ ಯೇ || ೧೦೪ ||

(ಯೇ ಪಥಾಂ........ನಿಷಂಗಿಣಃ)

ವೇದೋಕ್ತಲೋಕೋಕ್ತಪಥಾಭಿಪಾಲಾಃ
ಅನ್ನಪ್ರದಾ ಯೇಽರಿವಿನಾಶದಕ್ಷಾಃ |
ಕ್ಷೇತ್ರಾಣಿ ಪುಣ್ಯಾನ್ಯಭಿರಕ್ಷಿತುಂ ಯೇ
ರುದ್ರಾಶ್ಚರಂತ್ಯಾಯುಧಿನಃ ಸಖಡ್ಗಾಃ || ೧೦೫ ||

(ಯ ಏತಾವಂತಶ್ಚ........ತನ್ಮಸಿ)

ಏತಾವತೋಕ್ತಾ ಅಧಿಕಾ ಇತೋ ಯೇ
ರುದ್ರಾಃ ಸ್ಥಿತಾ ವ್ಯಾಪ್ಯ ದಿಶಶ್ಚ ಸರ್ವಾಃ |
ತೇಷಾಂ ಚ ಚಾಪಾನವತಾರಿತಜ್ಯಾನ್
ಸಂಸ್ಥಾಪಯಾಮೋ ಬಹುಯೋಜನಾಂತೇ || ೧೦೬ ||

(ನಮೋ ರುದ್ರೇಭ್ಯಃ........ತೇಭ್ಯೋ ನಮಃ)

ಯೇ ರುದ್ರಾ ನಿವಸಂತಿ ಭೂಮಿವಲಯೇಽನ್ನಾಜಿಹ್ಮಗಾಲಂಕೃತಾಃ
ಯೇ ವಾತಾಶುಗಮಂಡಿತಾ ವಿರಚಿತಾವಾಸಾ ನಭೋಮಂಡಲೇ |

ಯೇ ಚ ಸ್ವೀಕೃತನಾಕಲೋಕನಿಲಯಾ ವರ್ಷೇಷುಭಿರ್ಭೂಷಿತಾಃ
ತೇಭ್ಯಃ ಪ್ರಾಂಜಲಿಬಂಧಮಸ್ತು ಸಕಲಾಸ್ವಾಶಾಸ್ವಜಸ್ರಂ ನಮಃ ||೧೦೬||

(ತೇ ನೋ ಮೃಡಯನ್ತು........ಜಂಭೇ ದಧಾಮಿ)

ಹೇ ರುದ್ರಾ ಭವತಾಂ ವಿದಾರಿತಮುಖೇ ಸಂಸ್ಥಾಪಯಾಮೋ ವಯಂ
ದ್ವಿಷ್ಮೋ ಯಂ ಸಕಲಂ ಸಪತ್ನನಿವಹಂ ಯೋಽಸ್ಮಾಂಶ್ಚ ವಿದ್ವೇಷ್ಟಿ ತಮ್
ಭಕ್ತವ್ಯೂಹಕೃತಾಮಿತಾನತಿಲಸತ್ ಫುಲ್ಲಾಬ್ಜತುಲ್ಯಾಂಘ್ರಯಃ
ಶ್ರೇಯಃ ಶಾಶ್ವತಮಾಶು ನಃ ಪ್ರದಿಶತಾಕಂಪಾನುಕಂಪಾಮಯಾಃ ||
|| ೧೦೮ ||

(ಉಪಸಂಹಾರ)

ಅಂಬಾಲಿಂಗನಮಿಲಿತಾಂಬುಜಯುಗೇ ಬಾಲೇಂದುಚೂಡಾಮಣೌ
ಉದ್ಯದ್ಭಾನುನಿಭಾಭಭಾಲನಯನೇ ಮಂದಸ್ಮಿತಾಸ್ಯಾಂಬುಜೇ |
ಮಂತವ್ಯಶ್ರುತಿಸಾರರುದ್ರವಿವೃತಿಶ್ಲೋಕಪ್ರಸೂನಾಂಜಲಿಃ
ತತ್ಸದ್ರೂಪಿಣಿ ರುದ್ರ ಭೋಸ್ತ್ವಯಿ ಶಿವೇ ವಿಶ್ವೇಶ್ವರೇಣಾರ್ಪಿತಃ ||

ಇತಿ ಶ್ರೀರುದ್ರವಿವೃತಿಃ ಸಂಪೂರ್ಣಾ

# ಅ ಭಿ ಪ್ರಾ ಯ ಪ ತ್ರ

ತುರುವೇಕೆರೆ                                    ಮೈಸೂರು.
ವೇ|| ವಿಶ್ವೇಶ್ವರದೀಕ್ಷಿತರು.          ಕಾಳಯುಕ್ತಿ ಶುಚಿ ಶುಕ್ಲ ಚತುರ್ಥೀ

ವೃಕ್ಷಸ್ಯ ಮೂಲಸೇಕೇನ ಶಾಖಾಃ ಪುಷ್ಯಂತಿ ವೈ ಯಥಾ।
ಶಿವೇ ರುದ್ರಜಪಾತ್ ಪ್ರೀತೇ ಪ್ರೀತಾ ಏವಾಸ್ಯ ದೇವತಾಃ ॥

ಬುಡದಲ್ಲಿ ನೀರೆರೆದರೆ ಕೊಂಬೆಗಳೆಲ್ಲ ಚಿಗುರಿ ಪುಷ್ಪಿತವಾಗುವದಿಲ್ಲವೆ? ಅಂತೆಯೇ ಶಿವನು ಪ್ರೀತನಾದರೆ ದೇವತೆಗಳೆಲ್ಲರೂ ಪ್ರೀತರಾಗುವರು. ಪರ ಶಿವನ ಪ್ರಸನ್ನತೆಗೆ ರುದ್ರಾಧ್ಯಾಯವು ಮಿಗಿಲಾದ ಸಾಧನ. ಇದು ಜಪ, ಹೋಮ, ಅಭಿಷೇಕ, ಅರ್ಚನಾದಿ ಬಹುವಿಧವಾದ ಕರ್ಮಗಳಲ್ಲಿ ವಿನಿಯುಕ್ತ ವಾಗಿದೆ. ಕರ್ಮದ ಆಚರಣೆಯಲ್ಲಿ ಅರ್ಥದ ಅರಿವು ಅಗತ್ಯವೆನ್ನುವದನ್ನು ಮತ್ತೆ ಹೇಳಬೇಕಾಗಿಲ್ಲ. ಅರ್ಥವನ್ನರಿತು ಆಚರಿಸುವ ಕರ್ಮವು ಹೆಚ್ಚು ವೀರ್ಯವತ್ತಾಗುವದು. "ಯದೇವ ವಿದ್ಯಯಾ ಕರೋತಿ ತದೇವ ವೀರ್ಯವತ್ತರಂ ಭವತಿ."

ಪ್ರಕೃತ, ಈ ಪುಸ್ತಕದಲ್ಲಿ ಶ್ರೀರುದ್ರಾಧ್ಯಾಯದ ಅರ್ಥವು ತಿಳಿಯಾದ ಕನ್ನಡಭಾಷೆಯಲ್ಲಿ ವಿವರಿಸಲ್ಪಟ್ಟಿದೆ. ಜನಸಾಮಾನ್ಯರಿಗೂ ಸುಲಭವಾಗಿ ತಿಳಿಯುವಂತೆ ಪ್ರತಿಮಂತ್ರದ ಅರ್ಥವೂ ಸರಳವಾಗಿ ನಿರೂಪಿತವಾಗಿದೆ. ಅಂತೆಯೇ ಈ 'ರುದ್ರಭಾಷ್ಯಪ್ರಕಾಶ'ವು ಅನ್ವರ್ಥವಾಗಿದೆ. ಸಂಭವಿಸಬಹುದಾದ ಓದುಗರ ಸಂಶಯವು ದೂರವಾಗಿ, ತತ್ತ್ವಾರ್ಥವು ಹೃದಯವನ್ನು ತಟ್ಟುವಂತಿದೆ. ಅಲ್ಲಲ್ಲಿ ಉಪನಿಷದರ್ಥನಿರೂಪಣೆ, ಮಿಗಿಲಾಗಿ ಪುರಾಣ, ಇತಿಹಾಸಾದಿಗಳ ಜೋಡಣೆ– ಈ ಗ್ರಂಥದ ಸೊಬಗನ್ನು ಹೆಚ್ಚಿಸಿದೆ.

ಈ ತೆರನಾದ ಗ್ರಂಥಗಳ ಆವಶ್ಯಕತೆಯು ಇಂದು ನಮ್ಮ ಸಮಾಜಕ್ಕೆ ಬಹಳವಾಗಿದೆ. ಇಂತಹ ಉಪಯುಕ್ತಗ್ರಂಥಗಳು ಇನ್ನೂ ಹೊರಬರುವಂತಾಗಲಿ. ಆಸ್ತಿಕರೆಲ್ಲರೂ ಈ ಗ್ರಂಥದ ಪ್ರಯೋಜನವನ್ನು ಪೂರ್ಣವಾಗಿ ಪಡೆಯುವಂತಾಗಲಿ.

——— ———

# ವಿಷಯಾನುಕ್ರಮಣಿಕೆ

# ತಿ ದ್ದು ಪ ಡಿ

(ದಯಮಾಡಿಟ್ಟು ಗ್ರಂಥವನ್ನು ಓದುವ ಮುಂಚೆ ಈ ತಿದ್ದುಪಡಿಯನ್ನು ಅಳವಡಿಸಿ ಕೊಳ್ಳಬೇಕಾಗಿ ಕೋರಿದೆ :- )

| ಪುಟ | ಸಾಲು | ಇರುವದು | ಇರಬೇಕಾದದ್ದು |
|---|---|---|---|
| ೧ | ೬ | ಈ ಭಾಗವು | ಈ ಸಂಹಿತಾಭಾಗವು ಹೆಚ್ಚಾಗಿ |
| ೬ | ೨ | ಮನಸ್ಸಿಗೆ | ಮನಸ್ಸಿನಲ್ಲಿ |
| ೧೨ | ಕೆ. ೬ | ಏಕೆಂದರೆ | ಏನೆಂದರೆ |
| ೧೭ | ಕೆ. ೫ | ಕೆಂಪಾಗಿರುವನೂ | ಕೆಂಪಾಗಿರುವವನೂ |
| ೧೯ | ೩ | ದರಿಸಿದ್ದಾನೆ | ಧರಿಸಿದ್ದಾನೆ |
| ೧೯ | ೧೩ | ತೊರಿಕೊಂಡು | ತೋರಿಕೊಂಡು |
| ೨೩ | ೧೧ | ಪರಾಜ್ಮು | ಪರಾಜ್ಮುಖ |
| ೨೪ | ೧೧ | ಧನಸ್ಸಂಟೋ | ಧನುಸ್ಸಂಟೋ |
| ೨೮ | ಕೆ. ೭ | ಮಹಾದೇವನೂ | ಮಹಾದೇವನು |
| ೩೬ | ಕೆ. ೨ | ಎಂದರ್ಥ | ಎಂದರ್ಥ. |
| ೪೧ | ೨ | ಆವ್ಯಾಧಿಗಳ | ಆವ್ಯಾಧಿನಿಗಳ |
| ೪೧ | ೯ | ಎಲ್ಲ | ಎಲ್ಲಾ |
| ೪೨ | ಕೆ. ೬ | ಮಾಡಹುದು | ಮಾಡಬಹುದು |
| ೪೩ | ೭ | ಯಾವ | ಯಾವದೇ |
| ೪೮ | ಕೆ. ೯ | ತೊರಿ | ತೋರಿ |
| ೫೧ | ಕೆ.೧೦ | ಆಶ್ವಪತಿಯು | ಅಶ್ವಪತಿಯು. |
| ೫೩ | ಕೆ.೧೨ | ಘುಂಪು | ಗುಂಪುಗಳು |
| ೫೪ | ಕೆ. ೪ | ಸೃಸ್ಟಿ | ಸೃಷ್ಟಿ |
| ೫೯ | ಕೆ. ೫ | ಅವರುಗಳು | ಅವರುಗಳೂ |
| ೫೯ | ಕೆ. ೪ | ಬಡಗಿಗಳೂ | ಬಡಗಿಗಳು |
| ೬೦ | ಕೆ.೧೦ | ಶ್ವರೂಪ | ಸ್ವರೂಪ |
| ೬೩ | ೨ | ಆತ್ಮನಿಗೆ....ಆಂಟಲಾರವು. | ಆತ್ಮನಿಗೆ....ಅಂಟಲಾರವು. |
| ೬೬ | ೫ | ಭಂಗವಂತನು | ಭಗವಂತನು |
| ೬೭ | ಕೆ. ೮ | ಎಂರ್ಥದಲ್ಲಿಯೂ | ಎಂಬರ್ಥದಲ್ಲಿಯೂ |
| ೭೩ | ೬ | ಆಗಿಯೇ | ಆಗಿಯೇ |

| | | | |
|---|---|---|---|
| ೭೫ | ಕೆ. ೨ | ಪೂಜ್ಯರಾದವವರನ್ನು | ಪೂಜ್ಯರಾದವರನ್ನು |
| ೭೬ | ಕೆ. ೬ | ಅ ವೇದಾಂತ.... | ಆ ವೇದಾಂತ.... |
| ೭೮ | ೧ | ಅಶು | ಆಶು |
| ೭೮ | ಕೆ.೧೦ | ಅದ್ದರಿಂದ | ಆದ್ದರಿಂದ |
| ೭೮ | ಕೆ. ೭ | ತೊಡಗುವ | ತೊಡುವ |
| ೭೯ | ೪ | ಆರ್ಪಿಸುತ್ತಿದೆ | ಅರ್ಪಿಸುತ್ತಿದೆ |
| ೮೭ | ೧೩ | ಚಿಂತಿಸುವದಕೂ | ಚಿಂತಿಸುವದಕ್ಕೂ |
| ೮೭ | ಕೆ. ೭ | ಅಕೆಯು | ಆಕೆಯು |
| ೮೮ | ಕೆ. ೫ | ಇದಿರಾಗಿರುತಾನೆ | ಇದಿರಾಗಿರುತ್ತಾನೆ. |
| ೯೦ | ಕೆ. ೪ | ಧೂರೇವಧನು | ದೂರೇವಧನು |
| ೯೩ | ೧ | ಬಳಸುತ್ದಾರೆ | ಬಳಸುತ್ತಾರೆ |
| ೯೬ | ಕೆ. ೫ | ಅರಾಧಿಸು | ಆರಾಧಿಸು |
| ೯೯ | ೧೫ | ವ್ಯಾಪಿಯಾಗಿ ದ್ದುಕೊಂಡಿರು.. | ವ್ಯಾಪಿಯಾಗಿದ್ದುಕೊಂಡಿರು.. |
| ೯೯ | ಕೆ.೧೧ | ಒಂಭತ್ತ್ರಯು | ಒಂಭತ್ತನೆಯ |
| ೧೦೧ | ಕೆ. ೭ | ಆನುವಾಕದ | ಅನುವಾಕದ |
| ೧೦೨ | ೨ | ಅಖ್ಬಿದನಿಗೂ | ಆಖ್ಬಿದನಿಗೂ |
| ೧೦೨ | ೧೧ | ಪರಬ್ರಹ್ಮವನ್ನೆ | ಪರಬ್ರಹ್ಮವನ್ನೇ |
| ೧೧೦ | ೧೧ | ಅತನ | ಆತನ |
| ೧೧೭ | ೧೦ | ಅಯಾ | ಆಯಾ |
| ೧೨೦ | ಕೆ. ೨ | ಆತಿಶಯವಾಗಿ | ಅತಿಶಯವಾಗಿ |
| ೧೨೪ | ೮ | ನಮುಸ್ಕಾರಕಿಂತ | ನಮುಸ್ಕಾರಕ್ಕಿಂತ |
| ೧೨೫ | ೧೨ | ಭಗಂತನು | ಭಗವಂತನು |
| ೧೩೫ | ಕೆ.೧೧ | ವರು | ವವರು |
| ೧೩೬ | ೧೦ | ತ್ರದ | ತ್ರದೆ. |
| ೧೩೮ | ಕೆ. ೬ | ಉುಖ | ಮುಖ |
| ೧೪೦ (ಕೊನೆಯಪುಟ) | ಪಂ. ೫ | ಉರ್ವಾರುಕಮಿಕ | ಉರ್ವಾರುಕಮಿವ |
| ,, | ,, ಕೆ. ೧೦ | ಮಯುಶಂ ಪಾತಾ | ಮಯುತಂ ಪಾಶಾ |

|| ಓಮ್ ||

# ರುದ್ರಭಾಷ್ಯಪ್ರಕಾಶ



## ೧. ಪೀಠಿಕೆ

ಶುದ್ಧಸ್ಫಟಿಕಸಂಕಾಶಂ ಶುದ್ಧವಿದ್ಯಾಪ್ರದಾಯಕಮ್ ।
ಶುದ್ಧಂ ಪೂರ್ಣಂ ಚಿದಾನಂದಂ ಸದಾಶಿವಮಹಂ ಭಜೇ ॥

ಯಜುರ್ವೇದಸಂಹಿತಾಭಾಗದಲ್ಲಿರುವ ರುದ್ರಾಧ್ಯಾಯವು ಬಹು ಪ್ರಸಿದ್ಧವಾದುದು. ಎಲ್ಲಾ ವೇದಶಾಖೆಯವರೂ ಈಶ್ವರನ ಪೂಜೆಗೆ ಈ ರುದ್ರಮಂತ್ರಗಳನ್ನು ಸಮಾನವಾಗಿ ಉಪಯೋಗಿಸುತ್ತಾರೆ. ಯಜುಸ್ಸು ಎಂದರೆ ಗದ್ಯವು. ಈ ಭಾಗವು ಪರಮೇಶ್ವರನ ಸ್ತುತಿರೂಪವಾದ ಗದ್ಯವಾಗಿದೆ. ಇದರ ಮಹಿಮೆಯು ಅಪಾರವಾದುದು. ಈ ನಾಗರಿಕಯುಗದಲ್ಲಿಯೂ ಇನ್ನೂ ಅಲ್ಲಲ್ಲಿ ಈ ರುದ್ರಮಂತ್ರಗಳ ಪಾರಾಯಣವೂ ಹೋಮಾದಿಗಳೂ ನಡೆಯುತ್ತಿರುವದು ಕಂಡುಬರುತ್ತಿದೆ. ಶಿವದೇವಾಲಯಗಳಲ್ಲಿ ರುದ್ರಮಂತ್ರಗಳಿಂದಲೇ ಅಭಿಷೇಕಾದಿಗಳು ಈಗಲೂ ನೆರವೇರುತ್ತಿವೆ. ಆದ್ದರಿಂದ ಈ ಪವಿತ್ರವಾದ ಮಂತ್ರಭಾಗಕ್ಕೆ ವಿವರಣರೂಪವಾದ ವ್ಯಾಖ್ಯಾನವನ್ನು ಅಧ್ಯಾತ್ಮದೃಷ್ಟಿಯಿಂದ ಕನ್ನಡದಲ್ಲಿ ಬರೆದರೆ ಭಕ್ತರಿಗೆ ಹೆಚ್ಚು ಉಪಯೋಗವಾದೀತೆಂದು ಭಾವಿಸಿ ಈ ಗ್ರಂಥವನ್ನು ರಚಿಸಲಾಗಿದೆ. ಧ್ಯಾನಶ್ಲೋಕದಿಂದ ಆರಂಭಿಸಿ ರುದ್ರಮಂತ್ರಗಳ ವಿವರಣೆಯೊಡನೆ ಮುಂದುವರಿಸಲಾಗಿದೆ. ನಡುನಡುವೆ ಮೂಲಮಂತ್ರವನ್ನೂ ಅದರ ಅನುವಾದವನ್ನೂ ಕೊಡಲಾಗಿದೆ.

## ೨. ವಿಪ್ರೋऽಭಿಷಿಂಚೇತ್ ಶಿವಮ್

ವೈದಿಕರು ಪರಮೇಶ್ವರನಿಗೆ ರುದ್ರಾಧ್ಯಾಯದಿಂದ ಅಭಿಷೇಕಮಾಡುವ ಮುಂಚೆ ರುದ್ರಪಾರಾಯಣಕ್ಕೆ ಮೊದಲು ಒಂದು ನ್ಯಾಸವನ್ನು ಮಾಡುತ್ತಾರೆ. ಅದರಲ್ಲಿಯ ಧ್ಯಾನಶ್ಲೋಕವು ಹೀಗಿದೆ:—

ಆಪಾತಾಲನಭಃಸ್ಥಲಾಂತಭುವನಬ್ರಹ್ಮಾಂಡಮಾವಿಃಸ್ಫುರತ್
ಜ್ಯೋತಿಃಸ್ಫಾಟಿಕಲಿಂಗಮೌಳಿವಿಲಸದ್ ಪೂರ್ಣೇನ್ದುವಾನ್ತಾಮೃತೈಃ।

ಅಸ್ತ್ರೋಕ್ತಾಪ್ಲುತಮೇಕಮೀಶಮನಿಶಂ ರುದ್ರಾನುವಾಕಾನ್ ಜಪನ್
ಧ್ಯಾಯೇದೀಪ್ಸಿತಸಿದ್ಧಯೇಽದ್ರುತಪದಂ ವಿಪ್ರೋಽಭಿಷಿಂಚೇತ್
ಶಿವಮ್ ॥

ವಿಪ್ರನಾದವನು ಶಿವನನ್ನು ರುದ್ರಾನುವಾಕಮಂತ್ರಗಳನ್ನು ಜಪಿಸುತ್ತಾ ಅಭಿಷೇಕಮಾಡಬೇಕು. ಅಭಿಷೇಕವೆಂದರೆ ಭಗವಂತನಿಗೆ ಅರ್ಪಿಸುವ ಒಂದು ಉಪಚಾರವಿಶೇಷವು. ಚೆನ್ನಾಗಿ ನೀರಿನಿಂದ ತೋಯಿಸುವದು-ಎಂದು ಅಕ್ಷರಾರ್ಥ. ಶಿವನಿಗೆ ಅಭಿಷೇಕವು ತುಂಬ ಪ್ರಿಯವಾದದ್ದೆಂದು ಶಾಸ್ತ್ರಗಳ ಹೇಳಿಕೆ. ಆದರೆ ಶಿವನೆಂಬ ಭಗವಂತನು ಅಷ್ಟಮೂರ್ತಿರೂಪದಿಂದ ಜಗತ್ತನ್ನೆಲ್ಲ ವ್ಯಾಪಿಸಿಕೊಂಡು ಅದನ್ನೂ ಮೀರಿದವನಾಗಿರುವದರಿಂದ ಆ ಪ್ರಭುವನ್ನು ನಾವು ಯಾವ ನೀರಿನಿಂದ ತಾನೆ ತೋಯಿಸಲು ಸಾಧ್ಯವಾದೀತು ? ಯಾವನ ಕೂದಲುಗಳಲ್ಲಿ ಸಂವರ್ತಾದಿ ಮೇಘಗಳೂ ಶರೀರದ ಸಂದುಗಳಲ್ಲಿ ಪುಣ್ಯನದಿಗಳೂ ಹೊಟ್ಟೆಯಲ್ಲಿ ನಾಲ್ಕು ಸಮುದ್ರಗಳೂ ತುಂಬಿರುವವೋ ಅಂಥ ಜಲಮೂರ್ತಿಯಾದ ಭಗವಂತನಿಗೆ ನಾವು ಅಭಿಷೇಕವನ್ನು ಮಾಡುತ್ತೇವೆಂಬುದು ಹಾಸ್ಯಾಸ್ಪದವಾದ ಮಾತು. ಆದರೂ ನಮ್ಮ ಉದ್ಧಾರಕ್ಕಾಗಿ ಭಗವಂತನನ್ನು ಲಿಂಗವೆಂಬ ಉಪಾಧಿಯಲ್ಲಿ ಆವಾಹಿಸಿ ಆ ಲಿಂಗಕ್ಕೆ ಅಭಿಷೇಕಮಾಡುವ ಪದ್ಧತಿಯನ್ನು ಹಿರಿಯರು ಆಚರಣೆಗೆ ತಂದಿರುತ್ತಾರೆ. ಇಂಥ ಸಂದರ್ಭದಲ್ಲಿ ಮನಸ್ಸಿನಲ್ಲಿ ಏನೆಂದು ಧ್ಯಾನಿಸುತ್ತಿರಬೇಕು ? ನಮ್ಮ ಭಾವನೆ ಹೇಗಿರಬೇಕು? ಎಂಬುದನ್ನು ಇಲ್ಲಿ ತಿಳಿಸಿರುತ್ತದೆ.

ಪರಮೇಶ್ವರನು ದೇವತೆಗಳ ಅನುಗ್ರಹಕ್ಕಾಗಿ ಲಿಂಗಾಕಾರವಾಗಿ ಜ್ಯೋತಿಃಸ್ವರೂಪದಿಂದ ತೋರಿಕೊಂಡಾಗ ಪಾತಾಳದಿಂದ ಹೊರಟ ಆ ಪ್ರಭೆಯು ಭೂಮ್ಯಾಕಾಶಗಳನ್ನೂ ವ್ಯಾಪಿಸಿ ದ್ಯುಲೋಕವನ್ನೂ ಮೀರಿ ಹೋಯಿತು. ಬ್ರಹ್ಮಾಂಡವನ್ನೇ ಬೆಳಗಿದ ಇಂಥ ಶುದ್ಧತೇಜೋಮಯವಾದ ಲಿಂಗವನ್ನು ಮೊದಲು ಹೃದಯದಲ್ಲಿ ಕಲ್ಪಿಸಿಕೊಳ್ಳಬೇಕು. ಆ ಲಿಂಗದ ಶಿರೋಭಾಗ (ಮೇಲ್ಭಾಗ)ದಲ್ಲಿ ಪೂರ್ಣಚಂದ್ರನು ವಿರಾಜಿಸುತ್ತಿರುವನು. ಚಂದ್ರನ ಅಮೃತರೂಪವಾದ ಕಲೆಗಳಿಂದ ಪ್ರವಹಿಸುತ್ತಿರುವ ಪವಿತ್ರಜಲದಿಂದ ಜ್ಯೋತಿರ್ಲಿಂಗವು ತೋಯ್ದು ಅಭಿಷಿಕ್ತವಾಗುತ್ತಿರುವದು. ಇದೇ ಶಿವಲಿಂಗಾಭಿಷೇಕವು. ಇದನ್ನ ಪ್ರತಿನಿಧಿಸುವದಕ್ಕಾಗಿ ಬಾಹ್ಯವಾಗಿ ಶಿಲಾಲಿಂಗವನ್ನು ನದೀ

ಜಲದಿಂದ ಧಾರಾಕಾರವಾಗಿ ಅಭಿಷೇಕಮಾಡುತ್ತಾರೆ. ಭಾವುಕನಾದವನು ತಾನು ಶಿವಲಿಂಗಾಭಿಷೇಕವನ್ನು ಮಾಡುತ್ತಿರಲಿ, ಅಥವಾ ನೋಡುತ್ತಿರಲಿ, ಬಾಹ್ಯವಾದ ಉಪಾಧಿಗಳನ್ನು ಮರೆತು ಅಂತಃಕರಣದಲ್ಲಿ ಮೇಲೆ ತಿಳಿಸಿದಂತೆ ದಿವ್ಯಲಿಂಗವನ್ನು ಧ್ಯಾನಿಸುತ್ತಾ ತನ್ಮಯನಾಗಬೇಕು–ಎಂದು ಈ ಶ್ಲೋಕ ದಲ್ಲಿ ತಿಳಿಸಿದೆ.

ಇಂಥ ಅಭಿಷೇಕವನ್ನು ಸಕಾಮನಾದವನೂ ಮಾಡಬಹುದು. ಅದನ್ನು 'ಈಪ್ಸಿತಸಿದ್ಧಯೇ' ಎಂಬ ಶಬ್ದದಿಂದ ಇಲ್ಲಿ ಸೂಚಿಸಿದೆ. ನಮಗೆ ಬೇಕಾಗಿ ರುವ ಇಷ್ಟಾರ್ಥಗಳೆಲ್ಲವನ್ನೂ ಪರಮೇಶ್ವರನೇ ಕೊಡತಕ್ಕವನು. ಶಿವಲಿಂಗಾ ರ್ಚನೆಯಲ್ಲಿ ನಿರತರಾದವರಿಗೆ ಇಷ್ಟಾರ್ಥಗಳನ್ನುಂಟುಮಾಡುವ ಕಾಮಧೇನು ವೇ ಮಹಾದೇವನು–ಎಂದು ಪಂಚಾಕ್ಷರೀ ಅಷ್ಟೋತ್ತರಶತನಾಮಾವಳಿಯಲ್ಲಿ ಸ್ತುತಿಸಿದೆ. ಏಕನೂ ಅದ್ವಿತೀಯನೂ ಸರ್ವೇಶ್ವರನೂ ಆದ ಶಿವನಿಗೆ ರುದ್ರಾ ನುವಾಕಮಂತ್ರಗಳೆಂದರೆ ಬಲು ಪ್ರೀತಿ. ಆದ್ದರಿಂದ ರುದ್ರಾನುವಾಕಗಳನ್ನು ಅದ್ರುತಪದವಾಗಿ ಎಂದರೆ ನಿಧಾನವಾಗಿ ಸ್ವರಾಕ್ಷರಲೋಪವಿಲ್ಲದಂತೆ ಜಪಿಸು ತ್ತಾ ವಿಪ್ರನು ಅಭಿಷೇಕಮಾಡತಕ್ಕದ್ದೆಂದು ತಿಳಿಸಿದೆ. 'ದ್ವಿಜತ್ವಂ ವಿಧ್ಯನು ಷ್ಠಾನಾತ್ ವಿಪ್ರತ್ವಂ ವೇದಪಾಠತಃ' ಎಂಬ ವಾಕ್ಯದಂತೆ ವೇದಾಧ್ಯಯನ ಮಾಡಿರುವ ಬ್ರಾಹ್ಮಣನಿಗೆ ಮಾತ್ರವೇ 'ವಿಪ್ರ'ನೆಂದು ಸಂಜ್ಞೆ. ವೇದಪ್ರಿಯ ನಾದ ಶಿವನು ವಿಪ್ರಪ್ರಿಯನೂ ಆಗಿರುತ್ತಾನೆಂಬುದನ್ನು ಹೇಳಬೇಕಾಗಿಲ್ಲ.

'ವಿದ್ಯಾಸು ಶ್ರುತಿರುತ್ಕೃಷ್ಟಾ ರುದ್ರೈಕಾದಶಿನೀ ಶ್ರುತೌ' ಎಂಬಂತೆ ವಿದ್ಯೆಗಳಲ್ಲೆಲ್ಲ ವೇದವಿದ್ಯೆಯು ಉತ್ಕೃಷ್ಟವಾದುದು. ಆದ್ದರಿಂದಲೇ ಹಿರಿಯ ರನ್ನು ಗೌರವಿಸುವಾಗ 'ವೇದಮೂರ್ತಿ'ಗಳೆಂದೂ 'ಬ್ರಹ್ಮಶ್ರೀ'ಯುಕ್ತರೆಂದೂ ಕರೆಯುವ ವಾಡಿಕೆಯಿದೆ. 'ನಾರುದ್ರಃ ಕ್ರಮಪಾಠಕಃ' ಎಂಬ ನಾಣ್ನುಡಿ ಯೊಂದುಂಟು. ರುದ್ರನ ಅಂಶವಿಲ್ಲದವನು ವೇದಪಾಠಕನಾಗಲಾರನು ; ಅದರಲ್ಲಿಯೂ ಕ್ರಮಪಾಠಕನಾಗಲೇ ಆರನು– ಎಂದು ಅದರ ಅಭಿಪ್ರಾಯ. ಈ ಅಧ್ಯಾಯದಿಂದ 'ಕ್ರಮಾರ್ಚನೆ'ಯನ್ನು ಮಾಡುವದು ಸುಪ್ರಸಿದ್ಧವಾಗಿದೆ. ಮತ್ತು ಈ ಅಧ್ಯಾಯದ ಪಾರಾಯಣವೂ ಅರ್ಥಾನುಸಂಧಾನವೂ ಅನರ್ಘ ವಾದುದು. ಜಗತ್ತಿನ ರೋದನ (ಅಳು)ವನ್ನು ದ್ರಾವ(ಹೊಡೆದೋಡಿ)ಸುವ 'ರುದ್ರ'ನನ್ನು ಮೊದಲು ಮನಸ್ಸಿಗೆ ತಂದುಕೊಂಡು ಮುಂದಿನ ವಿಚಾರವನ್ನು ಮಾಡೋಣ.

——— ———

# ೩. ನಃ ಪ್ರಯಚ್ಛನ್ತು ಸೌಖ್ಯಮ್

ರುದ್ರಾಧ್ಯಾಯದ ಅರ್ಥವನ್ನು ತಿಳಿಯುವ ಮುಂಚೆ ರುದ್ರರ ಪರಿಚಯವನ್ನು ಮಾಡಿಕೊಳ್ಳೋಣ.

ರುದ್ರರು ಅನೇಕರೋ, ಒಬ್ಬನೋ? ಎಂಬ ಸಂಶಯವು ಬರುವದು ಸ್ವಾಭಾವಿಕವಾಗಿದೆ. ಏಕೆಂದರೆ ವೇದದಲ್ಲಿ ಒಂದುಕಡೆ 'ಏಕ ಏವ ರುದ್ರೋ ನ ದ್ವಿತೀಯಾಯ ತಸ್ಥೇ' ರುದ್ರನು ಒಬ್ಬನೇ-ಎಂದು ಸ್ತುತಿಸಿದೆ. ಮತ್ತೊಂದು ಕಡೆ 'ಸಹಸ್ರಾಣಿ ಸಹಸ್ರಶೋ ಯೇ ರುದ್ರಾಃ' ಎಂದು ರುದ್ರರು ಅನಂತ ಸಂಖ್ಯಾಕರು ಎಂದು ಹೇಳಿದೆ. ಪುರಾಣಗಳಲ್ಲಿ ದೇವತೆಗಳನ್ನು ಪಟ್ಟಿಮಾಡುವಾಗ 'ಏಕದಶರುದ್ರರು'- ಎಂದು ಹನ್ನೊಂದು ಜನರೆಂತ ಗೊತ್ತುಮಾಡಲಾಗಿದೆ. ಇವುಗಳಿಗೆಲ್ಲ ಏಕವಾಕ್ಯತೆಯು ಹೇಗೆ? ಎಂಬುದನ್ನು ವಿಚಾರಿಸೋಣ.

ಜಗತ್‌ಸೃಷ್ಟಿಕ್ರಮವನ್ನು ವರ್ಣಿಸುವಾಗ ಪುರಾಣಗಳಲ್ಲಿ ಹೀಗಿದೆ: 'ಬ್ರಹ್ಮನ ಕೋಪದಿಂದ ರುದ್ರನು ಅವತರಿಸಿದನು. ಸೃಷ್ಟಿಕರ್ಮದಲ್ಲಿ ಸಹಕರಿಸಬೇಕೆಂದು ಬ್ರಹ್ಮನು ರುದ್ರನಿಗೆ ತಿಳಿಸಿದಾಗ ರುದ್ರನು ತನ್ನಂತೆಯೇ ಶರೀರ, ವೇಷ, ಭೂಷಣಗಳು, ಬಲ, ಮರಣವಿಲ್ಲದಿರುವಿಕೆ- ಮುಂತಾದ ಧರ್ಮಗಳಿಂದ ಕೂಡಿದ ಸಹಸ್ರಾರು ರುದ್ರರನ್ನು ಸೃಷ್ಟಿಸಿಬಿಟ್ಟನು. ಆಗ ಬ್ರಹ್ಮನು ನೋಡಿ ಈ ರುದ್ರನ ಸೃಷ್ಟಿಯು ಹೀಗೆಯೇ ಮುಂದುವರೆದುಬಿಟ್ಟರೆ ಎಲ್ಲರೂ ಅಮರರೇ ಆಗಿಬಿಡುವದರಿಂದ ಬ್ರಹ್ಮಾಂಡದಲ್ಲಿ ಜಾಗವಿಲ್ಲದೆಹೋಗುವದು ನಿಶ್ಚಯ-ಎಂತ ಭಾವಿಸಿ ಇನ್ನುಮುಂದೆ ಸೃಷ್ಟಿಮಾಡಕೂಡದೆಂದೂ ಈವರೆಗೆ ಸೃಷ್ಟರಾಗಿರುವ ರುದ್ರರಿಗೆ ಬ್ರಹ್ಮಾಂಡದಲ್ಲಿ ಬೇರೆಬೇರೆಯ ಸ್ಥಾನಗಳನ್ನು ಕಲ್ಪಿಸುವದಾಗಿಯೂ ತಿಳಿಸಿದನು. ಅದರಂತೆ ರುದ್ರರನ್ನು ಜಗತ್ತಿನಲ್ಲೆಲ್ಲ ಹರಡಿಬಿಟ್ಟನು. ಹೀಗೆ ರುದ್ರನಿಂದಲೇ ಉತ್ಪನ್ನರಾದ ರುದ್ರರು ಇಡಿಯ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿಕೊಂಡು ಎಲ್ಲೆಲ್ಲಿಯೂ ಇದ್ದುಕೊಂಡಿರುತ್ತಾರೆ'.

ಈ ವರ್ಣನೆಯಿಂದ ತಿಳಿಯುವದೇನೆಂದರೆ: ರುದ್ರನು ಒಬ್ಬನೇ ಆದರೂ ಮೂರ್ತಿಭೇದದಿಂದ ಅನೇಕರಾಗಿ ತೋರಿಕೊಂಡಿರುತ್ತಾನೆ. ವಿಶೇಷವಾಗಿ ಜಗತ್ತಿನ ಲಯಕಾರ್ಯದಲ್ಲಿ ಈತನು ನೇಮಿಸಲ್ಪಟ್ಟಿರುತ್ತಾನೆಂದು ತಿಳಿಯುತ್ತದೆ. ಆದ್ದರಿಂದ ಶ್ರುತಿಯಲ್ಲಿ ಏಕನೆಂದೂ ಅನೇಕರೆಂದೂ ದೃಷ್ಟಿಭೇದದಿಂದ

ಹೊಗಳಿರುವದು ಸೂಕ್ತವೇ ಆಗಿದೆ. ಇಂಥ ರುದ್ರನು ಅಷ್ಟಮೂರ್ತಿರೂಪನಾಗಿ ಅನೇಕ ನಾಮರೂಪೋಪಾಧಿಗಳಿಂದ ಪ್ರಪಂಚವನ್ನೆಲ್ಲ ವ್ಯಾಪಿಸಿಕೊಂಡಿರುವದರ ಮಹಿಮೆಯನ್ನು ರುದ್ರಾಧ್ಯಾಯವು ಚೆನ್ನಾಗಿ ವಿವರಿಸಿ ತಿಳಿಸುತ್ತದೆ.

ಪ್ರಪಂಚದ ಸೃಷ್ಟಿ, ಸ್ಥಿತಿ, ಲಯ– ಎಂಬ ಕಾರ್ಯಗಳ ಅಪೇಕ್ಷೆಯಿಂದ ಒಬ್ಬ ಭಗವಂತನೇ ಮೂರು ರೂಪವಾಗಿ ತೋರಿಕೊಳ್ಳುವದರಿಂದ ಮೂಲತಃ ಭಗವಂತನೆಂಬುವನು ತ್ರಿಮೂರ್ತಿಗಳೆಂಬ ಉಪಾಧಿಗಳನ್ನೂ ಮೀರಿದ ಪರಬ್ರಹ್ಮವೇ ಆಗಿರುತ್ತಾನೆ. ಈ ಅರ್ಥದಲ್ಲಿ ರುದ್ರನೊಬ್ಬನೇ ; ಅವನೇ ಪರಮೇಶ್ವರನು, ಸರ್ವಜ್ಞನು, ಶಿವನು– ಎಂದು ವೇದಗಳು ಸ್ತುತಿಸಿವೆ. ಹೀಗೆ ರುದ್ರನ ಸ್ವರೂಪವನ್ನು ನಾವು ಅರಿತುಕೊಳ್ಳಬೇಕು. ಪ್ರಕೃತದಲ್ಲಿ ರುದ್ರನು ತನ್ನ ಮಹಿಮೆಯನ್ನು ನಾನಾರೂಪಗಳಿಂದ ಪ್ರಕಟಿಸಿಕೊಂಡು ಸಹಸ್ರಾರು ರುದ್ರರೂಪರಾಗಿ ತೋರಿಕೊಂಡಿರುವ ವಿಭೂತಿಯು ನಿರತಿಶಯವಾದುದು. ಇಂಥ ರುದ್ರರುಗಳನ್ನು ಕುರಿತ ಈ ಧ್ಯಾನಶ್ಲೋಕವನ್ನು ನೋಡಿರಿ :

ಬ್ರಹ್ಮಾಂಡವ್ಯಾಪ್ತದೇಹಾ ಭಸಿತಹಿಮರುಚಾ ಭಾಸಮಾನಾ ಭುಜಙ್ಗೈಃ ।
ಕಂಠೇ ಕಾಲಾಃ ಕಪರ್ದಾಃ ಕಲಿತಶಶಿಕಲಾಶ್ಚಣ್ಡಕೋದಣ್ಡಹಸ್ತಾಃ ॥
ತ್ರ್ಯಕ್ಷಾ ರುದ್ರಾಕ್ಷಭೂಷಾಃ ಪ್ರಣತಭಯಹರಾಃ ಶಾಂಭವಾ ಮೂರ್ತಿಭೇದಾತ್ ।
ರುದ್ರಾಃ ಶ್ರೀ ರುದ್ರಸೂಕ್ತಪ್ರಕಟಿತವಿಭವಾ ನಃ ಪ್ರಯಚ್ಛನ್ತು ಸೌಖ್ಯಮ್ ॥

ರುದ್ರಸೂಕ್ತದಲ್ಲಿ ಪ್ರಕಟಿಸಲ್ಪಟ್ಟ ಮಹಿಮೆಯುಳ್ಳ ರುದ್ರರು ನಮಗೆ ಸೌಖ್ಯವನ್ನುಂಟುಮಾಡಲಿ ! ಎಂದು ಇಲ್ಲಿ ಪ್ರಾರ್ಥಿಸಿದೆ. ಎಂಥ ರುದ್ರರು ? ಎಂದರೆ ಬ್ರಹ್ಮಾಂಡವನ್ನೆಲ್ಲ ವ್ಯಾಪಿಸಿಕೊಂಡಿರುವ ಶರೀರವುಳ್ಳವರು. ಪಂಚಭೂತಗಳೂ ನಕ್ಷತ್ರಾದಿಗಳೂ ಹದಿನಾಲ್ಕುಲೋಕಗಳೂ ಎಲ್ಲವೂ ರುದ್ರರ ವಾಸಸ್ಥಾನಗಳೇ ಆಗಿವೆ. ಮತ್ತು ರುದ್ರರು ಹಿಮದಂತೆ ಬಿಳುಪಾದ ವಿಭೂತಿಯಿಂದಲೂ ಹಾವುಗಳಿಂದಲೂ ಅಲಂಕೃತರಾದವರು, ಕಂಠದಲ್ಲಿ ಕಪ್ಪುಳ್ಳವರು; ಜಟಾಜೂಟವನ್ನು ಧರಿಸಿದವರು, ಮತ್ತು ಮೌಳಿಯಲ್ಲಿ ಚಂದ್ರಕಲೆಯನ್ನುಳ್ಳವರು. ತೀಕ್ಷ್ಣವಾದ ಬಿಲ್ಲುಗಳನ್ನು ಹಿಡಿದಿರುವ ಕೈಗಳುಳ್ಳವರು, ಮುಕ್ಕಣ್ಣರು, ರುದ್ರಾಕ್ಷಿಯ ಆಭರಣಗಳುಳ್ಳವರು, ನಮಸ್ಕಾರಮಾಡಿದವರನ್ನು ಭಯದಿಂದ ಪಾರುಮಾಡುವವರು, ಶಂಭುವಿನ ಅವತಾರರೂಪರು, ಶರೀರಗಳಿಂದ ಭಿನ್ನರಾಗಿ ಕಂಡರೂ ಎಲ್ಲರೂ ಶಂಭುಸ್ವರೂಪರೇ ; ಇಂಥ ರುದ್ರರು ನಮಗೆ ಸೌಖ್ಯವನ್ನುಂಟುಮಾಡಲಿ !– ಎಂದು ಇಲ್ಲಿ ಪ್ರಾರ್ಥಿಸಿದೆ.

ವಾಚಕರೆ, ರುದ್ರಾಧ್ಯಾಯವನ್ನು ಪಠಿಸುವ ಮುಂಚೆ ಇಂಥ ರುದ್ರರ ಸ್ವರೂಪವನ್ನು ಮನಸ್ಸಿಗೆ ಅನುಸಂಧಾನಮಾಡಿಕೊಂಡು ಎಲ್ಲೆಲ್ಲಿಯೂ ರುದ್ರರ ಅಸ್ತಿತ್ವವನ್ನು ಗುರುತಿಸುವಂಥ ಭಾವನೆಯನ್ನು ಮೊದಲು ಸಂಪಾದಿಸಿಕೊಳ್ಳ ಬೇಕು. ಹೀಗೆ ಸಾಧಕನು ಜಗತ್ತನ್ನೇ ರೌದ್ರೀಕರಣಮಾಡಿಕೊಂಡು ತಾನೂ ರುದ್ರನಲ್ಲಿ ಒಂದಾದರೆ ರುದ್ರನಿಗಿಂತ ಬೇರೆಯಾದದ್ದೊಂದೂ ಕಾಣುವದೇ ಇಲ್ಲ. ಇದೇ ರುದ್ರಸಾಯುಜ್ಯಪ್ರಾಪ್ತಿಯು. ರುದ್ರನೆಂದರೂ ವಿಷ್ಣುವೆಂದರೂ ಪರಬ್ರಹ್ಮವೇ ಆಗಿರುವದರಿಂದ ನಮ್ಮ ಮನಸ್ಸಿನ ಒಲವಿಗೆ ತಕ್ಕಂತೆ ಯಾವ ರೂಪದಿಂದಲಾದರೂ ಭಗವಂತನನ್ನು ಆರಾಧಿಸಿ ಕೃತಕೃತ್ಯರಾಗಬಹುದಾಗಿದೆ. ಇನ್ನುಮುಂದೆ ರುದ್ರಾಧ್ಯಾಯದಲ್ಲಿರುವ ರುದ್ರಸ್ತುತಿಯನ್ನು ಕೇಳಿರಿ.

---

## ೪. ನಮಸ್ತೇ ರುದ್ರ

ರುದ್ರಾಧ್ಯಾಯದಲ್ಲಿ ಹನ್ನೊಂದು ಅನುವಾಕಗಳಿವೆ. ಅನುವಾಕಗಳೆಂದರೆ ಒಂದೊಂದು (ಪ್ರಘಟ್ಟ Para)ಗಳೆಂದು ಭಾವಿಸಬಹುದು. ಇಲ್ಲಿ ಮೊದಲನೆಯ ಅನುವಾಕದಲ್ಲಿ ಭಗವಂತನು ಪ್ರಸನ್ನನಾಗುವಂತೆ ಮಾಡಿಕೊಳ್ಳುವಿಕೆ, ಎರಡರಿಂದ ಒಂಬತ್ತರ ಪೂರ ಅನುವಾಕಗಳಲ್ಲಿ ಭಗವಂತನ ಸರ್ವೇಶ್ವರತ್ವ, ಸರ್ವಾತ್ಮಕತ್ವ, ಸರ್ವಾಂತರ್ಯಾಮಿತ್ವ- ಮುಂತಾದವುಗಳನ್ನು ತಿಳಿಸಿ ನಮ ಸ್ಕರಿಸುವಿಕೆ, ಹತ್ತನೆಯದರಲ್ಲಿ ಭಗವಂತನ ಪ್ರಾರ್ಥನೆ, ಹನ್ನೊಂದನೆಯದರಲ್ಲಿ ಭಗವದಂಶಸಂಭೂತರಾದ ರುದ್ರರುಗಳ ಸ್ತುತಿ- ಹೀಗೆ ಈ ರುದ್ರಾಧ್ಯಾಯವು ಹನ್ನೊಂದು ಅನುವಾಕಗಳಿಂದ ಕೂಡಿರುತ್ತದೆ.

ವಿದ್ಯೆಗಳಲ್ಲೆಲ್ಲ 'ಶ್ರುತಿ'(ವೇದ)ಯು ಹೆಚ್ಚಿನದು. ಶ್ರುತಿಯಲ್ಲಿ ರುದ್ರೈಕಾದಶಿನೀ ಎಂಬ ಭಾಗ. ಅದರಲ್ಲಿ 'ನಮಃ ಶಿವಾಯ' ಎಂಬ ಪಂಚಾಕ್ಷರೀ ಮಂತ್ರವು. ಅದರಲ್ಲಿಯೂ 'ಶಿವ' ಎಂಬೆರಡು ಅಕ್ಷರಗಳು ಹೆಚ್ಚಿನ ಸಾರ ವಾದದ್ದು'-ಎಂದು ಒಂದು ಸ್ಮೃತಿವಾಕ್ಯವಿದೆ. 'ವಶ ಕಾನ್ತೌ' ಎಂಬ ಧಾತು ವಿನಿಂದಾದ 'ಶಿವ' ಎಂಬ ಶಬ್ದರೂಪವು 'ಲೋಕಾನಾಂ ಶಿವಂ (ಮಂಗಳಂ) ವಷ್ಟೀತಿ ಶಿವಃ'- ಎಂಬ ವ್ಯುತ್ಪತ್ತಿಯಂತೆ ವರ್ಣವ್ಯತ್ಯಯವನ್ನು ಹೊಂದಿ 'ಶಿವ' ಎಂಬ ಭಗವಂತನ ದಿವ್ಯನಾಮವಾಗಿ ಹೊರಬಂದಿದೆ. ಶಿವ- ಎಂಬ

ಶಬ್ದಕ್ಕೆ ಮಂಗಳವೆಂದೇ ಅರ್ಥವಿದೆ. ಅಮರಕೋಶದಲ್ಲಿ ಶ್ರೇಯಸಮ್, ಶಿವಮ್, ಭದ್ರಮ್, ಕಲ್ಯಾಣಮ್, ಮಂಗಳಮ್, ಶುಭಮ್- ಎಂದು ಶಿವಶಬ್ದಕ್ಕೆ ಪರ್ಯಾಯವಾಗಿಯೇ ಉಳಿದ ಶಬ್ದಗಳನ್ನು ಕೊಟ್ಟಿದೆ. ಆದ್ದರಿಂದ ಶಿವನೆಂಬುದು ಪರಮಮಂಗಳಸ್ವರೂಪನೂ ಜಗತ್ತಿಗೆಲ್ಲ ಏಕದೇವನೂ ಸರ್ವಾತ್ಮನೂ ಸರ್ವಜ್ಞನೂ ಸರ್ವಶಕ್ತನೂ ಸರ್ವೇಶ್ವರನೂ ಆದ ಭಗವಂತನ ಹೆಸರೇ ಹೊರತು ಯಾವದೊಂದು ವಿಶಿಷ್ಟದೇವತೆಯ ಹೆಸರಲ್ಲ. ಈಗ ಸತ್ಸಂಪ್ರದಾಯಗಳಲ್ಲಿ ಸುಪ್ರಸಿದ್ಧವಾಗಿರುವ ಶೈವ, ವೈಷ್ಣವ- ಎಂಬಿವೆರಡರಲ್ಲಿ ಶೈವಸಂಪ್ರದಾಯದಂತೆ ವೇದೋಕ್ತವಾದ ಪರಮಮಂತ್ರವೆಂದರೆ ಪಂಚಾಕ್ಷರಿಯೊಂದೇ- ಎಂದು ಹೇಳಬಹುದು. ಈ ರುದ್ರಾಧ್ಯಾಯದ 'ನಮಃ ಸೋಮಾಯ' ಎಂಬ ಅನುವಾಕದಲ್ಲಿ ಈ ಪಂಚಾಕ್ಷರೀಮಂತ್ರವು ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುತ್ತದೆ. ಈ ಕಾರಣದಿಂದಲೂ ಶೈವರಿಗೆ ಅತ್ಯಂತ ಪವಿತ್ರವಾಗಿರುವ ಹಾಗೂ ಉಳಿದ ಸಂಪ್ರದಾಯಸ್ಥರಿಗೂ ವಿಶಾಲವಾದ ತತ್ತ್ವದೃಷ್ಟಿಯಿಂದ ಮನನೀಯವಾಗಿ ಇರುವ ಈ ವೇದಭಾಗವು ಸರ್ವಥಾ ವಿಚಾರಣೀಯವೂ ಆಗಿದೆ. ಯಜುಸ್ಸಂಹಿತೆಯಲ್ಲೇ ಈ ಭಾಗವಿರುವದರಿಂದ ಪೂರ್ಣವಾದ ಯಜುರ್ವೇದವನ್ನು ಅಧ್ಯಯನಮಾಡುವ ಪ್ರತಿಯೊಬ್ಬನೂ ಇದನ್ನು ಪಠಿಸಲೇಬೇಕಾಗುತ್ತದೆ. ಇಷ್ಟೇ ಅಲ್ಲ. ನಾಲ್ಕು ವೇದದವರಿಗೂ ಇದೇ ರುದ್ರಾಧ್ಯಾಯವೇ ಸರಿಸಮಾನವಾಗಿರುತ್ತದೆ.

ಈ ರುದ್ರಾಧ್ಯಾಯಕ್ಕೆ 'ನಮಕ'ವೆಂಬ ಮತ್ತೊಂದು ಹೆಸರಿದೆ. ಈ ಮಂತ್ರಭಾಗವು 'ನಮಃ' ಎಂಬ ಶಬ್ದದಿಂದ ಪ್ರಾರಂಭವಾಗುವದರಿಂದ ಈ ಹೆಸರು ಬಂದಿರುತ್ತದೆ. ಇಲ್ಲಿ ನಮಶ್ಶಬ್ದವು ನೂರಾರುಸಲ ಪುನರುಕ್ತವಾಗಿರುತ್ತದೆ. ನಮಃ ಎಂದರೆ ನಮಸ್ಕಾರವೆಂದರ್ಥ. ನಮಸ್ಕಾರವು ಯಾವಾಗ ಪ್ರಾಪ್ತವಾಗುತ್ತದೆ ? ಎಂದರೆ ತನಗಿಂತ ಮತ್ತೊಂದು ವಸ್ತುವು ದೊಡ್ಡದು- ಎಂಬ ಭಾವನೆಯುಂಟಾದಾಗ-ಎಂಬಿದು ಎಲ್ಲರಿಗೂ ತಿಳಿದಿದೆ. ಇಲ್ಲಿ ಜೀವನು ನಮಸ್ಕಾರಮಾಡುವವನು ; ನಮಸ್ಕಾರ್ಯನು ಪರಮೇಶ್ವರನು. ಜೀವನಿಗಿಂತ ಪರಮೇಶ್ವರನು ಎಲ್ಲಾ ವಿಷಯಗಳಲ್ಲೂ ದೊಡ್ಡವನಾದ್ದರಿಂದ ಅವನು ನಮಸ್ಕಾರಕ್ಕೆ ಅರ್ಹನಾಗಿರುತ್ತಾನೆ- ಎಂದಭಿಪ್ರಾಯ. ನಾನು ನೋಡಿರುವ ಶಿವಪಂಚಾಕ್ಷರೀಭಾಷ್ಯದಲ್ಲಿ ನಮಃಶಬ್ದಕ್ಕೆ ಮೂರು ಅರ್ಥಗಳನ್ನು ಕೊಟ್ಟಿದೆ.

(೧) ನಮಃ ಎಂದರೆ (ಅಹಂಕಾರ)ತ್ಯಾಗವೆಂದರ್ಥ. ಪತ್ರಪುಷ್ಪಫಲಾದಿಗಳ ತ್ಯಾಗವೂ ಇದರಲ್ಲಿ ಸೇರಿರುತ್ತದೆ. ಯಾರಿಗಾಗಿ ತ್ಯಾಗಮಾಡುವೆವೋ ಆ ಪ್ರಕೃತಿರೂಪವೇ ಆನಂದಸ್ವರೂಪನಾದ ಪರಮೇಶ್ವರನು. ನಾಲ್ಕೂ ಪುರುಷಾರ್ಥಗಳ ಸಿದ್ಧಿಗಾಗಿ ಮಾಡುವ ತ್ಯಾಗವೆಂಬುದೇ ನಮಃ ಎಂಬಿದರ ಅರ್ಥ. (೨) ಅಥವಾ ದೈನ್ಯಲಬ್ಧಿ- ಎಂಬ ಫಲವುಳ್ಳ ಪ್ರಣಾಮವೇ ನಮಃ ಎಂಬುದರ ತತ್ತ್ವವಾಗಿದೆ. ಇಲ್ಲಿ ದೈನ್ಯವೆಂದರೆ 'ಸೇವೆ'ಯೆಂದರ್ಥ. 'ಲಬ್ಧಿ' ಎಂದರೆ ಸಕಲಪುರುಷಾರ್ಥಗಳ ಸಿದ್ಧಿ. ಈಶ್ವರಸೇವೆಯಿಂದ ಸಕಲಸಿದ್ಧಿಗಳೂ ಲಭಿಸುವವೆಂಬುದನ್ನು ನಮಃಶಬ್ದವು ತಿಳಿಸುತ್ತದೆ. (೩) ಅಥವಾ- ನ- ಎಂದರೆ ಜಗದ್ರೂಪವೆಂಬ ಭಾವವಿಕಾರದ ನಿಷೇಧವು. ಮಸ್- ಎಂದರೆ ದೇವದೇವನಾದ ಪರಮಶಿವನು. ಆತನಲ್ಲಿ ಈ ನಾಮರೂಪಾತ್ಮಕವಾದ (ಭಾವ) ಜಗತ್ತು ಇಲ್ಲವೇ ಇಲ್ಲ- ಎಂಬುದೇ ನಮಃಶಬ್ದದ ಅರ್ಥ. ಹೀಗೆ ನಮಃಶಬ್ದಾರ್ಥವನ್ನು ಬಲ್ಲವರು ಅನೇಕರೀತಿಯಿಂದ ತಿಳಿಸಿರುತ್ತಾರೆ. ಅಂತೂ ಸರ್ವದೇವಾತ್ಮಕನಾದ ಭಗವಂತನಿಗೆ ಜೀವನು ತೋರಿಸುವ ಗೌರವಪೂರ್ವಕವಾದ ನಡೆಯೇ ನಮಸ್ಕಾರವೆಂದು ತಿಳಿಯಬಹುದಾಗಿದೆ. ನಮಃಶಬ್ದಕ್ಕೆ ಇದೇ ಅರ್ಥವನ್ನು ಉಳಿದಕಡೆಗಳಲ್ಲೂ ಅನ್ವಯಿಸಿಕೊಳ್ಳಬಹುದಾಗಿದೆ.

ಇನ್ನು ರುದ್ರ- ಎಂಬ ಶಬ್ದದ ಅರ್ಥವನ್ನು ವಿಚಾರಮಾಡೋಣ. ರುದ್ ಎಂದರೆ ಅಳುವಿಕೆ ಎಂದರ್ಥ. ಮನುಷ್ಯನ ಜೀವನವು ಅಳುವಿನಿಂದಲೇ ಆರಂಭವಾಗುತ್ತದೆ. ಮಾತೃಗರ್ಭದಿಂದ ಶಿಶುವು ಹೊರಕ್ಕೆ ಬಂದೊಡನೆಯೇ ಅಳಬೇಕು. ಇಲ್ಲದಿದ್ದರೆ ಜನರು ಅದನ್ನು ಅಪಶಕುನವೆಂದೊ, ಮಗುವು ಆರೋಗ್ಯವಾಗಿಲ್ಲವೆಂದೋ ಭಾವಿಸುವರು. ಆದ್ದರಿಂದ ಈ ಅಳುವಿಕೆಯು ಸಂಸಾರದುಃಖದ ಸೂಚಕವಾಗಿದೆ. ಇಂಥ ಅಳುವನ್ನು ನಾಶಮಾಡುವವನೇ ರುದ್ರನು. ಪರಮೇಶ್ವರನನ್ನು ನಂಬಿದವನು ಸಂಸಾರದಿಂದ ಉದ್ಧಾರವಾಗುವನೆಂಬುದು ಸುಪ್ರಸಿದ್ಧವಾಗಿದೆ. ಅಥವಾ ದ್ರಾ- ಎಂದರೆ ಕುತ್ಸಿತವಾದ ಗತಿಯಿಂದ ರು-ರುಣದ್ಧಿ- ತಡೆಯುತ್ತಾನೆ- ಎಂದರೆ ಭಕ್ತರನ್ನು ನರಕಕ್ಕೆ ಬೀಳದಂತೆ ತಡೆಯುತ್ತಾನೆ- ಎಂಬರ್ಥದಲ್ಲಿಯೂ ರುದ್ರನೆಂದಾಗಬಹುದು. ರೂಢಿಯಲ್ಲಿ ರುದ್ರನೆಂದರೆ ಕೋಪವುಳ್ಳವನೆಂದು ಪ್ರಸಿದ್ಧವಾಗಿದೆ. ಪಾಪಿಗಳ ವಿಷಯದಲ್ಲಿ ಪರಮೇಶ್ವರನು ಯಾವಾಗಲೂ ಕುಪಿತನೇ ಆಗಿರುವದರಿಂದ

ಈ ಅರ್ಥವೂ ಹೊಂದುತ್ತದೆ. ಅಂತೂ ರುದ್ರನು ಶಿವನಾಗಬೇಕು ; ಎಂದರೆ ನಮ್ಮ ವಿಷಯಕ್ಕೆ ಶಾಂತನಾಗಬೇಕೆಂಬುದು ಈಗ ಪ್ರಾರ್ಥಿಸಲಿರುವ ಒಂದನೆಯ ಮಂತ್ರದ ಅಭಿಪ್ರಾಯ. ಈಗ ಇನ್ನು ನೇರಾಗಿ ಮಂತ್ರಾರ್ಥವನ್ನು ಅನುಸಂಧಾನಮಾಡೋಣ.

**ಓಂ॥ ನಮಸ್ತೇ ರುದ್ರ ಮನ್ಯವ ಉತೋ ತ ಇಷವೇ ನಮಃ।**
**ನಮಸ್ತೇ ಅಸ್ತು ಧನ್ವನೇ ಬಾಹುಭ್ಯಾಮುತ ತೇ ನಮಃ ॥ ೧ ॥**

'ಎಲೈ ರುದ್ರನೆ, ನಿನಗೆ ನಮಸ್ಕಾರವು. ಮತ್ತು ನಿನ್ನ ಕೋಪಕ್ಕೆ ನಮಸ್ಕಾರ! ಮತ್ತು ನಿನ್ನ ಬಾಣಗಳಿಗೆ, ಧನುಸ್ಸಿಗೆ, ಹಾಗೂ ಧನುರ್ಬಾಣಗಳನ್ನು ಹಿಡಿದಿರುವ ಎರಡು ತೋಳುಗಳಿಗೆ ನಮಸ್ಕಾರ!'

ಭಕ್ತನು ಇಲ್ಲಿ ಮೊದಲು ರುದ್ರನ ಕೋಪಕ್ಕೆ ನಮಸ್ಕಾರವೆಂದಿರುತ್ತಾನೆ. ಸಕಲಕಲ್ಯಾಣಗುಣಪರಿಪೂರ್ಣನಾದ ಭಗವಂತನಲ್ಲಿ ಕೋಪವೇಕೆ ಉಂಟಾಯಿತು ? ಎಂದರೆ ಜೀವರುಗಳು ಮಾಡಿರುವ ಅಪರಾಧದಿಂದ- ಎಂದರ್ಥ. ಲೋಕರಕ್ಷಣೆಗಾಗಿ ಭಗವಂತನು ಶ್ರುತಿಸ್ಮೃತಿರೂಪವಾದ ತನ್ನ ಆಜ್ಞೆಗಳಿಂದ ಧರ್ಮವೆಂಬ ಕಟ್ಟಲೆಯನ್ನು ಎಲ್ಲಾ ಮನುಷ್ಯರುಗಳಿಗೂ ವಿಧಿಸಿರುತ್ತಾನೆ. ಈ ಕಟ್ಟುಪಾಡುಗಳು ಇಲ್ಲದೆಹೋದರೆ ಜಗತ್ತಿನ ಪರಿಪಾಲನೆಯು ಸಾಧ್ಯವಾಗಲಾರದು. ಆದರೆ ಈ ಜೀವನು ಕಾಮವಶನಾಗಿ ಭಗವಂತನನ್ನು ಮರೆತು ತಿರಸ್ಕರಿಸಿ ಸ್ವೇಚ್ಛೆಯಿಂದ ನಡೆಯುತ್ತಾ ಆತನ ಆಜ್ಞೆಗಳನ್ನು ಮೀರಿ ವರ್ತಿಸುತ್ತಿದಾನೆ. ಇಂಥವನ ವಿಷಯದಲ್ಲಿ ಭಗವಂತನ ಕೋಪವು ಸಾಧುವೇ ಆಗಿದೆ. ಎಲ್ಲಾ ಜೀವರುಗಳ ನಡುವೆ ನಾವೂ ಒಬ್ಬರಾದ್ದರಿಂದ ನಮ್ಮಲ್ಲಿಯೂ ಭಗವಂತನ ವಿಷಯಕ್ಕೆ ಅಪರಾಧಶತಗಳೇ ತುಂಬಿಕೊಂಡಿವೆ. ಆದ್ದರಿಂದ ಎಲೈ ರುದ್ರನೆ, ಪ್ರಸನ್ನನಾಗು, ಕೋಪಮಾಡಬೇಡ- ಎಂದು ಭಕ್ತನು ಪ್ರಾರ್ಥಿಸುತ್ತಿದಾನೆ. ಹಾಗೂ ನೀನು ಕೋಪದಿಂದ ನಮ್ಮಮೇಲೆ ಎತ್ತಿರುವ ಬಾಣ-ಧನುಸ್ಸುಗಳಿಗೂ ನಮಸ್ಕಾರ! ಅವುಗಳನ್ನು ಶಾಂತಗೊಳಿಸು - ಎಂದು ಬೇಡಲಾಗಿದೆ. ಪಾಪಿಗಳಕಡೆಗೆ ಸ್ವಭಾವದಿಂದಲೇ ಆತನ ಧನುರ್ಬಾಣಗಳೂ ಬಾಹುಗಳೂ ವ್ಯಾಪಾರಮಾಡುತವು. ಅದನ್ನು ಪರಿಹರಿಸಿಕೊಳ್ಳಲು ರುದ್ರನಿಗೂ ಆತನ ಧನುರ್ಬಾಣಯುತವಾದ ಹಸ್ತಗಳಿಗೂ ಇಲ್ಲಿ ವಂದನೆಯನ್ನು ಸಮರ್ಪಿಸಿದೆ- ಎಂದು ತಿಳಿಯಬೇಕು.

---

# ೫. ತಯಾ ನೋ ರುದ್ರ ಮೃಡಯ

ಈಗ ಎರಡನೆಯ ಮಂತ್ರಾರ್ಥವನ್ನು ಪರಿಶೀಲಿಸೋಣ :

ಯಾ ತ ಇಷುಶ್ಶಿವತಮಾ ಶಿವಂ ಬಭೂವ ತೇ ಧನುಃ ।
ಶಿವಾ ಶರವ್ಯಾ ಯಾ ತವ ತಯಾ ನೋ ರುದ್ರ ಮೃಡಯ ॥ ೨ ॥

'ಎಲೈ ರುದ್ರನೆ, ಯಾವ ನಿನ್ನ ಹಿಂಸಾಕಾರಣವಾದ ಬಾಣವೂ ಧನುಸ್ಸೂ ಶಾಂತವಾದವೋ ಅವುಗಳಿಂದ ನಮ್ಮನ್ನು ಸುಖಗೊಳಿಸುವವನಾಗು.'

ಇಲ್ಲಿ ಭಕ್ತನು ಭಗವಂತನನ್ನು ತನಗೆ ಸುಖವನ್ನುಂಟುಮಾಡುವಂತೆ ಪ್ರಾರ್ಥಿಸುತ್ತಿದ್ದಾನೆ. "ಮೊದಲು ಪಾಪಿಷ್ಠನಾಗಿದ್ದ ನನ್ನ ವಿಷಯದಲ್ಲಿ ಎಲೈ ಭಗವಂತನೆ, ನೀನು ಧನುರ್ಬಾಣಗಳನ್ನು ಎತ್ತಿದ್ದೆಯಷ್ಟೆ! ಅನಂತರ ನನ್ನ ಪ್ರಾರ್ಥನೆಯನ್ನು ಮನ್ನಿಸಿ ಅವುಗಳನ್ನು ಶಾಂತಗೊಳಿಸಿರುತ್ತೀಯೆ. ಹೀಗೆ ಶಿವತಮವಾಗಿ ಮಾಡಲ್ಪಟ್ಟ ನಿನ್ನ ಬಾಣಗಳೂ ಧನುಸ್ಸೂ ನನಗೆ ಧೈರ್ಯವನ್ನುಂಟುಮಾಡಿವೆ. ಆದರೂ ಮುಂದೆಯೂ ಅವು ಎಂದೂ ನನ್ನನ್ನು ಭಯಗೊಳಿಸದಂತೆಯೂ ಅವೇ ನನಗೆ ಅಭಯವನ್ನುಂಟುಮಾಡುವಂತೆಯೂ ಮಾರ್ಪಡಿಸಿ ನನಗೆ ಸುಖವನ್ನುಂಟುಮಾಡು" ಎಂಬಿದು ಈ ಮಂತ್ರದ ಒಟ್ಟರ್ಥ. ಭಗವಂತನಿಗೆ 'ಮೃಡ' ಎಂಬ ಹೆಸರೂ ಇದೆ. ಸುಖವನ್ನುಂಟು ಮಾಡುವದರಿಂದಲೇ ಅವನನ್ನು 'ಮೃಡಯ'– ಎಂದು ಇಲ್ಲಿ ಬೇಡಿಕೊಂಡಿದೆ. ಧನುರ್ಬಾಣಗಳಕಡೆಯಿಂದ ಸುಖವುಂಟಾಗುವದು ಹೇಗೆ? ಎಂದರೆ ಅವುಗಳು ಪರಮೇಶ್ವರನ ಕೈಗಳಿಂದ ಕೆಳಕ್ಕೆ ಇಳಿಸಲ್ಪಡಲಾಗಿ ಅವುಗಳನ್ನು ನೋಡಿದರೂ ಭಯವಾಗುವದಿಲ್ಲ; ಆತಂಕವೂ ಕಡಿಮೆಯಾಗುತ್ತದೆ. ಆದ್ದರಿಂದ ಹಾಗೆಂತ ಪ್ರಾರ್ಥಿಸಿದೆ.

ಈಗ ಮೂರನೆಯ ಮಂತ್ರವನ್ನು ನೋಡೋಣ :

ಯಾ ತೇ ರುದ್ರ ಶಿವಾ ತನೂರಘೋರಾಽಪಾಪಕಾಶಿನೀ। ತಯಾ
ನಸ್ತನುವಾ ಶಂ ತಮಯಾ ಗಿರಿಶಂತಾಭಿ ಚಾಕಶೀಹಿ ॥ ೩ ॥

'ಎಲೈ ರುದ್ರನೆ, ಯಾವ ನಿನ್ನ ಘೋರವಲ್ಲದ ಮಂಗಳಕರವಾದ ಶರೀರವು ಆತ್ಮಜ್ಞಾನವನ್ನುಂಟುಮಾಡತಕ್ಕದ್ದಾಗಿದೆಯೋ ಆ ಸುಖಕರವಾದ ಶರೀರದಿಂದ, ಎಲೈ ಗಿರಿಶಂತನೆ, ನಮ್ಮನ್ನು ಜ್ಞಾನಯುಕ್ತರಾಗುವಂತೆ ಮಾಡು.'

ಈ ಮಂತ್ರದಲ್ಲಿ 'ಜ್ಞಾನವನ್ನು ಕೊಡು' ಎಂದು ಭಗವಂತನನ್ನು ಪ್ರಾರ್ಥಿಸಿದೆ. ಭಗವಂತನಿಗೆ ಘೋರಶರೀರವೆಂದೂ ಅಘೋರಶರೀರವೆಂದೂ ಎರಡು ಬಗೆಯ ಶರೀರಗಳಿರುತ್ತವೆ. ಉಪನಿಷತ್ತಿನಲ್ಲಿ 'ಅಘೋರೇಭ್ಯೋಽಥ' ಎಂಬ ಮಂತ್ರದಲ್ಲಿ ಈ ಎರಡುಬಗೆಯ ಹಾಗೂ ಉಳಿದ ಎಲ್ಲಾ ರೂಪಗಳಿಗೂ ನಮಸ್ಕಾರವೆಂದು ಸ್ತುತಿಸಿದೆ. ಪ್ರಕೃತದಲ್ಲಿ ಅಘೋರಶರೀರವನ್ನು ಕುರಿತು ಪ್ರಸ್ತಾಪಿಸಿದೆ. ಇಲ್ಲಿ ಒಂದು ಶಂಕೆ : ದಯಾಮಯನಾದ ಪರಮೇಶ್ವರನಿಗೆ ಘೋರಶರೀರವಾದರೂ ಏತಕ್ಕೆ ಬೇಕು ?- ಎಂದು ಅನ್ನಿಸಬಹುದು. ಆದರೆ ಜಗತ್ತಿನಲ್ಲಿರುವ ದುಷ್ಟರನ್ನು ನಿಗ್ರಹಮಾಡುವದಕ್ಕೆ ಇದು ಉಪಯೋಗಕರ ವಾಗಿರುತ್ತದೆ. ಹೇಗೆ ಪೊಲೀಸ್, ಮಿಲಿಟರಿ- ಮುಂತಾದವುಗಳು ನಾಗರಿಕ ರನ್ನು ರಕ್ಷಿಸುವದಕ್ಕೂ ಶತ್ರುಗಳನ್ನೂ ಕಳ್ಳರನ್ನೂ ದಮನಗೊಳಿಸುವದಕ್ಕೂ ಉಪಯೋಗವಾಗುವವೋ ಹಾಗೆಯೇ ಭಗವಂತನ ಘೋರರೂಪವು ಪಾಪಿ ಗಳನ್ನೂ ದುಷ್ಟರನ್ನೂ ಸಂಹರಿಸಲು ಬೇಕಾಗುತ್ತದೆ. ಅದನ್ನು ಬಿಟ್ಟು ಶಾಂತವಾದ ರೂಪದಿಂದ ಪರಮೇಶ್ವರನು ತನಗೆ ತೋರಿಕೊಳ್ಳುವಂತೆ ಭಕ್ತನು ಇಲ್ಲಿ ಅಪೇಕ್ಷಿಸಿರುತ್ತಾನೆ. ಮತ್ತು ಆ ರೂಪವು ಎಂಥದ್ದೆಂದರೆ ಅಪಾಪ ಕಾಶಿನಿಯು, ಪಾಪವಿರೋಧಿಯಾದ ಬ್ರಹ್ಮಾತ್ಮಜ್ಞಾನವನ್ನು ಪ್ರಕಾಶ ಗೊಳಿಸತಕ್ಕದ್ದು ; ಹಾಗೂ ಶಿವವಾದದ್ದು. ಇಂಥ ನಿರತಿಶಯಸುಖರೂಪ ವಾದ ಶರೀರದಿಂದ ನಮ್ಮನ್ನು ಪ್ರಬೋಧಗೊಳಿಸುವವನಾಗು- ಎಂದು ಅಭಿಪ್ರಾಯ.

ಇಲ್ಲಿ 'ಗಿರಿಶಂತ' ಎಂದು ಎರಡನೆಯಬಾರಿಗೆ ಭಗವಂತನನ್ನು ಸಂಬೋಧಿಸಿದೆ. ಗಿರಿ ಎಂದರೆ (ಗಿರೌ ಎಂಬರ್ಥದಲ್ಲಿ ವೈದಿಕಪ್ರಯೋಗ) ಮಾತಿನಲ್ಲಿ ಇದ್ದುಕೊಂಡು ಲೋಕಗಳಿಗೆ ಶಂ- ಎಂದರೆ ಸುಖವನ್ನು ತ- ತನೋತಿ ಉಂಟುಮಾಡುತ್ತಾನೆ. ಆದ್ದರಿಂದ ಗಿರಿಶಂತನು ಪರಮೇಶ್ವರನು. ಹೇಗೆಂದರೆ : ವೇದಾಂತಶಾಸ್ತ್ರದಲ್ಲಿ ಶ್ರವಣಮನನನಿದಿಧ್ಯಾಸನಾದಿಗಳು ಜ್ಞಾನಕ್ಕೆ ಸಾಕ್ಷಾತ್‌ಸಾಧನಗಳೆಂದು ಹೇಳುವರು. ಸಾಮಾನ್ಯಸಾಧಕರಿಗೆ ಅವು ಯಾವವೂ ದೊರಕದಿದ್ದರೂ ಪರಮೇಶ್ವರನ ಸ್ತುತಿರೂಪವಾದ ವಾಕ್ಕಿನಲ್ಲಿ ಎಂದರೆ ಪಂಚಾಕ್ಷರೀಮಂತ್ರದಲ್ಲಿ ಸಾಕ್ಷಾತ್ ಮಹಾದೇವನೇ ಇದ್ದುಕೊಂಡಿರು ವನಾದ್ದರಿಂದ ಕೇವಲ ಮಂತ್ರವನ್ನು ಜಪಮಾಡಿದರೂ ಗಿರಿಶಂತನಾದ ಆತನ ಅನುಗಹದಿಂದ ಜ್ಞಾನಪ್ರಾಪ್ತಿಯಾಗುವದು- ಎಂಬುದನ್ನು ಇಲ್ಲಿ ತಿಳಿಸಿದೆ.

ಈಗ ನಾಲ್ಕನೆಯ ಮಂತ್ರವನ್ನು ವಿಚಾರಮಾಡೋಣ :

ಯಾಮಿಷುಂ ಗಿರಿಶಂತ ಹಸ್ತೇ ಬಿಭರ್ಷ್ಯಸ್ತವೇ । ಶಿವಾಂ ಗಿರಿತ್ರ ತಾಂ ಕುರು ಮಾ ಹಿಗ್ಂಸೀಃ ಪುರುಷಂ ಜಗತ್ ॥ ೪ ॥

'ಎಲೈ ಗಿರಿಶಂತನೆ, ಪಾಪಿಗಳಕಡೆಗೆ ಎಸೆಯುವದಕ್ಕಾಗಿ ಯಾವ ಬಾಣವನ್ನು ನೀನು ಕೈಯಲ್ಲಿ ಧರಿಸಿರುವೆಯೋ ಅದನ್ನು ಶಿವವಾಗಿ ಮಾಡು. ಜಗತ್ತನ್ನೂ ನಮ್ಮ ಪುತ್ರಪೌತ್ರಾದಿಕುಟುಂಬವರ್ಗವನ್ನೂ ಗೋಧನಗೃಹಾದಿಗಳನ್ನೂ ಹಿಂಸಿಸ ಬೇಡ'

ಈ ಮಂತ್ರದಲ್ಲಿ ಭಕ್ತನು ಅನಿಷ್ಟವನ್ನು ಪರಿಹಾರಮಾಡುವಂತೆ ಪರ ಮೇಶ್ವರನನ್ನು ಪ್ರಾರ್ಥಿಸಿರುತ್ತಾನೆ. ಇಲ್ಲಿ ಗಿರಿಶಂತನೆಂದರೆ ಕೈಲಾಸವೆಂಬ ಪರ್ವತದಲ್ಲಿದ್ದುಕೊಂಡು ಲೋಕಕ್ಕೆಲ್ಲ ಸುಖವನ್ನುಂಟುಮಾಡುವವನು– ಎಂದರ್ಥ. ಪರಮೇಶ್ವರನು ಕೆಟ್ಟಕರ್ಮಗಳನ್ನು ಮಾಡಿದವನಿಗೂ ಒಳ್ಳೆ ಯದನ್ನು ಹೇಗೆ ಮಾಡಿಯಾನು? ಎಂದು ಶಂಕಿಸಬಾರದು. ಆತನನ್ನು ಮೊರೆ ಹೊಗುವವರೆಗೆ ಮಾತ್ರವೇ ನಮ್ಮ ದುಷ್ಕರ್ಮಗಳು ನರಕಾದಿಫಲದಾಯಕ ಗಳಾಗಿರುವವು. ಆದರೆ ಆತನ ಕಡೆಗೆ ನಾವು ತಿರುಗಿ ಶರಣಾಗತರಾದರೆ ಸಾಕು– ಇನ್ನು ನರಕಾದಿಗಳ ಹೆದರಿಕೆಯಿರಲಾರದು. ಆದ್ದರಿಂದ ಇಲ್ಲಿ ಭಕ್ತನು "ಎಲೈ ಪರಮೇಶ್ವರನೆ, ಈ ಮೊದಲು ಪಾಪಿಯಾದ ನನ್ನ ಮೇಲೆ ಎಸೆಯಲು ಯಾವ ಬಾಣವನ್ನು ನೀನು ಧರಿಸಿದ್ದೆಯೋ ಅದು ಅವಶ್ಯವಿಲ್ಲ. ಏಕೆಂದರೆ ಈಗ ನಾನು ನಿನಗೆ ಭಕ್ತನಾಗಿರುತ್ತೇನೆ. ಆದ್ದರಿಂದ ಎಲೈ ಗಿರಿತ್ರ, ಅದನ್ನು ಶಿವವಾಗಿ ಮಾಡು"– ಎಂದು ಕೇಳಿಕೊಂಡಿರುತ್ತಾನೆ. ಇಲ್ಲಿ ಗಿರಿತ್ರ ನೆಂದರೆ ಹಿಂದೆ ತಿಳಿಸಿದಂತೆಯೇ ವಾಕ್ಕಿನಲ್ಲಿದ್ದುಕೊಂಡು, ತ್ರಾಯತೇ– ಕಾಪಾಡುತ್ತಾನೆ– ಎಂದಭಿಪ್ರಾಯ.

ಇಲ್ಲಿ ಭಕ್ತನು ಇನ್ನೊಂದು ಹೆಚ್ಚಿನ ಪ್ರಾರ್ಥನೆಯನ್ನೂ ಭಗವಂತನಿಗೆ ಸಲ್ಲಿಸುತ್ತಿದಾನೆ. ಏಕೆಂದರೆ: ತನ್ನನ್ನು ಮಾತ್ರವೇ ಅಲ್ಲದೆ ತನ್ನ ಪುತ್ರ ಪೌತ್ರಬಂಧು ಮಿತ್ರಾದಿವರ್ಗದವರನ್ನೂ ಗವಾದಿಸಂಪತ್ತನ್ನೂ ಹಿಂಸೆಮಾಡದೆ ಕಾಪಾಡಬೇಕೆಂದು ಕೇಳಿಕೊಂಡಿರುತ್ತಾನೆ. ಇದೂ ಅವಶ್ಯಕವೆಂದು ಹೇಳ ಬಹುದು. ಏಕೆಂದರೆ ನಾವು ಸುಖವಾಗಿರಬೇಕಾದರೆ ನಮ್ಮವರೂ, ನಮ್ಮ ಸಂಪತ್ತೂ, ಸುತ್ತುವಳೆಯುವೂ ಎಲ್ಲವೂ ಸುಖವಾಗಿರಬೇಕಾದದ್ದು ಅಗತ್ಯ. ನಮ್ಮ ಗುಂಪಿನಲ್ಲಿಯೇ ಯಾರುಯಾರು ಪರಮೇಶ್ವರನಿಗೆ ಏನೇನು ಅಪರಾಧ

ಗಳನ್ನು ಮಾಡುತ್ತಿರುವರೋ ತಿಳಿಯುವದಿಲ್ಲ. ಹಾಗೆ ಅಪರಾಧಮಾಡಿದವರೆಲ್ಲರೂ ಪರಮೇಶ್ವರನಿಗೆ ತಮ್ಮ ತಪ್ಪನ್ನು ಕ್ಷಮಿಸುವಂತೆ ಬೇಡಿಕೊಳ್ಳುತ್ತಾರೆಂದೂ ನಂಬಲಾಗುವದಿಲ್ಲ. ಆದ್ದರಿಂದ ಎಲ್ಲರ ಪರವಾಗಿ ನಾವೇ ಈಶ್ವರನಲ್ಲಿ ಬೇಡಿಕೊಳ್ಳುವದೇ ಒಳ್ಳೆಯದಲ್ಲವೆ ? ದೇವತಾರ್ಚನೆಯ ಕೊನೆಯಲ್ಲಿ "ನನ್ನಿಂದಲಾಗಲಿ, ನನ್ನ ಸಹೋದರರುಗಳಿಂದಲಾಗಲಿ, ನನ್ನ ಬಂಧುಗಳಿಂದಲಾಗಲಿ ಮಾಡಲ್ಪಟ್ಟಿರಬಹುದಾದ ನೂರು ಅಪರಾಧಗಳನ್ನಾದರೂ ಎಲೈ ಪುರುಷೋತ್ತಮನೆ, ಕ್ಷಮಿಸು" ಎಂಬರ್ಥದ ಶ್ಲೋಕವೊಂದನ್ನು ವೈಖಾನಸರು ಪಠಿಸುತ್ತಾರೆ. ಹಾಗೆಯೇ ಇಲ್ಲಿಯೂ 'ಮಾ ಹಿಂಸೀಃ ಪುರುಷಂ ಜಗತ್' ಎಂಬುದಾಗಿ ಎಲ್ಲರ ಪರವಾಗಿಯೂ ಭಗವಂತನಿಗೆ ಪ್ರಾರ್ಥನೆಯು ಸಲ್ಲಿಸಲ್ಪಟ್ಟಿದೆ. ವಾಚಕರೆ, ಇಂಥ ವೈದಿಕಪ್ರಾರ್ಥನೆಗಳು ಹೇಗೆ ಜಗತ್ಕಲ್ಯಾಣಕಾರಕವಾಗಿವೆಯೆಂಬುದನ್ನು ಇದರಿಂದ ತಿಳಿಯಿರಿ.

---

## ೬. ಪ್ರಥಮೋ ದೈವ್ಯೋ ಭಿಷಕ್

ಹಿಂದಿನ ನಾಲ್ಕು ಮಂತ್ರಗಳಲ್ಲಿ ಇಷ್ಟಪ್ರಾಪ್ತಿ, ಅನಿಷ್ಟಪರಿಹಾರಗಳನ್ನು ಪ್ರಾರ್ಥಿಸಿದ ಅನಂತರ ಇಲ್ಲಿ ಅವೆರಡನ್ನೂ ಒಟ್ಟಿಗೆ ಪ್ರಾರ್ಥಿಸಿದೆ.

ಶಿವೇನ ವಚಸಾ ತ್ವಾ ಗಿರಿಶಾಚ್ಛಾ ವದಾಮಸಿ । ಯಥಾ ನಸ್ಸರ್ವಮಿಜ್ಜಗದಯಕ್ಷ್ಮಗ್ಂ ಸುಮನಾ ಅಸತ್ ॥ ೫ ॥

"ಎಲೈ ಗಿರಿಶನೆ, ನಿನ್ನನ್ನು ಮಂಗಲಕರವಾದ ಮಾತಿನಿಂದ ನಿರ್ಮಲವಾಗಿ ಸ್ತೋತ್ರಮಾಡುವೆವು. ಆ ಯಾವ ಸ್ತುತಿಯಿಂದ ನಮ್ಮ ಸಂಬಂಧವುಳ್ಳ ಪಶುಪುತ್ರಾದಿರೂಪವಾದ ಜಗತ್ತೆಲ್ಲವೂ ರೋಗರಹಿತವೂ ಸೌಮನಸ್ಯವುಳ್ಳದ್ದೂ ಆಗುವದೋ ಹಾಗೆ ಸ್ತುತಿಸುವೆವು" ॥ ೫ ॥

ಇಲ್ಲಿ ಗಿರಿಶನೆಂದು ಭಗವಂತನನ್ನು ಸಂಬೋಧಿಸಿರುವದು ಅರ್ಥವತ್ತಾಗಿದೆ. ಗಿರಿ ಎಂದರೆ ಬೆಟ್ಟವೆಂದರ್ಥ. ಬೆಟ್ಟದಂತಿರುವ ವೇದಗಳಲ್ಲಿ ಶೇತೇ–ಇದ್ದುಕೊಂಡಿರುತ್ತಾನಾದ್ದರಿಂದ ಗಿರಿಶನು ಪರಮೇಶ್ವರನು. ಹಿಂದೆ ಭರದ್ವಾಜನೆಂಬ ಒಬ್ಬ ಬ್ರಾಹ್ಮಣನು ಇಡಿಯ ವೇದರಾಶಿಯನ್ನೆಲ್ಲ ಅಧ್ಯಯನಮಾಡಿ ಪೂರೈಸಬೇಕೆಂದು ಹಟತೊಟ್ಟವನಾಗಿ ಇಡಿಯ ಜೀವನವೆಲ್ಲ ವೇದಾಧ್ಯಯನ

ಮಾಡಿ ಕೊನೆಗೆ ಮುದುಕನಾಗಿಬಿಟ್ಟನು. ಆಗ ದೇವೇಂದ್ರನು ಬಂದು ಮೂರು ಬಾರಿ ಮತ್ತೆಮತ್ತೆ ಒಂದು ನೂರು ವರ್ಷಗಳಂತೆ ಆಯುಸ್ಸನ್ನು ಅವನಿಗೆ ಅನುಗ್ರಹಿಸಿದನು. ಹೀಗೆ ನಾಲ್ಕುನೂರು ವರ್ಷಗಳ ಅಧ್ಯಯನವು ಪೂರೈಸಿದ ಮೇಲೂ ಭರದ್ವಾಜನು ಹಟವನ್ನು ಬಿಡದಿರಲು ಇಂದ್ರನು ಅವನನ್ನು ಕರೆದು ಕೊಂಡು ಹೋಗಿ ಮೂರು ಬೆಟ್ಟಗಳನ್ನು ತೋರಿಸಿ 'ಎಲಾ ಭರದ್ವಾಜ, ಇವೇ ವೇದಗಳು; ಈವರೆಗೆ ನೀನು ಓದಿರುವದು ಇಷ್ಟು!' ಎಂದು ಹೇಳಿ ಮೂರು ಬೆಟ್ಟಗಳಿಂದಲೂ ಒಂದೊಂದು ಮುಷ್ಟಿಯಷ್ಟು ಮಣ್ಣನ್ನು ತೆಗೆದು ಭರದ್ವಾಜನ ಜೋಳಿಗೆಗೆ ಹಾಕಿದನು. ಆಗ ಭರದ್ವಾಜನಿಗೆ ವೇದಗಳ ಅನಂತತೆಯು ತಿಳಿ ಯಿತು. ಹೀಗೆ 'ವೇದಗಳು ಅನಂತವಾಗಿವೆ' ಎಂದು ತೈತ್ತಿರೀಯ ಬ್ರಾಹ್ಮಣದ ವೇದಭಾಗದಲ್ಲಿ ಒಂದು ಕಥೆಯಿದೆ. ಅದರಂತೆ ಬೆಟ್ಟಗಳಂತಿರುವ ವೇದಗಳಲ್ಲಿ ಅಡಗಿರುವ ಪರಮೇಶ್ವರನೇ ಗಿರಿಶನು. ಅವನನ್ನು ನಮ್ಮ ಪರಿಶುದ್ಧವಾದ ವಾಕ್ಕುಗಳಿಂದ ಸ್ತುತಿಸಬೇಕು. ನಮ್ಮ ವಾಕ್ಕುಗಳು ಪರಿಶುದ್ಧವಾಗಬೇಕಾ ದರೂ ಪರಮೇಶ್ವರನ ಸಂಬಂಧವು ಬೇಕೇ ಬೇಕು. ಎಂಥ ಚರಂಡಿಯ ನೀರಾ ದರೂ ಗಂಗಾಪ್ರವಾಹದಲ್ಲಿ ಸೇರಿದಕೂಡಲೆ ಪವಿತ್ರವಾಗಿಬಿಡುವಂತೆ ನಮ್ಮ ಲೌಕಿಕವಾದ ವಾಕ್ಕು ಕೂಡ ಪರಮೇಶ್ವರನನ್ನು ಸ್ತುತಿಸಲಾರಂಭಿಸಿದರೆ ಪವಿತ್ರವಾಗುವದು. ಹೀಗೆ ಸ್ತೋತ್ರಮಾಡುವದರಿಂದ ಆ ಭಗವಂತನು ಸುಪ್ರೀತನಾಗಿ ನಮ್ಮ ಹಾಗೂ ನಮ್ಮ ಸುತ್ತುವಳಿಯದ ಎಲ್ಲಾ ಪ್ರಾಣಿಗಳ ನ್ನೂ ಜಗತ್ತನ್ನೂ ರೋಗವಿಲ್ಲದ್ದನ್ನಾಗಿಯೂ ಸುಖಕರವಾಗಿಯೂ ಮಾಡು ತ್ತಾನೆ. ಅದಕ್ಕಾಗಿಯೇ ಸ್ತುತಿಯು ಅವಶ್ಯವು ಎಂದಭಿಪ್ರಾಯ.

ಅಧ್ಯವೋಚದಧಿವಕ್ತಾ ಪ್ರಥಮೋ ದೈವ್ಯೋ ಭಿಷಕ್ । ಅಹೀ ಗ್‌ಂಶ್ಚ ಸರ್ವಾನ್ ಜಂಭಯನ್ ಸರ್ವಾಶ್ಚ ಯಾತುಧಾನ್ಯಃ ॥ ೬ ॥

"ಅಧಿವಕ್ತನೂ ಪ್ರಧಾನನೂ ದೇವತೆಗಳಲ್ಲಿರುವವನೂ, ಭವರೋಗ ವೈದ್ಯನೂ ಆದ ಪರಮೇಶ್ವರನು ಎಲ್ಲಾ ವಿಷಪ್ರಾಣಿಗಳು ರಾಕ್ಷಸರೇ ಮುಂತಾ ದವರನ್ನೂ ನಾಶಮಾಡಿ ನನ್ನ ವಿಷಯದಲ್ಲಿ ಪಕ್ಷಪಾತವಚನವನ್ನು ಹೇಳುವವ ನಾಗಲಿ!" ॥ ೬ ॥

ಈ ಮಂತ್ರದಲ್ಲಿ ಭಕ್ತನು ತನ್ನನ್ನು ಪರಮೇಶ್ವರನ ಕಡೆಯುವನೆಂಥು ವಹಿಸಿಕೊಳ್ಳಬೇಕೆಂದು ದೇವನಲ್ಲಿ ಬೇಡುತ್ತಿದ್ದಾನೆ. ಅಧಿವಚನವೆಂದರೆ ಪಕ್ಷ

ವನ್ನು ವಹಿಸಿ ಮಾತನಾಡುವದು. ಒಂದುವೇಳೆ ಹಿಂದಿನ ನಮ್ಮ ಪ್ರಾರ್ಥನೆಗಳಿಂದ ಪರಮೇಶ್ವರನು ಸಂತುಷ್ಟನಾಗಿ ನಮ್ಮನ್ನು ಶಿಕ್ಷಿಸದೆ ಬಿಟ್ಟರೂ ಅವನ ಕಡೆಯವರಾದ ಯಮ, ಚಿತ್ರಗುಪ್ತರೇ ಮುಂತಾದ ಸಾಕ್ಷಿದೇವತೆಗಳು ನಮ್ಮನ್ನು ಬಿಟ್ಟಾರೆ ? ಅವರು ಶಿಕ್ಷಿಸುವದಿಲ್ಲವೆ ? ಎಂಬ ಶಂಕೆ ಬರಲಾಗಿ 'ಹಾಗಿಲ್ಲ, ನಾವು ಪರಮೇಶ್ವರನ ಕಡೆಯುವರೆಂದು ತಿಳಿದರೆ ಅವರು ಏನೂ ಮಾಡಲಾರರು' ಎಂಬ ಅಭಿಪ್ರಾಯದಿಂದ ಭಗವಂತನನ್ನು ಕುರಿತು 'ದೇವ, ನೀನು ನನ್ನನ್ನು ನಿನ್ನ ಕಡೆಯುವನನ್ನಾಗಿ ಮಾಡಿಕೊ; ಆ ರೀತಿಯಾಗಿ ನಿನ್ನ ಅಧೀನರಾದ ದೇವತೆಗಳಿಗೆ ತಿಳಿಸು'– ಎಂದು ಭಕ್ತನು ಬೇಡಿಕೊಳ್ಳುತ್ತಿದ್ದಾನೆ. ಭಕ್ತನ ಪರವಾಗಿ ವಹಿಸಿಕೊಂಡು ಮಾತನಾಡುವದೇ ಅಧಿವಚನವು. ಅದಕ್ಕಾಗಿ ಪರಮೇಶ್ವರನಿಗೆ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸಲಾಗಿದೆ. ಭಗವಂತನು ಅಧಿವಕ್ತನು. ಎಂದರೆ ಭಕ್ತರನ್ನು ಕುರಿತು ಅಧಿವಚನವನ್ನು ಆಡುವವನು. ಮತ್ತು ಪ್ರಥಮನು– ಎಂದರೆ ಪ್ರಧಾನನು. ದೇವತೆಗಳಲ್ಲಿ ಶ್ರೇಷ್ಠನು– ಎಂದಭಿಪ್ರಾಯ. ದೈವ್ಯನು ಎಂದರೆ ದೇವತೆಗಳಲ್ಲೆಲ್ಲ ಒಳಹೊಕ್ಕು ಅಂತರ್ಯಾಮಿಯಾಗಿರುವವನು. ಭಿಷಕ್ ಎಂದರೆ ವೈದ್ಯನು. ಸಂಸಾರವೆಂಬ ರೋಗಕ್ಕೆ ಮದ್ದನ್ನು ನೀಡುವ ವೈದ್ಯನಾಥನು. ಕಾಮಾದಿಮನೋರೋಗಗಳು, ದುಃಖಾದಿಗಳು, ದಾರಿದ್ರ್ಯ–ಎಲ್ಲಕ್ಕೂ ಚಿಕಿತ್ಸಕನಾಗಿರುವವನು. ಇಂಥ ಪರಮೇಶ್ವರನನ್ನು ಅಧಿವಚನವನ್ನು ಆಡಬೇಕೆಂತ ಇಲ್ಲಿ ಕೇಳಿಕೊಳ್ಳಲಾಗಿದೆ.

ಇನ್ನು ಹೊರಗಿನ ಭಯಗಳಿಂದಲೂ ನಮ್ಮನ್ನು ಕಾಪಾಡಬೇಕೆಂತ ಪ್ರಾರ್ಥಿಸಲಾಗಿದೆ. ಹೇಗೆಂದರೆ: ಹಾವು, ಚೇಳು ಮುಂತಾದ ವಿಷಜಂತುಗಳು, ಭೂತಪ್ರೇತಪಿಶಾಚರಾಕ್ಷಸಾದಿಗಳು ಇವೆಲ್ಲವೂ ನಮಗೆ ಆಗಾಗ್ಗೆ ಭಯವನ್ನೂ ದುಃಖವನ್ನೂ ಉಂಟುಮಾಡುತ್ತಿರುವವು. ಇಂಥ ವಿಷಭಯಬಾಧಾದಿಗಳನ್ನು ಪರಿಹರಿಸಿ ಕಾಪಾಡಬೇಕೆಂತ ಭಕ್ತನು ಪರಮೇಶ್ವರನಲ್ಲಿ ಬೇಡಿಕೊಂಡಿರುತ್ತಾನೆ. ಶಿವಕವಚದಲ್ಲಿ ಬರುವ "ದುಃಸ್ವಪ್ನದುಶ್ಶಕುನ...." ಎಂಬ ಶ್ಲೋಕವನ್ನು ಇಲ್ಲಿ ಅನುಸಂಧಾನಮಾಡಿಕೊಳ್ಳಬೇಕು. ನನಗೆ ಒದಗುವ ಕೆಟ್ಟಕನಸುಗಳು, ಶಕುನಗಳು, ದುರ್ಗತಿ, ಮನೋರೋಗ, ದುರ್ಭಿಕ್ಷ, ದುರ್ವ್ಯಸನಾದಿಗಳು, ಆಧ್ಯಾತ್ಮಿಕಾದಿತಾಪಗಳು, ವಿಷಭೀತಿ, ವ್ಯಾಧಿ–ಮುಂತಾದವುಗಳನ್ನು ಜಗದೊಡೆಯನಾದ ಭಗವಂತನು ನಾಶಮಾಡಲಿ! ಎಂದು ಅಲ್ಲಿ ಬೇಡಿದೆ. ಅದನ್ನೇ ಇಲ್ಲಿಯೂ ನೆನಪುಮಾಡಿಕೊಳ್ಳಬೇಕು.

———

## ೭. ಸ ದೃಷ್ಟೋ ಮೃಡಯಾತಿ ನಃ

ಈಗ ಏಳನೆಯ ಮಂತ್ರವನ್ನು ವಿಚಾರಮಾಡಬೇಕಾಗಿದೆ. ಈ ಮಂತ್ರದಲ್ಲಿ ಸಕಲಕರ್ಮಸಾಕ್ಷಿಯಾದ ಆದಿತ್ಯಾತ್ಮಕನಾದ ರುದ್ರನನ್ನು ಪ್ರಾರ್ಥಿಸಿದೆ. ಹೇಗೆಂದರೆ :

**ಅಸೌ ಯಸ್ತಾಮ್ರೋ ಅರುಣ ಉತ ಬಭ್ರುಸ್ಸುಮಂಗಲಃ ।**
**ಯೇ ಚೇಮಾಗ್ಂ ರುದ್ರಾ ಅಭಿತೋ ದಿಕ್ಷು ಶ್ರಿತಾಸ್ಸಹಸ್ರಶೋಽ**
**ವೈಷಾಗ್ಂ ಹೇಡ ಈಮಹೇ ॥ ೭ ॥**

"ಹಿಂದೆ ಸ್ತುತಿಸಲ್ಪಟ್ಟ ಆ ರುದ್ರನೇ ಈಗ ಎದುರಿಗೆ ಕಂಡುಬರುತ್ತಿರುವ ಕೆಂಪುವರ್ಣದ, ನಸುಗೆಂಪಿನ ವರ್ಣದ, ಹಾಗೂ ಹಳದಿಯ ಬಣ್ಣದವನಾಗಿ ತೋರುತ್ತಿರುವ ಬಭ್ರುವೆಂಬ ಮಂಗಲಕರನಾದ ಆದಿತ್ಯನಾಗಿರುತ್ತಾನೆ. ಈ ಭೂಮಿಯುನ್ನು ಎಲ್ಲೆಲ್ಲೂ ಸುತ್ತುವರಿದಿರುವ ಸಹಸ್ರಾರು ಸಂಖ್ಯೆಯ ಯಾವ ರುದ್ರರಿರುವರೋ ಅಂಥವರೆಲ್ಲರೂ ಒಂದಾಗಿ ಸೇರಿರುವ ಈ ಆದಿತ್ಯನೆಂಬ ರುದ್ರನನ್ನು ನಾವು ವಿಹಿತಾಕರಣನಿಷಿದ್ಧಸೇವೆಗಳೆಂಬ ಅಪಚಾರಗಳಿಂದ ಉಂಟಾದ ಕೋಪದಿಂದ ಸಮಾಧಾನಗೊಳಿಸಿ ಸ್ತುತಿನಮಸ್ಕಾರಗಳಿಂದ ಭಜಿಸುವೆವು."

ಈ ಮಂತ್ರದಲ್ಲಿ ಪರಮೇಶ್ವರನ ಅಷ್ಟಮೂರ್ತಿಗಳಲ್ಲಿ ಪ್ರಸಿದ್ಧವಾದ ಪ್ರತ್ಯಕ್ಷಮೂರ್ತಿಯಾದ ಆದಿತ್ಯನನ್ನು ಸ್ತುತಿಸಲಾಗಿದೆ. ಆದಿತ್ಯನು ತ್ರಿಮೂರ್ತ್ಯಾತ್ಮಕನೆಂದು ಪುರಾಣಗಳಲ್ಲಿ ಹೊಗಳಿದೆ. ಶಿವಪುರಾಣದಲ್ಲಿ ಆದಿತ್ಯನನ್ನು ರುದ್ರನ ಶರೀರವೆಂದೇ ವರ್ಣಿಸಿದೆ. ಅಂತೂ ಆದಿತ್ಯನೆಂಬವನು ಪ್ರತ್ಯಕ್ಷರುದ್ರನು- ಎಂದಾಯಿತು. ಸೂರ್ಯನು ಉದಯಿಸುವಾಗ ಕೆಂಪಾಗಿರುವನು. ಅನಂತರ ಹೊಂಬಣ್ಣನಾಗಿರುವನು. ಅಸ್ತಮಿಸುವಾಗ ಪಿಂಗಲ (ನಸುಗೆಂಪಿನ) ವರ್ಣನಾಗುವನು. ಬಭ್ರುವೆಂದರೂ ಪಿಂಗಲನೆಂದೇ ಅರ್ಥ. ಈ ಆದಿತ್ಯನು ಸುಮಂಗಲನು. ಏಕೆಂದರೆ ಸೂರ್ಯನು ಉದಯಿಸದಿದ್ದರೆ ಪ್ರಪಂಚವೆಲ್ಲ ಕತ್ತಲೆಯಲ್ಲೇ ಮುಳುಗಿ ಅಮಂಗಳವಾಗಿ ಆದೀತು. ಆದ್ದರಿಂದ ಸುಮಂಗಲಸ್ವರೂಪನಾದ ಆದಿತ್ಯನು ತನ್ನ ಪ್ರಕಾಶದಿಂದ ಎಲ್ಲವನ್ನೂ ಬೆಳಗುತ್ತಾ ಎಲ್ಲಕ್ಕೂ ಸಾಕ್ಷಿಯಾಗಿರುವನು. ಪ್ರಾಣಿಗಳು ಮಾಡುತ್ತಿರುವ ಎಲ್ಲಾ ಕರ್ಮಗಳನ್ನೂ ನೋಡುತ್ತಿರುವನು. ಯಾರು ಯಾವ ಕರ್ಮವನ್ನೇ ಮಾಡಲಿ, ಅದು ಒಳ್ಳೆಯದಾಗಿರಲಿ, ಕೆಟ್ಟದಾಗಿರಲಿ, ಹಗಲಿನಲ್ಲಿ ಮಾಡಿದಾಗ

ಸೂರ್ಯನಿಗೆ ಗೊತ್ತಾಗಿಯೇ ತೀರುವದು. ರಾತ್ರಿಯಲ್ಲಿಯೂ ಸೂರ್ಯನು ಮರೆಯಾಗಿದ್ದರೂ ಅವನ ಶಾಖ(Heat)ವಿದ್ದೇ ಇರುವದರಿಂದ ಆಗಲೂ ಅವನು ಕರ್ಮಗಳಿಗೆ ಸಾಕ್ಷಿಯಾಗಿಯೇ ಇರುವನು. ಹೀಗೆ ಸರ್ವಕಾಲ ದಲ್ಲಿಯೂ ಸರ್ವದೇಶದಲ್ಲಿಯೂ ಇದ್ದುಕೊಂಡಿರುವ ಸೂರ್ಯನ ಜೊತೆಗೆ ನಮ್ಮ ಕರ್ಮಗಳನ್ನು ನೋಡಲು ಈ ಭೂಮಿಯಲ್ಲಿ ಅದೃಶ್ಯರಾದ ರುದ್ರರೆಂಬ ದೇವತೆಗಳೂ ಇದ್ದುಕೊಂಡಿರುವರು. ಇವರು ಸಾವಿರಾರು ಸಂಖ್ಯೆಯಲ್ಲಿದ್ದು ಪೂಜ್ಯನಾದ ಆದಿತ್ಯನೊಡನೆಯೇ ಒಂದಾಗಿರುವರು. ಹೀಗಿರುವಾಗ ಮಾನವನು ಇವರೆಲ್ಲರಿಗೂ ಕಾಣದಂತೆ ಪಾಪವನ್ನು ಮಾಡಿ ತಪ್ಪಿಸಿಕೊಳ್ಳುವೆ ನೆಂಬುದು ಅಸಾಧ್ಯವಾದ ಮಾತೇ ಸರಿ. ಅಂತೂ ಮನುಷ್ಯನ ಪಾಪಕರ್ಮ ಗಳಿಂದ ಈ ದೇವತೆಗಳಿಗೆ ಕೋಪವು ಉಂಟಾಗುವದು ಸಹಜವಾಗಿದೆ. ಆದ್ದ ರಿಂದ ಪ್ರತಿದಿನವೂ ನಾವು ಸ್ತೋತ್ರ, ನಮಸ್ಕಾರಪೂಜಾದಿಗಳಿಂದ ಆದಿತ್ಯನೇ ಮುಂತಾದ ಎಲ್ಲಾ ರುದ್ರದೇವತೆಗಳನ್ನೂ ಸಂತೋಷಗೊಳಿಸುತ್ತಿರಬೇಕು. ಮತ್ತು ಆಯಾ ದಿನದಂದು ಮಾಡಿದ ಪಾಪಗಳನ್ನು ಪೂಜಾದ್ಯನುಷ್ಠಾನ ರೂಪವಾದ ಪುಣ್ಯಕರ್ಮಗಳಿಂದ ಕಳೆದುಕೊಂಡು ರುದ್ರನ ಪ್ರಸಾದಕ್ಕೆ ಪಾತ್ರರಾಗಬೇಕು– ಎಂದು ಇಲ್ಲಿ ತಿಳಿಸಿದೆ.

ಈ ರೀತಿಯಾಗಿ ರುದ್ರನನ್ನು ಸಮಾಧಾನಮಾಡಿದ ಅನಂತರ ಈ ಮುಂದಿನ ಮಂತ್ರದಲ್ಲಿ ಇಷ್ಟಾರ್ಥಸಿದ್ಧಿಗಾಗಿ ಪ್ರಾರ್ಥನೆಮಾಡಿದೆ. ಹೇಗೆಂದರೆ:

**ಅಸೌ ಯೋಽವಸರ್ಪತಿ ನೀಲಗ್ರೀವೋ ವಿಲೋಹಿತಃ । ಉತ್ತೈನಂ ಗೋಪಾ ಅದೃಶನ್ನದೃಶನ್ ಉದಹಾರ್ಯಃ । ಉತ್ತೈನಂ ವಿಶ್ವಾ ಭೂತಾನಿ ಸ ದೃಷ್ಟೋ ಮೃಡಯಾತಿ ನಃ ॥ ೮ ॥**

"ಯಾವ ನೀಲಗ್ರೀವನೂ ವಿಶೇಷವಾಗಿ ಕೆಂಪಾಗಿರುವನೂ ಆದ ಈ ಸಂಚರಿಸುವ ಆದಿತ್ಯ(ರೂಪನಾದ ರುದ್ರನೆಂಬುವ)ನಿದಾನಲ್ಲ, ಇವನನ್ನು ದನ ಕಾಯುವವರೂ ನೀರುತರುವವರೂ ನೋಡಿರುತ್ತಾರೆ. ಮತ್ತು ಗೋವು, ಎಮ್ಮೆ– ಮುಂತಾಗಿ ಎಲ್ಲಾ ಪ್ರಾಣಿಗಳೂ ಕಂಡಿರುವವು. ಹೀಗೆ ಎಲ್ಲರಿಗೂ ಕಂಡುಬಂದಿರುವ ಆತನೇ ಧ್ಯಾನಮಾಡಿದವರನ್ನು ಸುಖಗೊಳಿಸುವನಾಗಿರು ವನು."

ಈ ಮಂತ್ರದಲ್ಲಿ ಭಗವಾನ್ ರುದ್ರನು ಎಲ್ಲರಿಗೂ ಚಿರಪರಿಚಿತನೆಂದು ತಿಳಿಸಿದೆ: ಹೇಗೆಂದರೆ ಸೂರ್ಯರೂಪದಿಂದ ಲೋಕವನ್ನೆಲ್ಲ ಬೆಳಗುತ್ತಿರುವ ಈತನನ್ನು 'ನಾವು ಕಾಣೆವು' ಎಂದು ಕುರುಡರನ್ನು ಬಿಟ್ಟರೆ ಉಳಿದವರು ಯಾರೂ ಹೇಳುವಂತಿಲ್ಲ. ಇವನು ಎಷ್ಟು ಸುಲಭನೆಂದರೆ ದನಗಳನ್ನುಕಾಯುವ ಗೋಪಾಲಕರೂ ನೀರನ್ನು ತರುವ ಹೆಂಗಸರೂ ಈತನನ್ನು ಬಲ್ಲರು–ಎಂದು ಶ್ರುತಿಯು ತಿಳಿಸುತ್ತಿದೆ. ಗೋಪಾಲಕರೆಂದರೆ ತೀರ ಅಜ್ಞರು ಎಂದರ್ಥ. ಏನೊಂದೂ ವಿದ್ಯಾಬುದ್ಧಿಗಳಿಲ್ಲದೆ ದನಕರುಗಳನ್ನು ಮೇಯಿಸುತ್ತಾ ಅಲ್ಲಲ್ಲಿ ತಿರುಗುತ್ತಿರುವವರು ಯಾವ ತಿಳಿವಳಿಕೆಯಾಗಲಿ ಶಾಸ್ತ್ರಪಾಂಡಿತ್ಯವಾಗಲಿ ಇಲ್ಲದವರೆಂಬುದು ಎಲ್ಲರಿಗೂ ತಿಳಿದ ವಿಷಯವೇ ಆಗಿದೆ. ಹಾಗೆಯೇ ಮನೆಗೆಲಸಮಾಡುವ, ನೀರು ತರುವ ಪ್ರಾಕೃತಸ್ತ್ರೀಯರೂ ಸಹ ಅಜ್ಞರೆಂಬುದು ಪ್ರಸಿದ್ಧವು. ಆದರೆ ಇಂಥವರೂಕೂಡ 'ನಾವು ಸೂರ್ಯನನ್ನು ನೋಡಿಲ್ಲ' ಎನ್ನಲಾರರು; ಎಂದರೆ ರುದ್ರನು ಇಷ್ಟು ಸುಲಭನಾಗಿ ಎಲ್ಲರಿಗೂ ದೊರಕುವನು–ಎಂದಭಿಪ್ರಾಯ. ಈ ಸೂರ್ಯರೂಪದಿಂದ ಭಗವಂತನಾದರೂ ಏಕೆ ಸಂಚರಿಸುತ್ತಾನೆಂದರೆ: ಲೋಕದ ಪ್ರಯೋಜನಕ್ಕಾಗಿಯೇ ಹೊರತು ಬೇರೆಯಲ್ಲ. ಜೀವರಿಗೆಲ್ಲ ಕಾಲಗಣನೆ, ಶಾಖ, ಮಳೆ, ಬೆಳಕು– ಮುಂತಾದ ಸೌಕರ್ಯಗಳನ್ನು ಒದಗಿಸಿಕೊಟ್ಟು ಎಲ್ಲರಿಗೂ ಸಮಾನನಾಗಿ ತೋರಿಕೊಂಡು ಅನುಗ್ರಹಿಸುತ್ತಿರುವವನು ಸೂರ್ಯನು. ಅವನಿಗೆ ಬಡವಬಲ್ಲಿದರೆಂಬ ಭೇದವಿಲ್ಲ. ಅರಮನೆಯನ್ನು ಬೆಳಗುವಂತೆಯೇ ಬಡವನ ಗುಡಿಸಲನ್ನೂ ತನ್ನ ಕಿರಣಗಳಿಂದ ಅಷ್ಟೇ ಚೆನ್ನಾಗಿ ಬೆಳಗುತ್ತಾನೆ. ಸೂರ್ಯನು ಉದಯಿಸಿದನೆಂದರೆ ಸಾಕು, ಎಲ್ಲರೂ ಸಂತೋಷಪಡುವರು. ಇಂಥ ಜಗದಾಧಾರನಾದ ಸೂರ್ಯನ ರೂಪದಿಂದ ತೋರಿಕೊಂಡು ಎಲ್ಲರಿಗೂ ದರ್ಶನ ಕೊಡುತ್ತಿರುವವನು ರುದ್ರನೇ– ಎಂದಭಿಪ್ರಾಯ.

ಪರಮೇಶ್ವರನು ತನ್ನ ವಿಭೂತಿಮಹಿಮಾಯುಕ್ತವಾದ ಒಂದಾನೊಂದು ಅಸಾಧಾರಣರೂಪದಿಂದಲೂ ಭಕ್ತರಿಗೆ ಕೈಲಾಸವೆಂಬ ಸ್ಥಾನದಲ್ಲಿ ದರ್ಶನವೀಯುತ್ತಿರುವನು. ಆ ರೂಪವು ಹೇಗಿರುವದೆಂದರೆ: ನೀಲಗ್ರೀವನೇ ಮುಂತಾದ ವಿಶೇಷಗಳಿಂದ ಕೂಡಿದ್ದಾಗಿದೆ. ಆತನು ಕಾಲಕೂಟವಿಷವನ್ನು ನುಂಗಿದ್ದರಿಂದ ಕಪ್ಪಾದ ಕಂಠವುಳ್ಳವನಾಗಿದ್ದಾನೆ. ಚಂದ್ರನನ್ನೂ ಗಂಗೆ

ಯನ್ನೂ ಜಟೆಯಲ್ಲಿ ಧರಿಸಿದ್ದಾನೆ. ನಾಗಾಭರಣಗಳಿಂದ ಭೂಷಿತನಾಗಿದ್ದಾನೆ. ಗಜಚರ್ಮವನ್ನು ಹೊದ್ದಿದ್ದಾನೆ. ತ್ರಿಶೂಲ, ಡಮರು, ಪಾಶಾಂಕುಶಾದ್ಯಾಯುಧಗಳನ್ನು ದರಿಸಿದ್ದಾನೆ. ವೃಷಭವಾಹನನೂ ಪಾರ್ವತೀಪತಿಯೂ ಪ್ರಮಥಾದಿಗಣಸೇವಿತನೂ ಆಗಿದ್ದು ದೇವತೆಗಳಿಂದಲೂ ಋಷಿಮುನಿಗಳಿಂದಲೂ ಸ್ತೋತ್ರಮಾಡಲ್ಪಡುತ್ತಾ ಸರ್ವಜ್ಞನೂ, ಸರ್ವೇಶ್ವರನೂ ಆಗಿ ಮಹಾದೇವನಾಗಿ ವಿರಾಜಿಸುತ್ತಿರುವನು. ಈತನೇ ಯೋಗಿಗಳಿಗೆ ಸಚ್ಚಿದಾನಂದಸ್ವರೂಪನಾದ ಆತ್ಮನಾಗಿ ತೋರುತ್ತಿರುವನು. ಇಂಥ ಸಗುಣರೂಪವನ್ನೂ ನಿರ್ಗುಣಸ್ವರೂಪವನ್ನೂ ತಾನೊಬ್ಬನೇ ಧರಿಸಿದ್ದಾನಾದರೂ ಇವನ ದರ್ಶನವಾಗಬೇಕಾದರೆ ಉಪಾಸಕನಿಗಾಗಲಿ ಯೋಗಿಗಳಿಗಾಗಲಿ ಸಾಧ್ಯವೇ ಹೊರತು ಸಾಮಾನ್ಯರಿಗೆ ಈ ಎರಡು ಸ್ವರೂಪಗಳೂ ದುರ್ಲಭವು. ಇದನ್ನು ಅರಿತ ಪರಮೇಶ್ವರನು ಜೀವರುಗಳ ಮೇಲಿನ ದಯೆಯಿಂದ ಯಾವ ಸಾಧನವೂ ಇಲ್ಲದ, ಪ್ರಾಕೃತರಿಗೂ ತಾನು ಗೋಚರನಾಗಬೇಕೆಂದು ಬಯಸಿ ಆದಿತ್ಯರೂಪದಿಂದ ತೋರಿಕೊಂಡು ಎಲ್ಲರನ್ನೂ ಉದ್ಧರಿಸುತ್ತಿರುವನು. ಎಂಥ ಆಶ್ಚರ್ಯವಿದು?- ಎಂದು ಪರಮೇಶ್ವರನ ದಯಾಮಯತ್ವವನ್ನು ಇಲ್ಲಿ ಕೊಂಡಾಡಿದೆ. ಹೀಗೆ ಕಾಣಲ್ಪಡುವ ಆ ಭಗವಂತನು ನಮ್ಮನ್ನು ಸುಖವಾಗಿ ಕಾಪಾಡಲಿ ! ನಮ್ಮೆಲ್ಲರಿಗೂ ಆನಂದವನ್ನು ಕೊಡಲಿ ! ಎಂದು ಇಲ್ಲಿ ಬೇಡಿಕೊಂಡಿದೆ.

ಈ ಮಂತ್ರವು ಅನಾವೃಷ್ಟಿಪರಿಹಾರಕವೆಂದು ಮಂತ್ರಶಾಸ್ತ್ರಗಳಲ್ಲಿ ಹೇಳಿದೆ. ಈ ಮಂತ್ರಕ್ಕೆ ಆದಿತ್ಯರೂಪಿಯಾದ ರುದ್ರನೇ ದೇವತೆಯು. ಯಾವನೇ ಆಗಲಿ ಪ್ರಾಯಶ್ಚಿತ್ತಪೂರ್ವಕವಾಗಿ ಶುದ್ಧಿಯನ್ನು ಮಾಡಿಕೊಂಡು ಹದಿನಾರುವರ್ಷಗಳಕಾಲ ನಿರಂತರವಾಗಿ ಜಪಿಸಿದರೆ ಮಂತ್ರಸಿದ್ಧಿಯಾಗುವದು. ಅನಾವೃಷ್ಟಿಯನ್ನೂ ಇದರಿಂದ ಪರಿಹರಿಸಬಹುದು. ಎಂದು ಶಾಸ್ತ್ರದಲ್ಲಿ ತಿಳಿಸಿದೆ. ಸಾಧಕನಾದವನು ಈ ಮಂತ್ರದಿಂದ ಸೂರ್ಯನನ್ನು ಪ್ರಾರ್ಥಿಸಿ ಆರೋಗ್ಯವೇ ಮುಂತಾದ ಇಷ್ಟಾರ್ಥಸಿದ್ಧಿಯನ್ನೂ ಪಡೆಯಬಹುದಾಗಿದೆ. ಸೂರ್ಯರೂಪದಿಂದ ಪ್ರತಿದಿನವೂ ನಮಗೆ ದರ್ಶನವೀಯುತ್ತಿರುವ ರುದ್ರನನ್ನು ವೇದವು ಬಹಳವಾಗಿ ಹೊಗಳುತ್ತಿದೆಯಾದರೂ ನಮಗೆ ಮಾತ್ರ ಇನ್ನೂ ಭಕ್ತಿಯು ಬಂದಿಲ್ಲ. ಇದಕ್ಕೆ ಕಾರಣ ನಮ್ಮ ಔದಾಸೀನ್ಯ. ಯಾವದು ಅಪರಿಮಿತವಾಗಿದೆಯೋ ಅದರ ವಿಷಯಕ್ಕೆ ಜನರಿಗೆ ಅನಾದರವು ಹೆಚ್ಚು; ಹಾಗಾಗ

ಬಾರದು. ಜಗಜ್ಜ್ಯೋತಿಯಾದ ಸೂರ್ಯನೆಂಬ ರುದ್ರನನ್ನು ನಾವು ನಿಷ್ಠೆಯಿಂದ ಆರಾಧಿಸಿ ಕೃತಾರ್ಥರಾಗಬೇಕು.

---

## ೮. ಅಹಂ ತೇಭ್ಯೋಽಕರಂ ನಮಃ

ಈಗ ಒಂಭತ್ತನೆಯ ಮಂತ್ರವನ್ನು ವಿಚಾರಮಾಡೋಣ :

**ನಮೋ ಅಸ್ತು ನೀಲಗ್ರೀವಾಯ ಸಹಸ್ರಾಕ್ಷಾಯ ಮೀಢುಷೇ ।**
**ಅಥೋ ಯೇ ಅಸ್ಯ ಸತ್ವಾನೋಽಹಂ ತೇಭ್ಯೋಽಕರಂ ನಮಃ ॥ ೯ ॥**

"ನೀಲಗ್ರೀವನೂ ಸಹಸ್ರಾಕ್ಷನೂ, ಭಕ್ತರ ಕಾಮಗಳನ್ನು ಮಳೆಗರೆಯುವವನೂ ಆದ(ರುದ್ರನಿಗೆ) ನಮಸ್ಕಾರವು. ಮತ್ತು ಇವನ ಗೃಹದಲ್ಲಿರುವ (ಸಮೀಪದಲ್ಲಿರುವ) ಯಾವ ಪ್ರಥಮಗಣಗಳಿರುವರೋ ಅವರುಗಳಿಗೆ ನಾನು ನಮಸ್ಕರಿಸುವೆನು." ॥ ೯ ॥

ಈ ಮಂತ್ರದಲ್ಲಿ ಭೂಕೈಲಾಸಮೂರ್ತಿಯಾದ ನೀಲಕಂಠಮೂರ್ತಿಯನ್ನು ಸ್ತೋತ್ರಮಾಡಿದೆ. ನೀಲಗ್ರೀವನೆಂದರೆ ವಿಷಪಾನದಿಂದ ಕಪ್ಪಾದ ಕಂಠವುಳ್ಳವನು. ಪರಮೇಶ್ವರನು ಸಮುದ್ರಮಥನಕಾಲದಲ್ಲಿ ಹುಟ್ಟಿದ 'ಹಾಲಾಹಲ'ವೆಂಬ ವಿಷವನ್ನು ಲೋಕಕಲ್ಯಾಣಕ್ಕಾಗಿ ಕುಡಿದು ತನ್ನ ಹಿರಿಮೆಯನ್ನೂ ಆದರ್ಶವನ್ನೂ ತೋರಿಸಿರುತ್ತಾನೆ. ವಿದ್ವಾಂಸನಾದವನು ಪ್ರಪಂಚದಲ್ಲಿ ಕಂಡು ಬರುವ ಗುಣದೋಷಗಳನ್ನು ಪರಮೇಶ್ವರನಂತೆ ಸ್ವೀಕರಿಸಬೇಕು. ಎಂದರೆ ಭಗವಂತನು ಚಂದ್ರನನ್ನು ತಲೆಯಮೇಲೆ ಹೊತ್ತು ಮೆರೆಸುವಂತೆ ಮತ್ತೊಬ್ಬರ ಗುಣಗಳನ್ನು ಎತ್ತಿ ಆಡಬೇಕು. ದೋಷಗಳನ್ನೊ, ಎಂದರೆ–ವಿಷವನ್ನು ಕಂಠದಲ್ಲೇ ತಡೆದಿಟ್ಟರುವಂತೆ–ಗೋಪ್ಯವಾಗಿಯೇ ಇಡಬೇಕು; ಹೊರಹಾಕಬಾರದು. ಈ ನೀತಿಯನ್ನು ನೀಲಕಂಠಮೂರ್ತಿಯು ತಿಳಿಸುತ್ತಿದ್ದಾನೆ. ಮತ್ತು ಈತನು ಸಹಸ್ರಾಕ್ಷನು, ಅಪರಿಮಿತವಾದ ಕಣ್ಣುಗಳುಳ್ಳವನು–ಎಂದರೆ ಅಪರಿಚ್ಛಿನ್ನವಾದ ದೃಷ್ಟಿಯುಳ್ಳವನು-ಎಂದಭಿಪ್ರಾಯ. ಇದರಿಂದ ತಿಳಿಯ ಬರುವದೇನೆಂದರೆ: ಭಗವಂತನು ಕೈಲಾಸವಾಸಿಯಾಗಿದ್ದರೂ ಅವನ ದೃಷ್ಟಿಯು ಮಾತ್ರ ಎಲ್ಲೆಲ್ಲೂ ಪಸರಿಸಿರುವದರಿಂದ ನಾವು ಭೂಲೋಕದಲ್ಲಿ ಮಾಡುವ ಪೂಜಾನಮಸ್ಕಾರಾದಿಗಳೂ ಅವನಿಗೆ ದೃಷ್ಟಿಗೋಚರವೇ ಆಗು

ತ್ತವೆ-ಎಂದಾಗುತ್ತದೆ. ಮತ್ತು ಭಗವಂತನು ಮೀಢುಷನು-ಎಂದರೆ ನಮಸ್ಕಾರಮಾಡುವ ಭಕ್ತರ ಕಾಮಗಳನ್ನು ಪರಿಪೂರ್ಣಗೊಳಿಸುವವನು. ಇಂಥವನಿಗೆ ನಮಸ್ಕಾರವು ಎಂದಭಿಪ್ರಾಯ.

ಇನ್ನು ಭಗವಂತನ ಸಮೀಪದಲ್ಲಿಯೇ ಪ್ರಥಮರೆಂಬ ಗಣದೇವತೆಗಳಿದ್ದಾರಷ್ಟೆ! ಅವರಿಗೂ ವಂದನೆಗಳು. ಸತ್ವಾನರು ಎಂದರೆ ಸಮೀಪಸ್ಥರು-ಎಂದರ್ಥ. ಶ್ರುತಿಯಲ್ಲಿ 'ದಿವ್ಯಾ ಗಣಾ ಬಹುರೂಪಾಃ ಪುರಾಣಾಃ' ಎಂದು ಇವರುಗಳನ್ನು ಹೊಗಳಿದೆ. ಮಹಾಭಾರತದಲ್ಲಿಯೂ "ಬೇಕಾದ ಕೆಲಸವನ್ನು ಮಾಡುವ ಸಾಮರ್ಥ್ಯವುಳ್ಳ, ಸಿದ್ಧರಾದ, ಮೂರು ಲೋಕಗಳ ಐಶ್ವರ್ಯಕ್ಕೂ ಒಡೆಯರಾದ, ಸದಾ ಸಂತೋಷದಿಂದ ಇದ್ದುಕೊಂಡಿರುವ, ಹಸನ್ಮುಖರಾದ, ವಾಕ್ಕುಗಳಿಗೆ ಅಧಿಪತಿಗಳಾಗಿಯೂ ಮಾತ್ಸರ್ಯವಿಲ್ಲದವರಾಗಿಯೂ ಇರುವ ಈ ಗಣದೇವತೆಗಳು ಅಣಿಮಾದ್ಯೈಶ್ವರ್ಯಗಳನ್ನು ಪಡೆದಿದ್ದರೂ ತಮ್ಮ ಸಿದ್ಧಿಗಳಿಂದ ಸ್ವಲ್ಪವೂ ಆಶ್ಚರ್ಯಗೊಳ್ಳದೆ ಇರುವರು. ಪೂಜ್ಯನಾದ ಪರಮೇಶ್ವರನು ಇಂಥವರ ಅದ್ಭುತಕರ್ಮಗಳಿಂದ ಅಚ್ಚರಿಯನ್ನು ಹೊಂದುವನು. ಮತ್ತು ಇವರುಗಳು ವಿದ್ಯೆಯಲ್ಲಿಯೂ ಬ್ರಹ್ಮಚರ್ಯೆ, ತಪಸ್ಸು, ದಮೆ-ಇವುಗಳಲ್ಲಿಯೂ ಪೂರ್ಣಪರಿಶ್ರಮವುಳ್ಳವರಾಗಿದ್ದು ಶಿವಸಾಯುಜ್ಯವನ್ನು ಹೊಂದಿರುವ ಪುಣ್ಯಶೀಲರು" ಎಂದು ವರ್ಣಿಸಿದೆ. ಇಂಥ ಗಣದೇವತೆಗಳಿಗೂ ನಾನು ನಮಸ್ಕರಿಸುವೆನು-ಎಂದಭಿಪ್ರಾಯ. ಈ ಮಂತ್ರವು ಸತ್ಪುತ್ರರನ್ನು ಕೊಡತಕ್ಕದ್ದೆಂದು ಬಲ್ಲವರು ತಿಳಿಸಿದ್ದಾರೆ.

ಪ್ರಮುಂಚ ಧನ್ವನಸ್ತ್ವಮುಭಯೋರಾರ್ತ್ನಿಯೋರ್ಜ್ಯಾಮ್ ।
ಯಾಶ್ಚ ತೇ ಹಸ್ತ ಇಷವಃ ಪರಾ ತಾ ಭಗವೋ ವಪ ॥ ೧೦ ॥

"ಎಲೈ ಭಗವಂತನೆ, ನಿನ್ನ ಬಿಲ್ಲಿನ ತುದಿಗಳನ್ನು ಅಲ್ಲಿಗೆ ಬಿಗಿದಿರುವ ಮೌರ್ವಿ (ಹಗ್ಗ) ಗಳಿಂದ ಬಿಡಿಸಿ ಶಿಥಿಲಗೊಳಿಸುವವನಾಗು. ಮತ್ತು ನಿನ್ನ ಕೈಯಲ್ಲಿರುವ ಬಾಣಗಳನ್ನು ಪರಾಙ್ಮುಖವಾಗಿ ಮಾಡುವವನಾಗು." ॥೧೦॥

ಇಲ್ಲಿಂದ ಮುಂದಕ್ಕೆ ಆರು ಮಂತ್ರಗಳಿಂದ ಆಯುಧಗಳನ್ನು ಉಪಸಂಹಾರಮಾಡಿಕೊಳ್ಳುವಂತೆ ಭಗವಂತನನ್ನು ಪ್ರಾರ್ಥಿಸಿದೆ. "ಶಿವಾಂ ಗಿರಿತ್ರ...." ಎಂಬ ಮಂತ್ರದಲ್ಲಿಯೇ ಹಿಂದೆಯೇ ಈ ಪ್ರಾರ್ಥನೆಯನ್ನು

ಮಾಡಿದ್ದರೂ ಹೆಚ್ಚಿನ ಭಯದಿಂದಕೂಡಿರುವ ಸಾಧಕನು ಮತ್ತೊಮ್ಮೆ ಕೇಳಿ ಕೊಂಡಿದ್ದಾನೆಂದು ಭಾವಿಸಬೇಕು. ಜ್ಞಾನಶಕ್ತಿಬಲೈಶ್ವರ್ಯಾದಿ ಗುಣಸಂಪನ್ನನಾದ ಭಗವಂತನು ತನ್ನ ಧನುಸ್ಸಿನ ಹಗ್ಗವನ್ನು ಸಡಿಲಗೊಳಿಸಲು ತಾನೊಬ್ಬನೇ ಸಮರ್ಥನೇ ಹೊರತು ಬೇರೆ ಯಾರಿಂದಲೂ ಅದು ಸಾಧ್ಯವಾಗಲಾರದು. ಧನುಸ್ಸನ್ನು ಸಡಿಲಗೊಳಿಸಿದರೆ ಮಾತ್ರ ರುದ್ರನು ಶಾಂತನಾದನೆಂದು ಗೊತ್ತಾಗುತ್ತದೆ. ಅದಕ್ಕಾಗಿ ಇಲ್ಲಿ ಆತನನ್ನೇ ಹೀಗೆ ಪ್ರಾರ್ಥಿಸಿದೆ. ಮತ್ತು ಧನುಸ್ಸನ್ನು ಶಿಥಿಲಗೊಳಿಸಿದ ಅನಂತರವೂ ಬಾಣಗಳು ಭಯವನ್ನುಂಟುಮಾಡಬಹುದಾದ್ದರಿಂದ ಅವುಗಳನ್ನು ಹಿಮ್ಮುಖವಾಗಿ (ಹಿಂದುಮುಂದಾಗಿ) ಮಾಡು ಎಂದೂ ಇಲ್ಲಿ ಕೇಳಿಕೊಳ್ಳಲಾಗಿದೆ.

ಅವತತ್ಯ ಧನುಸ್ತ್ವಗ್ಂ ಸಹಸ್ರಾಕ್ಷ ಶತೇಷುಧೇ । ನಿಶೀರ್ಯ ಶಲ್ಯಾನಾಂ ಮುಖಾ ಶಿವೋ ನಃ ಸುಮನಾ ಭವ ॥ ೧೧ ॥

"ಎಲೈ ಸಹಸ್ರಾಕ್ಷನೆ, ನೂರಾರು ಬತ್ತಳಿಕೆಗಳುಳ್ಳವನೆ, ನೀನು ಧನುಸ್ಸನ್ನು ಕೆಳಗಿಳಿಸಿ ಬಾಣಗಳ ಮುಖಗಳನ್ನು ಹಿಂತಿರುಗಿಸಿ ಬತ್ತಳಿಕೆಗೆ ಸೇರಿಸುವನಾಗಿ ನಮ್ಮಗಳ ವಿಷಯಕ್ಕೆ ಸುಮನಸ್ಕನಾಗು."

ಈ ಮಂತ್ರದಲ್ಲಿಯೂ ಬಾಣಗಳನ್ನು ಹಿಂತಿರುಗಿಸಿ ಮುಚ್ಚಿಡಬೇಕೆಂದು ಪ್ರಾರ್ಥಿಸಲಾಗಿದೆ. ಸಹಸ್ರಾಕ್ಷ, ಶತೇಷುಧೇ–ಎಂಬ ವಿಶೇಷಣಗಳು ಭಗವಂತನು ಸಾಮಾನ್ಯರಾದ ಧನುರ್ಧಾರಿಗಳಂತೆ ಅಲ್ಲ-ಎಂದು ತಿಳಿಸುತ್ತಿವೆ. ಹೇಗೆಂದರೆ ಯಾವನಾದರೊಬ್ಬ ಬಿಲ್ಲುಗಾರನು ತನ್ನ ದೃಷ್ಟಿಗೆ ಯಾವ ಬೇಟೆಯೂ ಬೀಳದೆಹೋದಾಗ ಅಥವಾ ತನ್ನ ಬತ್ತಳಿಕೆಯಲ್ಲಿದ್ದ ಬಾಣಗಳು ಮುಗಿದುಹೋದಾಗ ತಾನಾಗಿಯೇ ಹಿಂತಿರುಗುತ್ತಾನೆ. ಆದರೆ ಭಗವಂತನ ವಿಷಯದಲ್ಲಿ ನಾವು ಹಾಗೆ ಭಾವಿಸುವಂತಿಲ್ಲ. ಆತನು ಅಕ್ಷಯವಾದ ಬತ್ತಳಿಕೆಗಳುಳ್ಳವನು. ಸರ್ವತ್ರದೃಷ್ಟಿಯುಳ್ಳವನು. ತಾನಾಗಿಯೇ ಎಂದಿಗೂ ಹಿಂತಿರುಗುವ ಸಂಭವವಿಲ್ಲ. ಅದ್ದರಿಂದ ಭಕ್ತನು ಬೇಡಿಕೊಂಡಲ್ಲಿ ಮಾತ್ರ ಆತನು ಪ್ರಸನ್ನನಾಗುವನು. ಹೀಗೆ ಪ್ರಾರ್ಥನೆಯಿಂದ ಶಾಂತನಾದ ಆ ಮಹಾದೇವನನ್ನು ಮತ್ತೊಮ್ಮೆ ಭಕ್ತ್ಯತಿಶಯದಿಂದ 'ಎಲೈ ಶಿವನೆ, ನಮ್ಮಗಳ ವಿಷಯಕ್ಕೆ ಸುಮನಸ್ಕನಾಗು–ಎಂದು ಬೇಡಿಕೊಳ್ಳಲಾಗಿದೆ. ಮತ್ತು ಮೇಲುಮೇಲಕ್ಕೆ

ಸೌಮ್ಯಾಕಾರನಾಗಿದ್ದರೂ ಒಳಗೆ ಕುಪಿತನಾಗಿರಬಹುದಾದ್ದರಿಂದ 'ಸುಮನಾ ಭವ' ಎಂದು ಕೇಳಿಕೊಳ್ಳಲಾಗಿದೆ. ಶರಣಾಗತನಾದ ಈ ದೀನನನ್ನು ಅನುಗ್ರಹಿಸಬೇಕು. ದಯಾಪೂರ್ಣವಾದ ಹೃದಯದಿಂದ ನನ್ನನ್ನು ನೋಡು–ಎಂದಭಿಪ್ರಾಯ.

**ವಿಜ್ಯಂ ಧನುಃ ಕಪರ್ದಿನೋ ವಿಶಲ್ಯೋ ಬಾಣವಾಗ್ಂ ಉತ।**
**ಅನೇಶನ್ನಸ್ಯೇಷವ ಆಭುರಸ್ಯ ನಿಷಂಗಥಿಃ ॥ ೧೨ ॥**

"ಕಪರ್ದಿಯಾದ (ಪರಮೇಶ್ವರನ) ಧನುಸ್ಸು ಜ್ಯಾ(ಹಗ್ಗ)ವಿಲ್ಲದ್ದಾಗಲಿ! ಬಾಣಗಳುಳ್ಳ (ಚೀಲವೂ) ವಿಶಲ್ಯ(ಬಾಣಗಳಿಲ್ಲದ್ದು)ವಾಗಲಿ! ಇವನ ಬಾಣಗಳು ಹೊಡೆಯುವದಕ್ಕೆ ತಕ್ಕದ್ದಲ್ಲದಂತಾಗಲಿ! ಮತ್ತು ಖಡ್ಗದ ಚೀಲವೂ ಅದನ್ನು ಧಾರಣೆಮಾಡುವಷ್ಟು ಮಾತ್ರ ಸಮರ್ಥವಾಗಲಿ!" ॥ ೧೨ ॥

ಈ ಮಂತ್ರದಲ್ಲಿ, ಬಾಣಗಳು ಪರಾಙ್ಮುಖವಾದರೂ ಸಾಲದು. ಅವು ಮರೆಯಾಗಿಯೇ ಬಿಡಲಿ! ಎಂದು ಪ್ರಾರ್ಥಿಸಿದೆ. ಏಕೆಂದರೆ ಬಾಣಗಳು, ಧನಸ್ಸು, ಖಡ್ಗ–ಮುಂತಾದ ಆಯುಧಗಳನ್ನು ನೋಡಿದರೇ ಹೆದರಿಕೆಯಾಗುತ್ತದೆ. ಇನ್ನು ಉಪಯೋಗಿಸುವಂಥವನ ಹತ್ತಿರದಲ್ಲಿಯೇ ಅವುಗಳು ಇದ್ದರಂತೂ ಮತ್ತಷ್ಟು ಭಯವು ಹೆಚ್ಚಾಗುತ್ತದೆ. ಆದ್ದರಿಂದ ಅವು ನಮಗೆ ಕಾಣದಂತೆ ಮರೆಯಾಗಿಯೇ ಇರಲಿ–ಎಂದು ಕೇಳಿಕೊಳ್ಳಲಾಗಿದೆ. ಇನ್ನು ನಿಷಂಗಥಿ ಎಂಬ ಶಬ್ದದಿಂದ ಇಲ್ಲಿ ಖಡ್ಗವನ್ನಿಡುವ ಚೀಲವನ್ನು ಪ್ರಸ್ತಾಪಿಸಲಾಗಿದೆ. ಅದನ್ನು ಆಭುಃ ಈಷತ್ಪ್ರಭುಃ ಅಸ್ತು–ಎಂದು ಕೇಳಲಾಗಿದೆ. ಎಂದರೆ ಆ ಚೀಲವು ಪರಮೇಶ್ವರನಿಗೆ ತನ್ನ ಆಯುಧವನ್ನಿಡಲು ಉಪಯೋಗವಾಗುವಷ್ಟು ಮಾತ್ರ ಸಾಕು. ಆದರಿಂದ ಖಡ್ಗವನ್ನು ಹೊರಗೆಳೆಯುವ ಪ್ರಸಂಗವು ಬಾರದಂತೆ ಕೇವಲ ಅಲಂಕಾರವಾಗಿರಲಿ! ಎಂದಭಿಪ್ರಾಯ.

ಆಯುಧಗಳನ್ನಿಟ್ಟುಕೊಂಡಮಾತ್ರದಿಂದ ಯಾವನೂ ಪರಮೇಶ್ವರನಿಗೆ ಸಮಾನನಾಗಲಾರನು. ಏಕೆಂದರೆ ಯಾವ ಯಾವ ಆಯುಧಗಳನ್ನು ಹೇಗೆ ಹೇಗೆ ಎಷ್ಟರಮಟ್ಟಿಗೆ ಎಲ್ಲೆಲ್ಲಿ ಪ್ರಯೋಗಿಸಬೇಕೆಂಬುದು ಸರ್ವಜ್ಞನೂ ಸರ್ವಶಕ್ತನೂ ಆದ ಮಹಾದೇವನೊಬ್ಬನಿಗೇ ಗೊತ್ತಿರುತ್ತದೆ. ಅಲ್ಲದೆ ಆಯುಧಗಳನ್ನು ಬಳಸುವ ಶಕ್ತಿಯೂ ಅವನೊಬ್ಬನಿಗೇ ಮೀಸಲಾಗಿದೆ. ಇಂಥ ಶಸ್ತ್ರ

ಧಾರಿಯು ಆತನು. ಅಂತೂ ಈ ಮಂತ್ರಗಳಲ್ಲಿ ಆಯುಧಗಳ ಪ್ರಸ್ತಾಪವಿರುವದರಿಂದ ಭಗವಂತನ ಆಯುಧಗಳನ್ನು ಅವನ ಶಕ್ತಿಯ ಕುರುಹಾಗಿ ಭಾವಿಸಿ ಪೂಜಿಸಬೇಕೆಂದೂ ಏರ್ಪಡುತ್ತದೆ. ಮಹಾನವಮಿ ದಿನ ಮಾಡುವ ಆಯುಧಪೂಜೆಯ ರಹಸ್ಯವು ಇದೇ ಇರಬಹುದೆ ?

—— ——

## ೬. ಅಸ್ಮಾನ್ ವೃಣಕ್ತು ವಿಶ್ವತಃ

ಮೊದಲನೆಯ ಅನುವಾಕದಲ್ಲಿ ಉಳಿದಿರುವ ಮೂರು ಮಂತ್ರಗಳನ್ನು ಈಗ ವಿಚಾರಮಾಡೋಣ :

**ಯಾ ತೇ ಹೇತಿರ್ಮೀಢುಷ್ಟಮ ಹಸ್ತೇ ಬಭೂವ ತೇ ಧನುಃ ।**
**ತಯಾಽಸ್ಮಾನ್ ವಿಶ್ವತಸ್ತ್ವಮಯಕ್ಷ್ಮಯಾ ಪರಿಬ್ಭುಜ ॥ ೧೩ ॥**

"ಎಲೈ ಮೀಢುಷ್ಟಮನೆ, ಯಾವ ನಿನ್ನ (ಕತ್ತಿಯೇ ಮುಂತಾದ) ಆಯುಧಗಳು ಇವೆಯೋ ಮತ್ತು ಕೈಯಲ್ಲಿರುವ ಧನಸ್ಸುಂಟೋ ಅಯಕ್ಷ್ಮವಾದ ಅದರಿಂದ ನೀನು ನಮ್ಮನ್ನು ಎಲ್ಲಾ ಪಾಪಗಳಿಂದಲೂ ಕಾಪಾಡುವವನಾಗು."

ಈ ಮಂತ್ರದಲ್ಲಿ ಭಗವಂತನನ್ನು ಮತ್ತೊಮ್ಮೆ ಮೀಢುಷ್ಟಮನೆಂದು ಸಂಬೋಧಿಸಿದೆ. ಹಿಂದಿನ ಮೂರು ಮಂತ್ರಗಳಲ್ಲಿ ಆಯುಧಗಳನ್ನು ಹಿಂತೆಗೆದುಕೊಳ್ಳುವಂತೆ ಪ್ರಾರ್ಥಿಸಲಾಗಿತ್ತು. ಆದರೆ ರುದ್ರನು ಆಯುಧಗಳನ್ನು ಹಿಂತೆಗೆದುಕೊಂಡು ಸುಮ್ಮನೆ ಕುಳಿತುಬಿಟ್ಟರೆ ಆಪತ್ತಿನಿಂದ ನಮ್ಮನ್ನು ಕಾಪಾಡುವವರಾರು ? ಅದಕ್ಕಾಗಿ ಇಲ್ಲಿ ತನ್ನನ್ನು ಅದೇ ಆಯುಧಗಳ ನೆರವಿನಿಂದ ಕಾಪಾಡಬೇಕೆಂದೂ ಭಕ್ತನು ಕೇಳಿಕೊಳ್ಳುತ್ತಿದ್ದಾನೆ. ಭಕ್ತರ ಎಲ್ಲಾ ಇಷ್ಟಾರ್ಥಗಳನ್ನೂ ಅನುಗ್ರಹಿಸಿ ಅನಿಷ್ಟಗಳನ್ನು ಪರಿಹರಿಸಿ ರಕ್ಷಿಸುವವನೇ ಮೀಢುಷ್ಟಮನು. ಆ ಭಗವಂತನನ್ನು ಕುರಿತು 'ಎಲೈ ಮೀಢುಷ್ಟಮನೆ, ನಿನ್ನಲ್ಲಿರುವ ಖಡ್ಗವೇ ಮುಂತಾದ ಆಯುಧಗಳು ಮತ್ತು ಕೈಯಲ್ಲೇ ಧರಿಸಿರುವ ಬಿಲ್ಲು–ಇವುಗಳ ವಿಷಯಕ್ಕೆ ಶಾಂತಿಯನ್ನು ನಾನು ಬಯಸಿದ್ದು ನನ್ನನ್ನು ಕ್ಷಮಿಸುವದಕ್ಕಾಗಿಯೂ ಮತ್ತು ಶತ್ರುಗಳಿಂದ ನನ್ನನ್ನು ಕಾಪಾಡುವದಕ್ಕಾ

ಗಿಯೂ ಆಗಿದೆ; ಎಂದರೆ ನೀನು ಆಯುಧಗಳನ್ನು ನನ್ನ ಶತ್ರುಗಳ ವಿಷಯ ಕ್ಕೂ ಶಾಂತಗೊಳಿಸಬಾರದು. ಅವುಗಳನ್ನು ಸನ್ನದ್ಧವಾಗಿಯೇ ಇರಿಸಿ ಎಲ್ಲಾ ದಿಕ್ಕುಗಳಿಂದಲೂ ನನಗೆ ಒದಗಬಹುದಾದ ಆಪತ್ತುಗಳಿಂದ ನನ್ನನ್ನು ಕಾಪಾಡು; ಮತ್ತು ಶತ್ರುಗಳೆಂಬುವರು ನನ್ನ ಮನಸ್ಸೆಂಬ ಕಾಡಿನಲ್ಲಿಯೇ ಹೊಕ್ಕುಬಿಟ್ಟಿರುತ್ತಾರೆ. ಅವರಿಂದ ನನ್ನನ್ನು ಬಿಡಿಸಿ ಪರಿಪಾಲನೆಮಾಡು' ಎಂದು ಅಭಿಪ್ರಾಯ. ಶಿವಾನಂದಲಹರೀ[1]-ಎಂಬ ಸ್ತೋತ್ರದಲ್ಲಿ ಒಬ್ಬ ಭಕ್ತನು ಮಾಡಿರುವ ಪ್ರಾರ್ಥನೆಯೊಂದನ್ನು ಇಲ್ಲಿ ಅನುಸಂಧಾನಮಾಡಿಕೊಳ್ಳ ಬಹುದು. ಅಲ್ಲಿ 'ಎಲೈ ಗಿರಿಶನೆ, ನೀನು ನನ್ನನ್ನು ಬಿಟ್ಟಗಲಬೇಡ. ನನ್ನಲ್ಲಿ ಯೇ ವಾಸಮಾಡಿಕೊಂಡಿರು. ನೀನು ಆದಿಕಿರಾತನೆಂದು ಪ್ರಸಿದ್ಧನಲ್ಲವೆ ? ನಿನಗೆ ಬೇಕಾದಷ್ಟು ಬೇಟೆಯು ಈ ನನ್ನ ಮನಸ್ಸೆಂಬ ಕಗ್ಗಾಡಿನಲ್ಲಿಯೇ ದೊರೆಯಲಿದೆ. ಮದ, ಮೋಹ, ಮಾತ್ಸರ್ಯಗಳೆಂಬ ಭಾರಿಭಾರಿಯ ಕ್ರೂರಮೃಗಗಳು ಇಲ್ಲಿ ಸೇರಿಕೊಂಡಿವೆ. ಇದರಿಂದ ನಾನು ತುಂಬ ಭಯ ಗೊಂಡಿರುವೆನು. ಅವುಗಳೆಲ್ಲವನ್ನೂ ನೀನು ಬೇಟೆಮಾಡಿಕೊಂಡು ಆನಂದ ವನ್ನು ಹೊಂದುವವನಾಗು'–ಎಂದು ವರ್ಣಿಸಿದೆ. ಅದರಂತೆ ಭಕ್ತನು ಇಲ್ಲಿ ಭಗವಂತನನ್ನು ಆಯುಧಗಳ ನೆರವಿನಿಂದ ಪರಿಪಾಲನೆ ಮಾಡು–ಎಂದು ಪ್ರಾರ್ಥಿಸಿರುತ್ತಾನೆ.

**ನಮಸ್ತೇ ಅಸ್ತ್ವಾಯುಧಾಯಾನಾತತಾಯ ಧೃಷ್ಣವೇ ।**
**ಉಭಾಭ್ಯಾಮುತ ತೇ ನಮೋ ಬಾಹುಭ್ಯಾಂ ತವ ಧನ್ವನೇ ॥ ೧೪ ॥**

"(ಎಲೈ ಭಗವಂತನೆ), ನಿನ್ನ ಆಯುಧಗಳಿಗೆ ನಮಸ್ಕಾರ! ಅವು ಹೊಡೆ ಯಲು ಎತ್ತಲ್ಪಡದೆ ಇರುವವೂ, ಆದರೆ, ಹೊಡೆಯುವ ಸಾಮರ್ಥ್ಯವುಳ್ಳ ವೂ ಆಗಿವೆಯಷ್ಟೆ! ಮತ್ತು ನಿನ್ನ ಎರಡು ಬಾಹುಗಳಿಗೂ ನಿನ್ನ ಧನುಸ್ಸಿಗೂ ನಮಸ್ಕಾರ!"

ಹೀಗೆ ಪ್ರಾರ್ಥನೆಮಾಡಿದಮೇಲೂ ಮತ್ತೆ ನಮಸ್ಕಾರಮಾಡಲು ಉಪಕ್ರಮಿಸಿದ ಭಕ್ತನ ಉದ್ಗಾರವಿದು: 'ಎಲೈ ಭಗವಂತನೆ, ನಿನ್ನ ಆಯುಧ

1. ಈ ಗ್ರಂಥವು ಕನ್ನಡದ ಅನುವಾದ ವಿವರಣೆಸಮೇತವಾಗಿ ಕಾರ್ಯಾಲಯ ದಲ್ಲಿ ಮಾರಾಟಕ್ಕೆ ದೊರೆಯುತ್ತದೆ.

ಗಳಿಗೆ ನಮಸ್ಕಾರ! ತೋಳುಗಳಿಗೂ ನಮಸ್ಕಾರ' -ಎಂದು ಹೆಚ್ಚಿನ ಭಯದಿಂದ ಕೂಡಿದವನಾಗಿ ಹೇಳುತ್ತಿದಾನೆ. 'ಬಾಹುಭ್ಯಾಮ್' ಎಂಬ ದ್ವಿವಚನವೇ ಎರಡುತೋಳುಗಳೆಂದು ತಿಳಿಸುತ್ತದೆಯಾದರೂ 'ಉಭಾಭ್ಯಾಮ್' ಎಂದು ಪುತ್ತೆ ವಿಶೇಷಣವಾಗಿ ಹೇಳಿರುವದು ಹೆದರಿಕೆಯ ನಿಮಿತ್ತವೆಂದೇ ಅರ್ಥಮಾಡಬೇಕು. ಏಕೆಂದರೆ ಬಾಣವನ್ನು ಹೊಡೆಯಲು ಎತ್ತಿರುವ ತೋಳುಗಳನ್ನು ಕಂಡಾಗ ಎಂಥವನಿಗಾದರೂ ಭಯವುಂಟಾಗಿ ಮಾತುಗಳು ವ್ಯತ್ಯಾಸವಾಗಿಬಿಡುವವು. ಎಷ್ಟೇ ಸಿದ್ಧಮಾಡಿಕೊಂಡಾಗಲೂ ದೊಡ್ಡವರ ಸನ್ನಿಧಿಯಲ್ಲಿ ಮಾತನಾಡುವಾಗ ತಬ್ಬಿಬ್ಬಾಗುವದು. ಹಾಗೆ ಇಲ್ಲಿಯೂ ತಿಳಿಯಬೇಕು. ಇದರಿಂದ ಭಗವಂತನು ಎದುರಿಗೇ ಇದ್ದಾನೆಂತಲೂ ತಾನು ಅವನನ್ನು ನೋಡುತ್ತಾ ಸ್ತೋತ್ರಮಾಡುತ್ತಿರುವೆನೆಂತಲೂ ಭಕ್ತನು ಭಾವಿಸಿದ್ದಾನೆ -ಎಂದು ತಿಳಿಯಬರುತ್ತದೆ.

**ಪರಿ ತೇ ಧನ್ವನೋ ಹೇತಿರಸ್ಮಾನ್ ವೃಣಕ್ತು ವಿಶ್ವತಃ। ಅಥೋ ಯ ಇಷುಧಿಸ್ತವಾರೇ ಅಸ್ಮನ್ನಿಧೇಹಿ ತಮ್ ॥ ೧೩ ॥**

"(ಎಲೈ ಭಗವಂತನೆ), ನಿನ್ನ ಧನುಸ್ಸಿನ ಸಂಬಂಧವಾದ (ಬಾಣರೂಪವಾದ) ಆಯುಧವು ನಮ್ಮನ್ನು ಎಲ್ಲಾ (ತೊಂದರೆಗಳಿಂದಲೂ) ರಕ್ಷಿಸಿ ಕಾಪಾಡಲಿ! ಮತ್ತು ಇನ್ನು ಯಾವ ನಿನ್ನ ಬಾಣದ ಚೀಲವುಂಟೋ ಅದನ್ನು ನಮ್ಮ ಶತ್ರುಗಳಲ್ಲಿ ಇಡುವವನಾಗು."

ಈ ಮಂತ್ರದಲ್ಲಿಯೂ ಆಯುಧಗಳ ಪ್ರಾರ್ಥನೆಯೇ ಇದೆ. 'ನಿನ್ನ ಧನುಸ್ಸಿನಲ್ಲಿ ಏರಿಸಲ್ಪಟ್ಟ ಯಾವ ಬಾಣರೂಪವಾದ ಆಯುಧವುಂಟೋ ಅದು ನಮ್ಮನ್ನು ಪಾಪಗಳಿಂದ ರಕ್ಷಿಸಲಿ!' ಎಂದು ಭಕ್ತನು ಕೇಳಿಕೊಂಡಿದ್ದಾನೆ. ಇಲ್ಲಿ ಪಾಪಗಳಿಂದ ರಕ್ಷಿಸುವದು-ಎಂದರೆ ನಾವು ಪಾಪವನ್ನು ಮಾಡದಂತೆ ಎಚ್ಚರಿಸುವದು. ಆಯುಧಗಳನ್ನು ಕಂಡು ಹೆದರಿದವನು ಪಾಪಮಾಡಲಾರನು -ಎಂದರ್ಥ. ಅವೇ ಆಯುಧಗಳು ಪಾಪವನ್ನು ಸುಟ್ಟು ನಾಶಮಾಡಿಯೂ ಬಿಡುವವು. ಏಕೆಂದರೆ ಪಾಪಗಳನ್ನು ಉಳಿಸಿಕೊಂಡಲ್ಲಿ ಅವುಗಳಿಂದ ಎಂದಾದರೂ ತೊಂದರೆಯುಂಟೇ ಉಂಟು. ಅದಕ್ಕಾಗಿ ಆಯುಧಚೀಲವನ್ನೇ ಪಾಪರಾಶಿಗಳ ಮೇಲೆ ಇಟ್ಟುಬಿಡು-ಎಂದು ಕೇಳಲಾಗಿದೆ. ಹೀಗೆ ಆಯುಧಗಳ ಸ್ಪರ್ಶ ಮತ್ತು ಸಂಯೋಗಗಳಿಂದ ಪಾಪಗಳೆಲ್ಲವೂ ಹೇಳಹೆಸರಿಲ್ಲವಾಗುವವು.

ದ್ದರಿಂದ ಇಲ್ಲಿ ಪಾಪಗಳನ್ನೇ ಶತ್ರುಗಳೆಂದು ಕರೆದಿದೆಯೆಂದು ತಿಳಿಯಬೇಕು. ಈ ಮಂತ್ರವನ್ನು ಶತ್ರುನಾಶಕಕ್ಕಾಗಿಯೂ ಉಪಯೋಗಿಸುತ್ತಾರೆಂದು ಮಂತ್ರ ಶಾಸ್ತ್ರದಲ್ಲಿ ಹೇಳಿರುತ್ತದೆ. ಇಲ್ಲಿಗೆ ಒಂದನೆಯ ಅನುವಾಕವು ಮುಗಿಯಿತು.

---

## ೧೦. ನಮೋ ಹಿರಣ್ಯಬಾಹವೇ

ಈಗ ಎರಡನೆಯ ಅನುವಾಕವನ್ನು ವಿಚಾರಮಾಡಬೇಕಾಗಿದೆ. ಇಲ್ಲಿಂದ ಪ್ರಾರಂಭಿಸಿ ಇನ್ನು ಎಂಟು ಅನುವಾಕಗಳವರೆಗೆ ಭಗವಂತನ ಸ್ತುತಿಯಿದೆ. ಈ ಸ್ತುತಿಯಲ್ಲಿ ರುದ್ರನ ಸರ್ವೇಶ್ವರತ್ವ, ಸರ್ವಾಂತರ್ಯಾಮಿತ್ವ, ಸರ್ವಾತ್ಮತ್ವ–ಮುಂತಾದ ಗುಣಗಳನ್ನು ವರ್ಣಿಸಲಾಗಿದೆ. ಎರಡು, ಮೂರು, ನಾಲ್ಕನೆಯ ಅನುವಾಕಗಳ ಪೂರ ಎಂದರೆ 'ಶ್ವಪತಿಭ್ಯಶ್ಚ ವೋ ನಮಃ' ಎಂಬಲ್ಲಿಯವರೆಗಿನ ಮಂತ್ರಗಳು 'ಉಭಯತೋ ನಮಸ್ಕಾರ' ಮಂತ್ರಗಳಾಗಿವೆ; ಎಂದರೆ ಪ್ರಾರಂಭದಲ್ಲಿಯೂ ಕೊನೆಯಲ್ಲಿಯೂ 'ನಮಃ' ಎಂಬ ಶಬ್ದದಿಂದ ಕೂಡಿರುತ್ತವೆ. ಹೇಗೆಂದರೆ 'ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂ ಚ ಪತಯೇ ನಮಃ' ಎಂಬಿದು ಒಂದು ಮಂತ್ರವು. ಇಲ್ಲಿ ಎರಡೂಕಡೆ ನಮಶ್ಶಬ್ದ ವಿರುವದನ್ನು ಗಮನಿಸಬೇಕು. ಈಗ ಮಂತ್ರಗಳ ಅರ್ಥವನ್ನು ವಿಚಾರಿಸೋಣ.

**ನಮೋ ಹಿರಣ್ಯಬಾಹವೇ ಸೇನಾನ್ಯೇ ದಿಶಾಂ ಚ ಪತಯೇ ನಮೋ ನಮೋ ವೃಕ್ಷೇಭ್ಯೋ ಹರಿಕೇಶೇಭ್ಯಃ ಪಶೂನಾಂ ಪತಯೇ ನಮೋ ನಮಸ್ಸಸ್ಪಿಂಜರಾಯ ತ್ವಿಷೀಮತೇ ಪಥೀನಾಂ ಪತಯೇ ನಮೋ ನಮೋ ಬಭ್ಲುಶಾಯ ವಿವ್ಯಾಧಿನೇಽನ್ನಾನಾಂ ಪತಯೇ ನಮಃ ||**

"ಹಿರಣ್ಯಬಾಹುವೂ ಸೇನಾನಿಯೂ ದಿಕ್ಕುಗಳೊಡೆಯನೂ ಆದವನಿಗೆ ನಮಸ್ಕಾರವು. ಹಸಿರಾದ ಕೇಶಗಳುಳ್ಳ ವೃಕ್ಷಗಳಿಗೂ ಪಶುಪತಿಗೂ ನಮಸ್ಕಾರ! ಸಸ್ಪಿಂಜರನೂ, ಕಾಂತಿಯುಕ್ತನೂ ಮಾರ್ಗಗಳಿಗೆ ಅಧಿಪತಿಯೂ ಆದವನಿಗೆ ನಮಸ್ಕಾರ! ವೃಷಭವಾಹನನಾಗಿಯೂ ವಿವ್ಯಾಧಿಯೂ ಅನ್ನಗಳೊಡೆಯನೂ ಆದವನಿಗೆ ನಮಸ್ಕಾರ!"

ಹಿರಣ್ಯಬಾಹುವೆಂದರೆ ಚಿನ್ನದಿಂದ ಮಾಡಿದ ಒಡವೆಗಳಿಂದ ಅಲಂಕೃತವಾದ ತೋಳುಗಳುಳ್ಳವನು. ಬರಿಯ ತೋಳುಗಳಿಗೆ ಮಾತ್ರವೇ ಅಲ್ಲ; ಇಡಿಯ ಶರೀರಕ್ಕೇ ತೊಡಿಸಲ್ಪಟ್ಟಿರುವ ಈತನ ಎಲ್ಲಾ ಭೂಷಣಗಳೂ ಸುವರ್ಣಮಯವೇ ಆಗಿರುತ್ತವೆ. ಅವುಗಳ ಕಾಂತಿಯಿಂದ ಪರಮೇಶ್ವರನ ಶರೀರವೆಲ್ಲವೂ ಹಿರಣ್ಯವರ್ಣವಾಗಿಯೇ ಕಂಡುಬರುತ್ತದೆ. ಇಂಥ ದಿವ್ಯಮಂಗಳವಿಗ್ರಹನು ಎಂದರ್ಥ. ಬೇರೊಂದು ಶ್ರುತಿಯಲ್ಲಿ 'ಹಿರಣ್ಯವರ್ಣನೂ ಹಿರಣ್ಯಪತಿಯೂ ಅಂಬಿಕಾಪತಿಯೂ ಪಶುಪತಿಯೂ ಆದ ರುದ್ರನಿಗೆ ನಮಸ್ಕಾರವು' ಎಂಬ ವರ್ಣನೆಯಿದೆ. ಇದರಿಂದ ಭಗವಂತನು ನಿತ್ಯೈಶ್ವರ್ಯಸಂಪನ್ನನೆಂದಾಯಿತು. ಸೇನೆಗಳನ್ನೆಲ್ಲ ನಡೆಯಿಸುವದರಿಂದ **ಸೇನಾನಿಯು**; ಮಹಾದಂಡನಾಯಕನು ಎಂದರ್ಥ. ದೇವಾಸುರಮನುಷ್ಯಸಿದ್ಧಗಂಧರ್ವಾದಿ ಎಲ್ಲಾ ಜನರ ಸೇನೆಗಳಿಗೂ ಭಗವಂತನೇ ಒಡೆಯನು. ಆದ್ದರಿಂದ ಸರ್ವಸೇನಾನಿಯೆಂದಾಯಿತು. ದಿಕ್ಕುಗಳಿಗೆಲ್ಲ ಒಡೆಯನಾದ್ದರಿಂದ **ದಿಶಾಂಪತಿಯು.** ಹತ್ತು ದಿಕ್ಕುಗಳಿಗೂ ಪ್ರಭುವೆಂದರ್ಥ.

ಇಲ್ಲಿ ಒಂದು ಶಂಕೆ: ಪೂರ್ವವೇ ಮುಂತಾದ ದಿಕ್ಕುಗಳಿಗೆ ಕ್ರಮವಾಗಿ ಇಂದ್ರನೇ ಮೊದಲಾದ ದೇವತೆಗಳನ್ನು ಒಡೆಯರೆಂದು ಶಾಸ್ತ್ರದಲ್ಲಿ ಹೇಳಿದೆ. ಹೀಗಿರುವಾಗ ಎಲ್ಲಕ್ಕೂ ಪರಮೇಶ್ವರನೇ ಅಧಿಪತಿಯೆಂಬುದು ಹೇಗೆ ? ಎಂದರೆ ಇಂದ್ರಾದಿದೇವತೆಗಳಿಗೆ ದಿಕ್ಕುಗಳ ಒಡೆತನವನ್ನು ಅನುಗ್ರಹಿಸಿರುವವನು ಪರಮೇಶ್ವರನೇ-ಎಂದರ್ಥ. ಆದ್ದರಿಂದ ಮುಖ್ಯಾರ್ಥದಲ್ಲಿ ದಿಕ್ಕುಗಳ ಪತಿಯು ರುದ್ರನೇ ಆಗಿರುತ್ತಾನೆ. ಹಾಗಾದರೆ ಇಂದ್ರಾದಿಗಳಿಗೆ ಇವನೇ ಪತಿಯೆಂಬುದಾದರೂ ಹೇಗೆ ? ಎಂದರೆ ಪರಮೇಶ್ವರನಾದುದರಿಂದಲೇ—ಎಂದು ಉತ್ತರವನ್ನು ಹೇಳಬಹುದಾಗಿದೆ. ಹದಿನಾಲ್ಕುಲೋಕಗಳಿಗೂ ಒಡೆಯನೂ ಆದಿತ್ಯಾಂತರ್ಗತಪುರುಷನೂ ಆದ ಮಹಾದೇವನೂ ಎಲ್ಲಾ ದೇವತೆಗಳಿಗೂ ತಾನೇ ತಂದೆಯು. ಅವನಿಂದಲೇ ಉಳಿದ ದೇವತೆಗಳೆಲ್ಲ ಹೊರಬಂದಿರುತ್ತಾರೆ. ಮಹಾಭಾರತದಲ್ಲಿಯೂ ದೇವೇಂದ್ರಾದಿಗಳಿಗೆ ಆಧಿಪತ್ಯವನ್ನು ಕೊಟ್ಟಿರುವವನು ಈ ಪರಮೇಶ್ವರನೇ-ಎಂದು ತಿಳಿಸಿದೆ. ಶಿವಪುರಾಣಗಳಲ್ಲಿ ಇಂತಹ ವರ್ಣನೆಗಳಿವೆ. ಹೀಗೆ ಸಮಸ್ತದೇವತೆಗಳೂ ಶಿವನ ಅನುಗ್ರಹದಿಂದಲೇ ತಮ್ಮ ಸ್ಥಾನಗಳನ್ನು ಪಡೆದುಕೊಂಡಿರುತ್ತಾರೆ. ಆದ್ದರಿಂದ ದಿಕ್ಕುಗಳಿಗೆ ಪತಿಯು ಪರಮೇಶ್ವರನು.

ಪಶುಪತಿಯೂ ಪರಮೇಶ್ವರನೇ. ಪಶುಗಳೆಂದರೆ ನಾಲ್ಕು ಕಾಲಿನ ಮತ್ತು ಎರಡು ಕಾಲಿನ ಎಲ್ಲಾ ಪಶುಗಳೂ-ಎಂದರ್ಥ. ಸಕಲಪ್ರಾಣಿಗಳಿಗೂ ಒಡೆಯನು ಎಂದದ್ದರಿಂದಲೇ ಸ್ಥಾವರಗಳೂ ಸೇರುತ್ತವೆ. ಅದನ್ನು ಸ್ಪಷ್ಟ ಗೊಳಿಸುವದಕ್ಕಾಗಿ ಹರಿಕೇಶಗಳಾದ ವೃಕ್ಷಗಳಿಗೆ-ಎಂದು ತಿಳಿಸಲಾಗಿದೆ. ಪ್ರಕೃತಿಯನ್ನು ಕಣ್ಣು ತೆರೆದು ನೋಡಿದರೆ ಹಚ್ಚ ಹಸುರಾದ ಎತ್ತರವಾದ, ಸುತ್ತಲೂ ಹರಡಿರುವ ಶಾಖೆಗಳುಳ್ಳ, ದೊಡ್ಡ ದೊಡ್ಡ ಮರಗಳು ಕಾಣಿಸುವವು. ಇವೆಲ್ಲವೂ ಪರಮೇಶ್ವರ ಸ್ವರೂಪವೇ ಆಗಿರುತ್ತವೆ. "ಭೂತಾನಿ ಶಂಭುಃ....." ಎಂಬ ಒಂದು ಪದ್ಯದಲ್ಲಿ ಗಿಡ, ಮರ, ಸಮುದ್ರ, ನದಿ,-ಎಲ್ಲವನ್ನೂ ಶಂಭು ವೆಂದೇ ಸ್ತುತಿಸಲಾಗಿದೆ. ಇನ್ನೊಂದರ್ಥದಲ್ಲಿ ವೃಕ್ಷವೆಂದರೆ ಸಂಸಾರವೃಕ್ಷವು. ವೇದಗಳೇ ಮುಂತಾದವು ಸಂಸಾರವೃಕ್ಷದ ಎಲೆ-ಮುಂತಾದವುಗಳಾದ್ದರಿಂದ ಲೂ ವೇದಗಳು ತ್ರೈಗುಣ್ಯವಿಷಯಗಳಾದ ಕರ್ಮಗಳನ್ನೂ ಫಲಗಳನ್ನೂ ತಿಳಿಸುವದರಿಂದಲೂ ವೇದಗಳನ್ನು ಹರಿಕೇಶಗಳೆಂದು ಹೆಸರಿಸಬಹುದಾಗಿದೆ. ಏಕೆಂದರೆ ಹಸಿರು ಎಂಬ ಬಣ್ಣದಿಂದ ಉಳಿದ ಬಣ್ಣಗಳು ಸೂಚಿತವಾಗುವವು. ಅವು ಪ್ರಕೃತಿಯನ್ನು ತಿಳಿಸುತ್ತವೆ. ಹೀಗೆ ಅಭ್ಯುದಯಫಲರೂಪವಾದ ಸಾಧನಗಳನ್ನು ತಿಳಿಸುವ ವೇದಗಳೆಂಬ ಶಾಖೋಪಶಾಖೆಗಳುಳ್ಳ ಊರ್ಧ್ವ ಪವಿತ್ರವಾದ ಸಂಸಾರವೆಂಬ ವೃಕ್ಷವು ಪರಮೇಶ್ವರನ ಸ್ವರೂಪವೇ ಎಂಬರ್ಥ ದಲ್ಲಿ ಹೀಗೆ ಸ್ತುತಿಸಲಾಗಿದೆ-ಎಂದೂ ಭಾವಿಸಬಹುದು.

ಸಸ್ ಎಂದರೆ ಎಳೆಯ ಗರಿಕೆ-ಎಂದರ್ಥ. ಪಿಂಜರವೆಂದರೆ ಹಳದಿ ಕೆಂಪು ಬೆರೆತ ಒಂದು ಮಿಶ್ರವಾದ ಬಣ್ಣವು. ಎಳೆಯ ಹುಲ್ಲು ಹೇಗೆ ಮಿಶ್ರ ವರ್ಣವಾಗಿರುವದೋ ಅಂಥ ಬಣ್ಣವುಳ್ಳವನು ಸಸ್ಪಿಂಜರನು. ತ್ವಿಷೀಮಂತ ನೆಂದರೆ ಕಾಂತಿಯುಕ್ತನೆಂದರ್ಥ. ಕಾಂತಿಯೆಂಬುದು ಇಲ್ಲಿ ಜ್ಞಾನವನ್ನು ಸೂಚಿಸುತ್ತದೆ. ಸರ್ವಜ್ಞನೂ ಚೈತನ್ಯಪ್ರಕಾಶಸ್ವರೂಪನೂ ಆಗಿರುವ ನೆಂದರ್ಥ. ಪಂಥಾಃ ಎಂದರೆ ಮಾರ್ಗಗಳು. ಇಲ್ಲಿ ಪರಮಾತ್ಮನನ್ನು ಸೇರುವ ಸಾಂಖ್ಯ, ಯೋಗ-ತಾಂತ್ರಿಕಾದಿ ಮಾರ್ಗಗಳನ್ನು ಪಂಥಾಃ ಎಂದು ಸೂಚಿಸ ಲಾಗಿದೆ. ಎಲ್ಲಾ ಸಾಧನಮಾರ್ಗಗಳಿಗೂ ಒಡೆಯನೂ ಆಯಾ ಮಾರ್ಗ ದರ್ಶಕರಾದ ಋಷಿಗಳರೂಪದಿಂದ ಲೋಕಕ್ಕೆ ಹಿತವನ್ನು ಉಪದೇಶಮಾಡಿರು ವವನೂ ಪರಮೇಶ್ವರನೇ ಎಂದರ್ಥ. ಆದ್ದರಿಂದ ಪಥೀನಾಂ ಪತಯೇ-

ಎಂದು ಹೊಗಳಿದೆ. ಇಲ್ಲಿ ಒಂದು ಶಂಕೆ: ತಾಂತ್ರಿಕಾದಿಮಾರ್ಗಗಳು ನೇರಾಗಿ ಮೋಕ್ಷಸಾಧನವಲ್ಲವಾದ್ದರಿಂದ ಅವುಗಳನ್ನು ಪರಮೇಶ್ವರನು ಉಪದೇಶಿಸಿದ ನೆಂಬುದು ಸರಿಯೆ? ಎಂದರೆ ಹಾಗಲ್ಲ. ವೇದದಲ್ಲಿ ನಂಬಿಕೆಯಿಲ್ಲದವರೂ ಪರಮೇಶ್ವರನ ಸೃಷ್ಟಿಗೇ ಒಳಪಟ್ಟವರಾದ್ದರಿಂದ ಅವರುಗಳೂ ಉದ್ಧಾರ ವಾಗಲು ಒಂದು ದಾರಿಯು ಬೇಕೇಬೇಕು. ಆದ್ದರಿಂದ ಮಹಾದೇವನು ಅಂಥ ಜನರಿಗಾಗಿ ತಾಂತ್ರಿಕಮಾರ್ಗಗಳನ್ನು ಉಪದೇಶಿಸಿ ಆ ಮಾರ್ಗಗಳಿಂದಲಾದ ರೂ ವಿಳಂಬವಾಗಿಯಾದರೂ ಜನರು ತನ್ನನ್ನು ಸೇರಲಿ-ಎಂದು ದಯೆಯಿಂದ ತಿಳಿಸಿರುತ್ತಾನೆಂತ ಭಾವಿಸಬೇಕು.

ಬಭ್ರು-ಎಂದರೆ ಪರಮೇಶ್ವರನನ್ನು ಹೊತ್ತಿರುವ ವೃಷಭವು. ಅದರ ಮೇಲೆ ಶೇತೇ-ಎಂದರೆ ಕುಳಿತಿರುತ್ತಾನಾದ್ದರಿಂದ ಬಭ್ರುಶನು-ಎಂದಭಿ ಪ್ರಾಯ. ವಿಶೇಷವಾಗಿ ಗುರಿಯಿಟ್ಟು ಹೊಡೆಯುವವನು ವಿವ್ಯಾಧಿಯು. ಭಗವಂತನು ಎಂಥ ಧನುರ್ಧಾರಿಯೆಂದರೆ ಸಾವಿರವರ್ಷಗಳಿಗೊಮ್ಮೆ ಒಂದು ಘಳಿಗೆಕಾಲಮಾತ್ರ ಒಂದುಕಡೆ ಕೂಡುವ ಮೂರು ಪುರಗಳನ್ನು ಒಂದೇಬಾಣ ದಿಂದ ಹೊಡೆದು ನಾಶಮಾಡಿದನು. ಹೀಗೆ ಗುರಿಯಿಟ್ಟು ಹೊಡೆಯುವ ಹಾಗೂ ಶತ್ರುನಾಶವನ್ನು ಮಾಡಿಯೇತೀರುವಂಥ ಬಾಣಪ್ರಯೋಗನಿಪುಣನು ವಿವ್ಯಾಧಿಯು. ಅನ್ನಗಳಿಗೆ-ಎಂದರೆ ಸಸ್ಯಗಳಿಗೆ ಒಡೆಯನು. ಬತ್ತ, ಗೋಧಿ ಮುಂತಾದ ನಾವು ತಿನ್ನುವ ಆಹಾರಗಳಿಗೂ ಪಶುಗಳ ಆಹಾರವಾದ ಹುಲ್ಲು ಮುಂತಾದವುಗಳಿಗೂ ಅವನೇ ಪ್ರಭುವು. ಮತ್ತು ಅಕ್ಕಿ, ಬೇಳೆ-ಮುಂತಾದ ವುಗಳಿಂದ ತಯಾರಿಸಿದ ಎಲ್ಲಾ ಭಕ್ಷ್ಯಭೋಜ್ಯಗಳಿಗೂ ಅವನೇ ಪತಿಯು. ಆದ್ದರಿಂದ ಅನ್ನಾನಾಂ ಪತಯೇ ಎಂದು ಹೊಗಳಿದೆ. ಇಲ್ಲಿ ಭಗವಂತನು ವೃಷಭಾರೂಢನೆಂದಿರುವದರಿಂದ, ವೃಷಭವು ಧರ್ಮವನ್ನು ಪ್ರತಿನಿಧಿಸುವ ದರಿಂದ, ಧರ್ಮರೂಪವಾದ ಯಜ್ಞದಿಂದಲೇ ಮಳೆಬೆಳೆಗಳುಂಟಾಗುವವಾದ್ದ ರಿಂದ-ಅನ್ನಸ್ವಾಮಿತ್ವವು ಮಹಾದೇವನಿಗೇ ಯುಕ್ತವಾಗಿದೆ-ಎಂದಭಿಪ್ರಾಯ. ಅನ್ನವೇ ಭಗವಂತನಿಗೆ ಬಾಣವೆಂದು ಮುಂದೆ ಸ್ತುತಿಸಲ್ಪಟ್ಟದೆಯಾದ್ದ ರಿಂದಲೂ ಅನ್ನಪತಿತ್ವವು ಅವನಿಗೇ ಯುಕ್ತವಾಗಿದೆ. ಇದರ ವಿವರವು ಮುಂದೆ ಗೊತ್ತಾಗಲಿದೆ.

———

# ೧೧. ನಮೋ ಹರಿಕೇಶಾಯ

ಈಗ ಎರಡನೆಯ ಅನುವಾಕದ ಉತ್ತರಾರ್ಧವನ್ನು ವಿಚಾರಮಾಡ ಬೇಕಾಗಿದೆ.

**ನಮೋ ಹರಿಕೇಶಾಯೋಪವೀತಿನೇ ಪುಷ್ಟಾನಾಂ ಪತಯೇ ನಮೋ ನಮೋ ಭವಸ್ಯ ಹೇತ್ಯೈ ಜಗತಾಂ ಪತಯೇ ನಮೋ ನಮೋ ರುದ್ರಾಯಾತತಾವಿನೇ ಕ್ಷೇತ್ರಾಣಾಂ ಪತಯೇ ನಮೋ ನಮಃಸೂತಾ ಯಾಹಂತ್ಯಾಯ ವನಾನಾಂ ಪತಯೇ ನಮಃ ॥**

"ಹರಿಕೇಶನೂ ಉಪವೀತಿಯೂ ಪುಷ್ಟರುಗಳ ಒಡೆಯನೂ ಸಂಸಾರ ವನ್ನು ಕತ್ತರಿಸುವ ಆಯುಧರೂಪನೂ ಜಗತ್ಪತಿಯೂ ರುದ್ರನೂ ಆತತಾವಿ ಗಳಾದ ಕ್ಷೇತ್ರಗಳ ಪತಿಯೂ ಸೂತನೂ ಅಹಂತ್ಯನೂ ವನಗಳಿಗೆ ಪತಿಯೂ ಆದವನಿಗೆ ನಮಸ್ಕಾರ!"

ಹರಿಕೇಶನೆಂಬ ಪದವನ್ನು ಹಿಂದೊಮ್ಮೆ ವ್ಯಾಖ್ಯಾನಮಾಡಿದೆ. ಇಲ್ಲಿ ಹರಿಕೇಶನೆಂಬುದಕ್ಕೆ ಮತ್ತೊಂದು ಅರ್ಥವನ್ನು ಕೊಡಲಾಗಿದೆ. ಕಪ್ಪಾದ ಜುಟ್ಟು ಉಳ್ಳವನು ಹರಿಕೇಶನು. ಪರಮೇಶ್ವರನು ಯಾವಾಗಲೂ ನಿತ್ಯ ಯುವಕನು. ಅವನು ಮುದುಕನಾಗುವ ಸಂಭವವೇ ಇಲ್ಲ. ಆದ್ದರಿಂದ ಹರಿಕೇಶನೆಂದು ಕರೆದಿದೆ. ಉಪವೀತಿಯೆಂದರೆ ಯಜ್ಞೋಪವೀತವುಳ್ಳ ವನು. ಯಜ್ಞೋಪವೀತವನ್ನು ಕನ್ನಡದಲ್ಲಿ 'ಜನಿವಾರ' ವೆಂದು ಕರೆಯು ವರು. ಇದು ಇಲ್ಲದೆ ಕರ್ಮಾಧಿಕಾರವುಂಟಾಗಲಾರದು. ಆದರೆ ಪರಮೇಶ್ವರ ನಿಗೆ ಯಾವ ಕರ್ಮಗಳೂ ಇಲ್ಲವಾದರೂ ಲೋಕಾನುಗ್ರಹಕ್ಕಾಗಿ ತಾನೂ ಕರ್ಮಾಧಿಕಾರಿಯಂತೆ ಗಾರ್ಹಸ್ಥ್ಯಧರ್ಮಾನುಸಾರವಾಗಿ ಯಜ್ಞೋಪವೀತ ವನ್ನು ಧರಿಸಿ ಎಲ್ಲರಿಗೂ ಆದರ್ಶನಾಗಿದ್ದಾನೆಂದು ಹೇಳಬಹುದು. ಯಜ್ಞೋ ಪವೀತವೆಂಬ ಶಬ್ದಕ್ಕೆ ವ್ಯಾಖ್ಯಾನರೂಪವಾದ ಒಂದು ನಿರುಕ್ತವಿದೆ. ಅದರಲ್ಲಿ ಯಜ್ಞಸ್ವರೂಪನಾದ ಪರಮಾತ್ಮನ ಉಪ-ಎಂದರೆ ಸಮೀಪಕ್ಕೆ, ವೀತ- ಎಂದರೆ ವಿವಿಧವಾದ ಸಾಧನಗಳಿಂದ ಕರೆದೊಯ್ಯುವದು ಯಜ್ಞೋಪವೀತವು- ಎಂಬರ್ಥವನ್ನು ಮಾಡಿದೆ. ಬಾಹ್ಯವಾದ ಸೂತ್ರರೂಪದಲ್ಲಿರುವ ಉಪವೀತ ವನ್ನೂ ನಾವು ಬ್ರಹ್ಮವೆಂದೇ ಪೂಜಿಸುವ ವಾಡಿಕೆಯಿದೆ. ಆದ್ದರಿಂದ

ಉಪಾಯವೂ ಉಪೇಯವೂ ಭಗವಂತನೇ ಆಗಿದ್ದು ನಿಜವಾದ ಯಜ್ಞೋಪವೀತಿಯು ಪರಮೇಶ್ವರನೇ ಆಗಿರುತ್ತಾನೆ. ಇದಕ್ಕಾಗಿಯೇ ಇಲ್ಲಿ ಉಪವೀತಿಯೆಂದು ಆತನನ್ನು ಸ್ತುತಿಸಿದೆ. ಪುಷ್ಟರೆಂದರೆ ಧನಕನಕಾದಿಗಳಿಂದಲೂ ಬಂಧುಜನರಿಂದಲೂ ಪರಿಪೂರ್ಣರಾದವರು; ಅತ್ಯಂತಪುಷ್ಟನಾದವನು ತ್ರೈಲೋಕ್ಯಾಧಿಪತಿಯಾದ ದೇವೇಂದ್ರನು. ದೇವೇಂದ್ರನಂಥ ಎಲ್ಲ ಪುಷ್ಟರಿಗೂ ಪರಮೇಶ್ವರನು ಒಡೆಯನಾದ್ದರಿಂದ ಪುಷ್ಟಾನಾಂ ಪತಿಯೆಂದು ಹೊಗಳಿದೆ. ಆದಿಮೂರ್ತಿಯಾದ ಮಹಾದೇವನು ಬ್ರಹ್ಮನೇ ಮುಂತಾದ ಸರ್ವಜೀವರಿಗೂ ಉಪಾಸ್ಯನಾಗಿದ್ದು ತನ್ನ ಭಕ್ತರಿಗೆ ಪುಷ್ಟಿಯನ್ನು ಕೊಟ್ಟು ಕಾಪಾಡುವನಾದ್ದರಿಂದಲೂ, ನಿತ್ಯಯುವಕನಾಗಿದ್ದು ಎಲ್ಲರಿಗೂ ದೇಹಪುಷ್ಟಿಯನ್ನು ಉಂಟುಮಾಡುವವನಾದ್ದರಿಂದಲೂ ಹರಿಕೇಶನೂ ಪುಷ್ಟರುಗಳ ಪತಿಯೂ ಆಗಿದ್ದಾನೆಂತ ಇಲ್ಲಿ ವರ್ಣಿಸಿದೆ.

ಭವ ಎಂದರೆ ಸಂಸಾರವು. ಸಂಸಾರವೆಂಬ ವೃಕ್ಷವನ್ನು ಕತ್ತರಿಸುವ ಹೇತಿ-ಎಂದರೆ ಆಯುಧವು ಪರಮೇಶ್ವರನು-ಎಂದರ್ಥ. ಬ್ರಹ್ಮಜ್ಞಾನವಿಲ್ಲದೆ ಆತ್ಯಂತಿಕವಾಗಿ ಸಂಸಾರವು ನಾಶವಾಗಲಾರದಾದ್ದರಿಂದ ಇಲ್ಲಿ ಪರಮೇಶ್ವರನನ್ನು ಭವಹೇತಿ-(ಸಂಸಾರನಾಶಕವಾದ ಆಯುಧರೂಪ)ನೆಂದು ಹೊಗಳಿದೆ. ಸ್ಥಾವರಜಂಗಮಾತ್ಮಕವಾದ ಎಲ್ಲ ಪ್ರಪಂಚಕ್ಕೂ ಒಡೆಯನಾದ್ದರಿಂದ ಜಗತ್ಪತಿಯು. ಪಶುಪತಿಯೆಂದದ್ದರಿಂದಲೇ ಜಗತ್ಪತಿಯೂ ಆಗಿರುವನೆಂದಾಗಲಿಲ್ಲವೆ? ಮತ್ತೇಕೆ ಹೇಳಿದೆ? ಎಂದರೆ ಜಗತ್ತಿನ ಪತಿಯಾದ ಪರಮೇಶ್ವರನಿಗೆ ಭಕ್ತರನ್ನು ಜಗತ್ತೆಂಬ ಸಂಸಾರಬಂಧನದಿಂದ ಬಿಡಿಸುವ ಸಾಮರ್ಥ್ಯವೂ ಇದೆ ಎಂದು ತಿಳಿಸುವದಕ್ಕಾಗಿ-ಎಂತ ತಿಳಿಯಬೇಕು.

ಈಗ ಪರಮೇಶ್ವರನನ್ನು ಬಿಡಿಬಿಡಿಯಾಗಿ ಆಯಾ ವಸ್ತುಗಳ ಅಧಿಪತಿಯೆಂದು ಸ್ತುತಿಸಲಾಗುವದು. ಭಗವಂತನು ಸಂಸಾರದುಃಖಗಳನ್ನು ಕಳೆಯುವವನಾದ್ದರಿಂದ ರುದ್ರನು. ಆದ್ದರಿಂದಲೇ ಆತತಾವಿಯು-ಎಂದರೆ ಉಪಯೋಗಿಸಲು ಸಜ್ಜಾದ ಧನುಸ್ಸಿನ ನೆರವಿನಿಂದ ಭಕ್ತರನ್ನು ಕಾಪಾಡುವವನು-ಎಂದಭಿಪ್ರಾಯ. ಮತ್ತು ಕ್ಷೇತ್ರಪತಿಯು. ಕ್ಷೇತ್ರವೆಂದರೆ ಶರೀರವು. ಅದಕ್ಕೆ ಒಡೆಯನಾದ್ದರಿಂದ ಕ್ಷೇತ್ರಪತಿಯೆಂದು ಅಭಿಪ್ರಾಯ. ರಾಜನೇ ಮುಂತಾದ ಕ್ಷೇತ್ರಪತಿಗಳಿಲ್ಲವೆ! ಈಗಿನ ಕಾಲಕ್ಕೆ ರಾಜರಿಲ್ಲದಿದ್ದರೂ

ರಾಷ್ಟ್ರಪತಿಗಳಿದ್ದೇ ಇರುವರಲ್ಲ! ಎಂದರೆ ರಾಷ್ಟ್ರಪತಿಗಳೇನೋ ದೇಶದ ಜನರನ್ನು ಶತ್ರುಗಳಿಂದ ರಕ್ಷಿಸುವರು. ಆದರೆ ಪ್ರತಿಯೊಬ್ಬರಿಗೂ ಅವರವರ ಆವಶ್ಯಕತೆಗೆ ತಕ್ಕಂತೆ ಸುಖಸಂಪತ್ತುಗಳನ್ನು ಕೊಟ್ಟು ಕಾಪಾಡಲು ಸರ್ವಕ್ಷೇತ್ರಗಳಲ್ಲಿಯೂ ವ್ಯಾಪಿಸಿರುವ ಪರಮೇಶ್ವರನಿಂದ ಮಾತ್ರವೇ ಸಾಧ್ಯ. ಗೋಪಾಲಕನು ದನಗಳನ್ನೆಲ್ಲ ಕಾಯುತ್ತಾನಾದರೂ ಪ್ರತಿಯೊಂದು ಕರುವಿಗೂ ಹಾಲನ್ನು ಕೊಡಲು ಅದರದರ ತಾಯಿಹಸುವೇ ಬೇಕು. ಹಸುವಿಗೂ ಆಹಾರವನ್ನು ಸೃಷ್ಟಿಸಿರುವವನು ಆ ಮಹಾದೇವನೇ. ಆದ್ದರಿಂದ 'ಹಸುವಿನಲ್ಲಿ ಹಾಲನ್ನು ಸೃಷ್ಟಿಸಿರುವಂತೆ ಕ್ಷೇತ್ರಪತಿಯಾದ ಪರಮೇಶ್ವರನು ನಮ್ಮಲ್ಲಿಯೂ ಸುಖಸಂಪತ್ತುಗಳನ್ನು ಉಂಟುಮಾಡಲೆಂದು' ಪ್ರಾರ್ಥಿಸಿ ವೇದದಲ್ಲಿ ಒಂದು ಕಡೆ ಸ್ತುತಿಸಲಾಗಿದೆ. ಹೀಗೆ ಕ್ಷೇತ್ರಪತಿಯಾದ ಮಹಾದೇವನು ಎಲ್ಲಾ ಜೀವರುಗಳಿಗೂ ಪೋಷಕನಾಗಿರುತ್ತಾನೆ. 'ಯಾವನಿಂದಲೇ, ಹುಟ್ಟಿದ ಜೀವರುಗಳೆಲ್ಲರೂ ಜೀವಿಸಿರುವರೋ'– ಎಂದೂ ಉಪನಿಷತ್ತಿನಲ್ಲಿ ತಿಳಿಸಿದೆ. ಇನ್ನು ಕ್ಷೇತ್ರಗಳೆಂದರೆ ಪುಣ್ಯಕ್ಷೇತ್ರಗಳೆಂದೂ ಅರ್ಥಮಾಡಬಹುದು. ಆಗಲೂ ಆಯಾ ಕ್ಷೇತ್ರಗಳಿಗೆ ಪರಮೇಶ್ವರನೇ ದೊರೆಯು. ಉದಾಹರಣೆಗೆ ವಾರಣಾಸಿಗೆ ವಿಶ್ವನಾಥನೇ ಪುರಪತಿಯು.

ಸೂತನೆಂದರೆ ಸಾರಥಿಯು. ಭಗವಂತನು ಜಗತ್ತೆಂಬ ಯಂತ್ರವನ್ನು ನಡೆಯಿಸುವ ಸಾರಥಿಯಾಗಿರುತ್ತಾನೆ. ಅವನನ್ನು 'ಸನಾತನಸಾರಥಿ'ಯೆಂದೂ ಬಲ್ಲವರು ಕರೆಯುತ್ತಾರೆ. ಈಗಿನ ಕಾಲಕ್ಕೆ ಪ್ರಯಾಣವು ಅನಿವಾರ್ಯ. ಆದ್ದರಿಂದ ಆ ಪ್ರಯಾಣಕಾಲದಲ್ಲಿ ಸಾರಥಿ(ಡ್ರೈವರ್)ಯ ಕೈಯಲ್ಲೇ ನಮ್ಮ ಪ್ರಾಣವಿರುವದು. ಹಾಗೆಯೇ ಮುಖ್ಯಾರ್ಥದಲ್ಲಿ ಪರಮೇಶ್ವರನು ಎಲ್ಲಾ ಜೀವರುಗಳ ರಥವನ್ನೂ ನಡೆಯಿಸುವ ಸಾರಥಿಯು. ಸಾರಥಿಯ ಸಾಮರ್ಥ್ಯ, ಬುದ್ಧಿಶಕ್ತಿ, ಚಾಕಚಕ್ಯತೆಗಳನ್ನೇ ರಥಿಕನ ಜಯಪರಾಜಯಗಳು ಅವಲಂಬಿಸಿರುವವು. ಪಾರ್ಥಸಾರಥಿಯಾಗಿ ಶ್ರೀಕೃಷ್ಣನು ದೊರೆತದ್ದರಿಂದಲೇ ಅರ್ಜುನನು ಜಯವನ್ನು ಗಳಿಸಲು ಸಾಧ್ಯವಾಯಿತು. ಹೀಗೆ ಯೋಚಿಸಿನೋಡಿದಲ್ಲಿ ನಮ್ಮ ಜೀವನರಥಕ್ಕೆ ಪರಮೇಶ್ವರನ ಸಾರಥ್ಯವು ದೊರಕಿದಲ್ಲಿ ನಾವು ಕೃತಕೃತ್ಯರಾದಂತೆಯೇ ಸರಿ. ನಿಜವಾಗಿ ನೋಡಿದರೆ ಅವನ ಪ್ರೇರಣೆಯಿಲ್ಲದೆ ಏನೂ ನಡೆಯುವದೇ ಇಲ್ಲ. 'ಎಲ್ಲಾ ಪ್ರಾಣಿಗಳನ್ನೂ

ಯಂತ್ರಾರೂಢವಾದ ಬೊಂಬೆಗಳಂತೆ ಈಶ್ವರನೇ ಸಕಲರ ಹೃದಯದಲ್ಲಿಯೂ ಇದ್ದುಕೊಂಡು ನಿಯಮಿಸುತ್ತಿರುವನು'-ಎಂದು ಗೀತೆಯಲ್ಲಿ ಹೇಳಿದೆ. ಇನ್ನು ಉಪನಿಷತ್ತುಗಳಲ್ಲಿಯೂ, ಪರಮೇಶ್ವರನ ಪ್ರಶಾಸನಕ್ಕೆ ಒಳಪಟ್ಟೇ ಎಲ್ಲವೂ ತಮ್ಮ ತಮ್ಮ ಕಾರ್ಯವನ್ನು ಮಾಡುತ್ತಿರುವವೆಂದು ತಿಳಿಸಿದೆ. ಆದ್ದರಿಂದ ಸೂತನು ಪರಮೇಶ್ವರನು.

ಅಹಂತ್ಯನೆಂದರೆ ಕೊಲ್ಲಲು ಅಸಾಧ್ಯನಾದವನು. ಪರಮೇಶ್ವರನೇ ಎಲ್ಲರನ್ನೂ ಸಂಹಾರಮಾಡುವವನೇ ಹೊರತು ಅವನು ಯಾರಿಂದಲೂ ಸಂಹರಿಸಲ್ಪಡುವವನಲ್ಲ. ಏಕೆಂದರೆ ಅವನು ಮೃತ್ಯುಂಜಯನು. 'ಇವನು ಕೊಲ್ಲುವವನೂ ಅಲ್ಲ, ಕೊಲ್ಲಲ್ಪಡುವವನೂ ಅಲ್ಲ' ಎಂದೂ ಗೀತೆಯಲ್ಲಿ ತಿಳಿಸಿದೆ. ಆದ್ದರಿಂದ ವ್ಯವಹಾರದೃಷ್ಟಿಯಿಂದ ಅಹಂತ್ಯನೆಂದು ಅರ್ಥಮಾಡಬೇಕಾಗಿದೆ. ಅಪರಿಮಿತವಾದ ಜ್ಞಾನಬಲೈಶ್ವರ್ಯಸಂಪನ್ನನಾದ ಈ ಮಹಾದೇವನನ್ನು ಎದುರಿಸಿದ ಯಾವ ಶತ್ರುವೂ ಈವರೆಗೆ ಜಯಶೀಲನಾಗಿಲ್ಲ. ಆದ್ದರಿಂದ ಅಜೇಯನು-ಅಹಂತ್ಯನು ಪರಮೇಶ್ವರನೆಂದು ಭಾವ. ವನಗಳಿಗೆ ಪತಿಯಾದ್ದರಿಂದ ವನಾನಾಂ ಪತಿಯು. ಅರಣ್ಯಗಳಿಗೆ ಒಡೆಯನೆಂದರ್ಥ. ಭಗವಂತನನ್ನು 'ಧರ್ಮಾರಣ್ಯಪತಿ'ಯೆಂದು ಪುರಾಣದಲ್ಲಿ ಹೊಗಳಿದೆ ಅಥವಾ ಅರಣ್ಯವಾಸಿಗಳಿಗೆ ಮಹಾದೇವನೇ ಗತಿಯು-ಎಂದೂ ಅರ್ಥಮಾಡಬಹುದು. ಬೆಟ್ಟ, ಗುಡ್ಡಗಳಲ್ಲಿಯೂ, ಕಾಡುಗಳಲ್ಲಿಯೂ ನಮ್ಮನ್ನು ಕಾಪಾಡಲು ಪರಮೇಶ್ವರನ ಹೊರತು ಬೇರಾರೂ ದಿಕ್ಕಿರುವದಿಲ್ಲ. ಆದ್ದರಿಂದ ನಾವು ಕಾಂತಾರವನದುರ್ಗಗಳಲ್ಲಿ ಮಹಾದೇವನನ್ನು ಸ್ಮರಿಸುತ್ತಾ ನಡೆದಲ್ಲಿ ನಮಗೆ ಯಾವ ಭಯವೂ ಉಂಟಾಗಲಾರದು. ಹೀಗೆ ವನಾಧಿಪತಿಯಾದ ದೇವನು ನಮ್ಮ ಮನಸ್ಸೆಂಬ ವನಕ್ಕೂ ಅಧಿಪತಿಯೆಂದು ಭಾವಿಸಬಹುದು. ವನದಲ್ಲಿ ದೇವರನ್ನು ಧ್ಯಾನಿಸುವಂತೆ ಮನಸ್ಸಿನಲ್ಲಿ ಮಹಾದೇವನನ್ನು ನೆನೆದು ನಾವು ಕೃತಾರ್ಥರಾಗಬೇಕಾಗಿದೆ. ಬೇರೆ ಯಾವ ಕಾಡಿಗೂ ಹೋಗಬೇಕಾಗಿರುವದಿಲ್ಲ. ಒಂದು ವೇಳೆ ಕಾಡಿಗೆ ಹೋದರೂ ಮನಸ್ಸು ಪರಮೇಶ್ವರನಲ್ಲಿ ನೆಲೆಗೊಳ್ಳದೆ ಹೋದರೆ ವನವಾಸದ ಪ್ರಯೋಜನವಾದರೂ ಏನಾದಂತಾಯಿತು ? ಆದ್ದರಿಂದ ವನನೀಯ (ಸೇವಿಸಲು ತಕ್ಕವನಾದ) ಭಗವಂತನನ್ನು ತಾನು ಎಲ್ಲಿದ್ದರೂ ಭಜಿಸುತ್ತಿರುವವನೇ ನಿಜವಾದ ಮುನಿಯು- ಎಂದು ತಿಳಿಯಬೇಕು.

---

# ೧೨. ಸತ್ವನಾಂ ಪತಯೇ ನಮಃ

ಈಗ 'ನಮೋ ರೋಹಿತಾಯ' ಎಂಬಲ್ಲಿಂದ ಮುಂದಿನ ಭಾಗವನ್ನು ವಿಚಾರಮಾಡಬೇಕಾಗಿದೆ :

ನಮೋ ರೋಹಿತಾಯ ಸ್ಥಪತಯೇ ವೃಕ್ಷಾಣಾಂ ಪತಯೇ ನಮೋ ನಮೋ ಮಂತ್ರಿಣೇ ವಾಣಿಜಾಯ ಕಕ್ಷಾಣಾಂ ಪತಯೇ ನಮೋ ನಮೋ ಭುವಂತಯೇ ವಾರಿವಸ್ಕೃತಾಯೌಷಧೀನಾಂ ಪತಯೇ ನಮೋ ನಮ ಉಚ್ಚೈರ್ಘೋಷಾಯಾಕ್ರಂದಯತೇ ಪತ್ತೀನಾಂ ಪತಯೇ ನಮೋ ನಮಃ ಕೃತ್ಸ್ನವೀತಾಯ ಧಾವತೇ ಸತ್ವನಾಂ ಪತಯೇ ನಮಃ ॥

"ಲೋಹಿತವರ್ಣನೂ ಸ್ಥಪತಿಯೂ ವೃಕ್ಷಗಳ ಒಡೆಯನೂ, ಮಂತ್ರಗಳ ಪತಿಯೂ ವಾಣಿಜನೂ ಕಕ್ಷಗಳ ಪ್ರಭುವೂ ಆಗಿರುವ, ಭುವಂತನೂ ವಾರಿವಸ್ಕೃತನೂ ಸಸ್ಯಗಳ ಒಡೆಯನೂ ಆಗಿರುವ, ಗಟ್ಟಿಯಾಗಿ ನಾದಮಾಡುವವನೂ ವೈರಿಗಳನ್ನು ಅಳುವಂತೆ ಮಾಡುವವನೂ ಪದಾತಿಗಳ ಒಡೆಯನೂ, ಜಗತ್ತನ್ನೆಲ್ಲ ಪೂರ್ಣವಾಗಿ ವ್ಯಾಪಿಸಿರುವವನೂ ಓಡುವವನೂ ಸತ್ವರುಗಳಿಗೆ ಪತಿಯೂ ಆಗಿರುವವನಿಗೆ ನಮಸ್ಕಾರವು."

ರೋಹಿತನೆಂದರೆ ಕೆಂಪುಬಣ್ಣದವನೆಂದರ್ಥ. ಕೆಂಪುಬಣ್ಣವು ರಜೋಗುಣವನ್ನು ಸೂಚಿಸುತ್ತದೆ. ಸೃಷ್ಟಿಕಾಲದಲ್ಲಿ ರಜೋಗುಣಮೂರ್ತಿಯಾಗಿ ಪ್ರಪಂಚವನ್ನು ಉಂಟುಮಾಡುವವನು ಎಂದರ್ಥ. ಸ್ಥಪತಿ–ಎಂದರೆ ಸ್ಥಿತಿಕಾರಕನೂ ಪಾಲಕನೂ ಆಗಿರುವನೆಂದರ್ಥ. ಜಗತ್ತಿನ ಇರುವಿಕೆಯೂ ಅದರ ಕ್ಷೇಮವೂ ಭಗವಂತನ ಆಳ್ವಿಕೆಗೇ ಒಳಪಟ್ಟಿರುತ್ತದೆ. ಆತನ ಅನುಗ್ರಹವಿಲ್ಲದೆ ಪ್ರಪಂಚದಲ್ಲಿ ಕ್ಷೇಮವಿರಲಾರದು. ಆತನು ಸ್ಥಾತಾ ಮತ್ತು ಪಾಲಕನೆಂಬ ಎರಡೂ ಬಿರುದುಗಳುಳ್ಳವನು. ಆದ್ದರಿಂದಲೇ ಸ್ಥಪತಿಯೆನಿಸಿರುವನು. ವೃಕ್ಷಗಳಿಗೆ ಪತಿಯಾಗಿರುವನೆಂಬುದು ಪ್ರಸಿದ್ಧವೇ ಆಗಿದೆ. ಸಂಸಾರವೆಂಬ ವೃಕ್ಷಕ್ಕೂ ಆತನೇ ಒಡೆಯನು. ಆದರೆ ಆ ವೃಕ್ಷದ ಮೇಲಿರುವವನು ಅವನು; ಮತ್ತು ಪ್ರೇರಕನೂ ಆಗಿರುತ್ತಾನೆ. ಒಡೆಯನಾದ್ದರಿಂದ ವೃಕ್ಷದಲ್ಲಿದ್ದುಕೊಂಡು ಅದರ ಪಾಲನೆಯನ್ನೂ ಮಾಡುತ್ತಾನೆ–ಎಂದೂ ಅರ್ಥಮಾಡಬಹುದು.

ಮಂತ್ರಿಯೆಂದರೆ ಮಂತ್ರಗಳ ಪ್ರಭುವು. ಏಳುಕೋಟಿ ಮಹಾಮಂತ್ರಗಳು ಇರುವವೆಂದು ಬಲ್ಲವರು ಹೇಳುತ್ತಾರೆ. ಅವುಗಳಲ್ಲದೆ ನಾಲ್ಕು ವೇದಗಳು ಉಪನಿಷತ್ತುಗಳು ಹಾಗೂ ಉಳಿದ ಎಲ್ಲಾ ರಹಸ್ಯವಿದ್ಯೆಗಳೂ ಮಂತ್ರಗಳೇ. ಅವುಗಳೆಲ್ಲವನ್ನೂ ಬಲ್ಲ, ಸರ್ವವಿದ್ಯೆಗಳಿಗೂ ಈಶಾನನಾದ ಈ ದೇವನೇ ಮುಖ್ಯಾರ್ಥದಲ್ಲಿ ಮಂತ್ರಿಯು. ವಾಣಿಜರೆಂದರೆ ವ್ಯಾಪಾರಿಗಳ ಗುಂಪು. ವ್ಯಾಪಾರಿಯೆಂಬುವನು ಅಗ್ಗವಾದ ಪ್ರದೇಶದಿಂದ ಬೇಕಾದ ಸಾಮಾನುಗಳನ್ನು ಕೊಂಡು ತಂದು ಅವು ಸಿಗದೆ ಇರುವ ಪ್ರದೇಶಗಳಲ್ಲಿ ಹಂಚುತ್ತಾನೆ. ಬಹಳಮಟ್ಟಿಗೆ ಅವನಿಗೆ ಯಾವಯಾವ ಪದಾರ್ಥಗಳು ಎಲ್ಲೆಲ್ಲಿ ದೊರೆಯುವದೆಂಬುದೂ ಅವುಗಳ ಗುಣ, ಬೆಲೆ, ಉಪಯೋಗಗಳೂ ತಿಳಿದಿರುತ್ತವೆ. ಹಾಗೆಯೇ ಪರಮೇಶ್ವರನೂ ವಾಣಿಜನು. ಈತನಿಗೆ ತಿಳಿಯದೆಇರುವ ಅಥವಾ ದೊರಕದೆ ಇರುವ ಪದಾರ್ಥವೆಂಬುದೇ ಇಲ್ಲ. ಹೀಗೆ ಎಲ್ಲಾಪದಾರ್ಥಗಳನ್ನೂ ತಿಳಿದಿರುವ ಹಾಗೂ ಪಡೆದಿರುವ ಭಾರಿಯ ವರ್ತಕನು ಮತ್ತು ವರ್ತಕರ ಯಜಮಾನನು ಈತನೇ- ಎಂದರ್ಥ. ಕಕ್ಷಗಳು - ಎಂದರೆ ಅರಣ್ಯದಲ್ಲಿರುವ ಬಳ್ಳಿಗಳಿಂದಾದ ಪೊದೆಗಳು, ಗುಹೆಗಳು-ಎಂದರ್ಥ. ಕಾಡುಜನರು ಈ ಗುಹೆಗಳಲ್ಲಿ ವಾಸಿಸುತ್ತಾರೆ. ಕಿರಾತರೂಪಿಯಾದ ಭಗವಂತನು ಕಾಡುಗಳಲ್ಲಿರುವವನಾದ್ದರಿಂದ ಕಕ್ಷಾಣಾಂಪತಿಯೆಂದು ಇಲ್ಲಿ ಸ್ತುತಿಸಲಾಗಿದೆ. ಮತ್ತು ಮರ, ಪೊದೆ, ಬಳ್ಳಿ ಎಲ್ಲವನ್ನೂ ಈತನೇ ಕಾಪಾಡುವವನಾದ್ದರಿಂದಲೂ ಆ ಹೆಸರು ಹೊಂದುತ್ತದೆ-ಎಂದು ತಿಳಿಯಬೇಕು.

ಭೂಮಿಯನ್ನು ವಿಸ್ತರಿಸುವವನು ಭುವಂತಿಯು. ಕ್ಷೇತ್ರಪತಿ ಎಂದೂ ಇವನನ್ನು ಕರೆಯುವರು. ಭೂಮಿಯ ಆಕಾರವು ಪ್ರತಿಯೊಂದು ಸೃಷ್ಟಿಯಲ್ಲಿಯೂ ಬೇರೆಬೇರೆಯಾಗಿರಬಹುದು. ಈಗ ನಾವು ಕಾಡುಕೊಂಡಿರುವ ಭೂಮಂಡಲವೇ ಸಾವಿರಾರು ವರ್ಷಗಳ ಹಿಂದೆ ಬೇರೆಯ ಆಕಾರದಲ್ಲಿದ್ದಿರಬಹುದೆಂದು ಬಲ್ಲವರು ಊಹಿಸುತ್ತಾರೆ. ಅಂತೂ ಭೂಮಿಯು ಸಂಕೋಚ-ವಿಸ್ತಾರಗಳನ್ನು ಹೊಂದಬಹುದಾದ ವಸ್ತುವಾದ್ದರಿಂದ ಆ ಕ್ರಿಯೆಯನ್ನು ನಿರ್ವಹಿಸುವವನು ಭಗವಂತನೇ. ಆದ್ದರಿಂದ ಭುವಂತಯೇ- ಎಂದು ಹೊಗಳಿದೆ. ವಾರಿವಸ್ಕೃತನೆಂದರೆ ಭಕ್ತರ ರೂಪದಲ್ಲಿರುವವನು-ಎಂದರ್ಥ ವರಿವ ಎಂದರೆ ಪರಿಚರ್ಯೆ. ಅದನ್ನು ಮಾಡುವವರು ವಾರಿವಸ್ಕೃತರು-ಭಕ್ತರು ಎಂದಭಿ

ಪ್ರಾಯ. ಪರಮೇಶ್ವರನು ಸರ್ವಗತನಾಗಿದ್ದರೂ ಅವನ ಸಾಂನಿಧ್ಯವು ಭಕ್ತರಲ್ಲಿ ಅತಿಶಯುವಾಗಿರುವದು: ಹೇಗೆಂದರೆ : ಕಬ್ಬಿಣವು ಬೆಂಕಿಯೊಡನೆ ಸೇರಿದಾಗ ಬರಿಯ ಕಬ್ಬಿಣವಾಗಿರುವದಿಲ್ಲ; ಸುಡುವ ಶಕ್ತಿಯೂ ಅದಕ್ಕೆ ಇರುತ್ತದೆ. ಅದರಂತೆಯೇ ಶಿವಭಕ್ತರೆಂದರೆ ಕೇವಲ ಮನುಷ್ಯಮಾತ್ರರಲ್ಲ. ಅವರಲ್ಲಿ ಶಿವನ ಶಕ್ತಿಯು ತುಂಬಿರುತ್ತದೆ. ಶಿವಭಕ್ತರಿಗೆ ಮಾಡಿದ ಪೂಜೆಯು ಶಿವನಿಗೇ ಮುಟ್ಟುವದು. ಅಶರೀರನಾಗಿರುವ ಶಿವನು ಭಕ್ತರ ಶರೀರವೆಂಬ ಉಪಾಧಿಯನ್ನು ಧರಿಸಿ ತೋರುತ್ತಾನೆ-ಎಂದು ಪುರಾಣಗಳಲ್ಲಿದೆ. ಆದ್ದರಿಂದ ಭಕ್ತರ ರೂಪದಲ್ಲಿ ದರ್ಶನವನ್ನು ಕೊಡುತ್ತಿರುವ ಶಿವನನ್ನು 'ವಾರಿವಸ್ಕೃತ'ನೆಂದು ಇಲ್ಲಿ ಸ್ತುತಿಸಲಾಗಿದೆ. ಓಷಧಿಗಳಿಗೆ ಒಡೆಯನಾದ್ದರಿಂದ ಓಷಧೀನಾಂ ಪತಿಯು. ಹಿಂದೆ ಭುವಂತಯೇ ಎಂದು ಹೇಳಿರುವದರ ವಿವರಣೆಯಿದು ಎಂದೂ ಭಾವಿಸಬಹುದು. ಹೇಗೆಂದರೆ: ಭೂಮಿಯು ತನ್ನೊಳಗೆ ಇಡಲ್ಪಟ್ಟ ಬೀಜವನ್ನು ಮೊಳಕೆಯಾಗಿ ಮಾಡಿ ದೊಡ್ಡ ವೃಕ್ಷಾದಿಗಳ ರೂಪದಿಂದ ಹೊರಚಾಚುತ್ತದೆ. ಇದೇ ವಿಸ್ತಾರವು. ಹೀಗೆ ಅನೇಕ ಸಸ್ಯಗಳ ರೂಪದಿಂದ ಹರಡಿಕೊಂಡಿರುವ ಭೂಮಿಯು ಎಲ್ಲಾ ಓಷಧಿಗಳಿಗೂ ತಾಯಿಯಾಗಿದೆ. ಈ ಓಷಧಿಗಳನ್ನು (ಸಸ್ಯಗಳನ್ನು) ಉಪಜೀವಿಸಿಕೊಂಡೇ ಎಲ್ಲಾ ಪ್ರಾಣಿಗಳೂ ಬದುಕಿರುತ್ತವೆ. ಪ್ರಾಣಿಗಳು ತಿನ್ನುವ ಅನ್ನವು ಹೀಗೆ ಭೂಮಿಯ ಆಧಾರದಿಂದ ಪರಮೇಶ್ವರನ ಆಳ್ವಿಕೆಗೆ ಒಳಪಟ್ಟೇ ಸೃಷ್ಟಿಯಾಗುವದು. ಇಂಥ ಅನ್ನಪತಿಯಾದ ದೇವನನ್ನೇ ಇಲ್ಲಿ ಓಷಧೀನಾಂ ಪತಯೇ-ಎಂದು ಹೊಗಳಿದೆ. ಇಲ್ಲಿ ಹಿಂದು ಮುಂದಿನ ಮುಂದಿನ ಮಂತ್ರಗಳನ್ನು ಒಟ್ಟುಗೂಡಿಸಿದರೆ ಈ ಅಭಿಪ್ರಾಯವು ಹೊರಡುತ್ತದೆ. ಭಗವಂತನು ಭಕ್ತರ ರೂಪದಿಂದ ಇದ್ದುಕೊಂಡು ಹವಿಸ್ಸುಗಳನ್ನು ಸ್ವೀಕರಿಸುವನು. ಆದ್ದರಿಂದಲೇ ಬ್ರಾಹ್ಮಣಮುಖದಲ್ಲಿ ಅರ್ಪಿಸಿದ ದ್ರವ್ಯವು ಅವನಿಗೆ ಪ್ರಿಯವಾಗುವದು. ಅಗ್ನಿಯಲ್ಲಿ ಕೊಡುವ ಆಹುತಿಗಿಂತಲೂ ಇದು ಶ್ರೇಷ್ಠವಾದದ್ದು. ಯಜ್ಞಗಳಲ್ಲಿಯೂ ಹೋಮದೊಡನೆ ಅನ್ನದಾನವನ್ನೇ ಧಾರಾಳವಾಗಿ ಮಾಡಲು ತಿಳಿಸಿದೆ. ಅನ್ನದಾನವಿಲ್ಲದ ಯಜ್ಞವು ತಾಮಸವು. ಹೀಗೆ ಭಕ್ತರ ಮುಖದಿಂದ ಹವಿಸ್ಸನ್ನು ಸ್ವೀಕರಿಸುವ ಮಹಾದೇವನು ಪ್ರತ್ಯಕ್ಷದೇವತೆಯು. 'ಯಾವನು ರುದ್ರನನ್ನು ಮನಸ್ಸಿನಲ್ಲಿ ನೆನೆಯುತ್ತಾ ನಾಲಗೆಯಲ್ಲಿ ಅನ್ನವನ್ನು ಸ್ವೀಕರಿಸುವನೋ ಅವನು ಅಮೃತವನ್ನೇ ಊಟಮಾಡಿದವನಾಗುವನು. ಹಾಗಿಲ್ಲದೆ ಬರಿಯ ಅನ್ನವನ್ನು ತಿನ್ನುವವನು ಅಮೇಧ್ಯ

ವನ್ನೇ ತಿಂದವನಾಗುವನು'-ಎಂದೂ ಪುರಾಣಗಳಲ್ಲಿದೆ. ಆದ್ದರಿಂದ ಭುವಂತನೂ ವಾರಿವಸ್ಕೃತನೂ ಓಷಧಿಗಳ ಪತಿಯೂ ಆದ ರುದ್ರನು ಮೇಲೆ ತಿಳಿಸಿದಂತೆ ಸ್ತುತ್ಯನಾಗಿರುವನು-ಎಂದು ಈ ಮಂತ್ರದ ಅಭಿಪ್ರಾಯ.

ಉಚ್ಚೈಃ ಘೋಷನೆಂದರೆ ಯುದ್ಧವೇ ಮುಂತಾದವುಗಳಲ್ಲಿ ಗಟ್ಟಿಯಾಗಿ ಸಿಂಹನಾದಮಾಡುವವನು- ಎಂದರ್ಥ. ಮಾತನ್ನು ಎಲ್ಲರಿಗೂ ಮುಟ್ಟುವಂತೆ-ಎಂದರೆ ದೊಡ್ಡದೊಡ್ಡ ಸಭೆಗಳಲ್ಲಿ ಸರ್ವರಿಗೂ ಕೇಳುವಂತೆ ಹೇಳಲು ದೊಡ್ಡ ಧ್ವನಿಯು ಬೇಕು. ಈಗ ಲೌಡ್‌ಸ್ಪೀಕರುಗಳು ಬಳಕೆಯಲ್ಲಿರುವದರಿಂದ ಹೆಚ್ಚು ಕಷ್ಟವಿಲ್ಲ. ಆದರೆ ಹಿಂದಿನ ಕಾಲಕ್ಕೆ ಈ ಧ್ವನಿಘೋಷವು ತುಂಬ ಅಗತ್ಯವಾಗಿತ್ತು. ಹಿಂದೆ ಎಷ್ಟೋಜನ ಭಾಷಣಕಾರರು ತಮ್ಮ ಧ್ವನಿಯನ್ನು ಎತ್ತರಿಸಿಕೊಳ್ಳಲು ಸಮುದ್ರದ ದಂಡೆಗೆ ಹೋಗಿ ಸಮುದ್ರಕ್ಕೆ ಎದುರಾಗಿ ನಿಂತು ಕಿರುಚಿಕೊಳ್ಳುತ್ತಿದ್ದರಂತೆ. ಪರಮೇಶ್ವರನ ಧ್ವನಿಯು ಎಂಥದ್ದೆಂದರೆ ಅವನು ಘೋಷಣೆಮಾಡಿದನೆಂದರೆ ಜಗತ್ತೆಲ್ಲವೂ ನಡುಗಿಹೋಗುವದು. ರಾಕ್ಷಸರೆಲ್ಲ ಚದುರಿಹೋಗುವರು. ರಾಕ್ಷಸಸ್ತ್ರೀಯರ ಗರ್ಭಗಳು ನಿರ್ಭೇದವಾಗುವವು. ಯುದ್ಧದಲ್ಲಿ ಶತ್ರುಗಳು ಹಿಮ್ಮೆಟ್ಟುವರು. ಇಂಥ ಉಚ್ಚೈರ್ಘೋಷನು ಪರಮೇಶ್ವರನು. ಇನ್ನು ಶತ್ರುಗಳನ್ನು ಹಿಂಸಿಸಿ ಅಳುವಂತೆಯೂ ಕಿರುಚಿಕೊಳ್ಳುವಂತೆಯೂ ಮಾಡುವವನಾದ್ದರಿಂದ ಆಕ್ರಂದಯತೇ ಎಂದು ಸ್ತುತಿಸಿವೆ. ಪತ್ತಿಗಳಿಗೆ ಎಂದರೆ ಪದಾತಿಗಳಿಗೆ ಒಡೆಯನಾದ್ದರಿಂದ ಪತ್ತೀನಾಂ ಪತಿಯು. ಪರಮೇಶ್ವರನು ತನ್ನ ಕೈಗಳಲ್ಲಿ ಶತ್ರುಸಂಹಾರಕ್ಕಾಗಿ ಆಯುಧಗಳನ್ನು ಧರಿಸಿರುತ್ತಾನಾದರೂ ಅವು ಕೇವಲ ಅಲಂಕಾರಕ್ಕಾಗಿ ಮಾತ್ರ-ಎಂದು ತಿಳಿಯಬೇಕು. ಏಕೆಂದರೆ ಅವನ ಅಟ್ಟಹಾಸದ ನಗೆ, ನೋಟ, ಘೋಷಣೆ, ಉಗುರುಗಳೇ ಶತ್ರುನಾಶಕ್ಕೆ ಸಾಕಾಗಿವೆ. ಅಷ್ಟರಿಂದಲೇ ಕಾಮ, ಯಮ-ಮುಂತಾದವರನ್ನೆಲ್ಲ ಸಂಹರಿಸಿದ ಮಹಾವೀರನು ಅವನು-ಎಂದರ್ಥ.

ಕೃತ್ಸ್ನವೀತನಿಗೆ ನಮಸ್ಕಾರ ಎಂದು ಮತ್ತೆ ಸ್ತುತಿಸಲಾಗಿದೆ. ಕೃತ್ಸ್ನ ಎಂದರೆ ಪೂರ್ಣ ಎಂದರ್ಥ. ವೀತ-ಎಂದರೆ ವ್ಯಾಪ್ತ ಎಂದರ್ಥ. ಇಡಿಯ ಜಗತ್ತನ್ನೆಲ್ಲ ತನ್ನ ಅಂತರ್ಯಾಮಿರೂಪದಿಂದ ವ್ಯಾಪಿಸಿಕೊಂಡಿರುವವನು ಎಂದು ಅಭಿಪ್ರಾಯ. ಬೃಹದಾರಣ್ಯಕೋಪನಿಷತ್ತಿನ ಅಂತರ್ಯಾಮಿ

ಬ್ರಾಹ್ಮಣಭಾಗವನ್ನೂ ಇಲ್ಲಿ ಅನುಸಂಧಾನಮಾಡಿಕೊಳ್ಳಬೇಕು. ಒಂದೊಂದು ವಸ್ತುವನ್ನೂ ಒಳಹೊಕ್ಕು ಹೊರಗೂ ಒಳಗೂ ವ್ಯಾಪಿಸಿಕೊಂಡು ಅದರ ತಿರುಳಾಗಿರುವವನು ಈ ಪರಮೇಶ್ವರನು. ಈತನ ಇರವು ಇಲ್ಲದೆ ಯಾವ ವಸ್ತುವೂ ಇರಲಾರದು. ಹೇಗೆ ದಾರದಲ್ಲಿ ಮಣಿಗಳು ಪೋಣಿಸಲ್ಪಟ್ಟಂತೆ ಮಹಾದೇವನಲ್ಲಿ ಇಡಿಯ ಪ್ರಪಂಚವೆಲ್ಲವೂ ಹಾಸುಹೊಕ್ಕಾಗಿ ಹೆಣೆದುಕೊಂಡಿರುವದು. ಇದೇ ಭಗವಂತನ ಕೃತ್ಸ್ನವೀತತ್ವವು. ಧಾವತೇ ನಮಃ ಎಂದರೆ ಭಕ್ತರನ್ನು ಕಾಪಾಡಲು ಅವರ ಹಿಂದೆಯೇ ಓಡುವವನು—ಎಂದರ್ಥ. ಕರುವಿನ ಹಿಂದೆ ಹಸುವು ಓಡುವಂತೆ ಭಕ್ತರ ಹಿಂದೆ ಭಗವಂತನು ಓಡುತ್ತಿರುವನು. ಯಾವಾಗಲೂ ಅವರನ್ನು ಕಾಪಾಡುವ ವಿಷಯದಲ್ಲಿ ಎಚ್ಚರನಾಗಿರುವನು-ಎಂದಭಿಪ್ರಾಯ. ಸರ್ವವ್ಯಾಪಕನಾದ್ದರಿಂದಲೇ ಭಕ್ತರು ಎಲ್ಲಿಯೇ ಇರಲಿ, ಅಲ್ಲಲ್ಲಿಗೇ ಹೋಗಲು ಭಗವಂತನಿಗೆ ಸಾಧ್ಯವಾಗಿರುತ್ತದೆ.

**ಸತ್ವನಾಂ ಪತಯೇ ನಮಃ**—ಸಾತ್ವಿಕರುಗಳಿಗೆ ಒಡೆಯನಾದ ದೇವನಿಗೆ ನಮಸ್ಕಾರ. ಸೃಷ್ಟಿಯಲ್ಲಿ ಸಾತ್ತ್ವಿಕ, ರಾಜಸ, ತಾಮಸ-ಎಂಬ ವಿಭಾಗದಿಂದ ಜೀವರುಗಳು ಕಂಡುಬರುತ್ತಾರೆ. ಇವರುಗಳಲ್ಲಿ ಸಾತ್ತ್ವಿಕ ಪಕ್ಷಪಾತಿಯು ಪರಮೇಶ್ವರನು-ಎಂದು ಶ್ರುತಿಪುರಾಣಗಳಲ್ಲಿ ವರ್ಣಿಸಿರುತ್ತದೆ. ಹಾಗಾದರೆ ರಾಜಸತಾಮಸರನ್ನು ಕಂಡರೆ ಭಗವಂತನಿಗೆ ದ್ವೇಷವೆ ? ಅವನು ಎಲ್ಲರಲ್ಲಿಯೂ ಸಮನಾಗಿರಬೇಡವೆ ? ಎಲ್ಲರೂ ಅವನಿಂದಲೇ ಹುಟ್ಟಿದವರಲ್ಲವೆ ? ಈ ಪಕ್ಷಪಾತಧೋರಣೆಯು ಸರ್ವಶಕ್ತನಾದ ದಯಾಳುವಾದ ಅವನಿಗೆ ಭೂಷಣವೆ ? ಎಂದು ಕೇಳಬಹುದು. ಹಾಗಲ್ಲ. ರಾಜತಾಮಸರೆಂದು ನಾವು ಭಾವಿಸಿರುವವರನ್ನೂ ಪರಮೇಶ್ವರನು ತನ್ನ ದರ್ಶನ, ಸ್ಪರ್ಶನಾದಿಗಳಿಂದ ಸಾತ್ವಿಕರನ್ನಾಗಿಯೇ ಮಾಡಿಬಿಡುತ್ತಾನೆ. ಪರಮೇಶ್ವರನಿಗೆ ಶತ್ರುವಾಗಿದ್ದವನುಕೂಡ ಜ್ಞಾನೋದಯವಾದಾಗ ಅವನ ಭಕ್ತನೇ ಆದನೆಂದು ಪುರಾಣಗಳಲ್ಲಿದೆಯಷ್ಟೆ ! ಅಂಥವನ ಆತ್ಮವು ತೇಜೋರೂಪದಿಂದ ಭಗವಂತನಲ್ಲಿ ಐಕ್ಯವಾಯಿತೆಂದೂ ಕಥೆಗಳಲ್ಲಿ ತಿಳಿಸಿರುತ್ತದೆ. ಆದ್ದರಿಂದ ಪರಮೇಶ್ವರನ ದೃಷ್ಟಿಯಿಂದ ನೋಡಿದಾಗ ಎಲ್ಲಾ ಜೀವರುಗಳೂ ಸಾತ್ತ್ವಿಕರೇ ಆಗಿರುವರು. ಎಲ್ಲರೂ ಸಾತ್ತ್ವಿಕರೇ ಆದಾಗ ಆತನು 'ಸತ್ವನಾಂ ಪತಿ'ಯಲ್ಲದೆ ಮತ್ತೆ ಏನಾಗಲು ಸಾಧ್ಯ ? ಹೀಗೆ ಶ್ರುತಿಯು ಭಗವಂತನ ದಿವ್ಯಮಹಿಮೆಯನ್ನು ಕೊಂಡಾಡಿರುತ್ತದೆ ಎಂದು ತಿಳಿಯಬೇಕು.

———

## ೧೩. ನಮಃ ಸಹಮಾನಾಯ

ಈಗ ಮೂರನೆಯ ಅನುವಾಕವನ್ನು ವಿಚಾರಮಾಡಬೇಕಾಗಿದೆ :

ನಮಃ ಸಹಮಾನಾಯ ನಿವ್ಯಾಧಿನ ಆವ್ಯಾಧಿನೀನಾಂ ಪತಯೇ ನಮೋ ನಮಃ ಕಕುಭಾಯ ನಿಷಂಗಿಣೇ ಸ್ತೇನಾನಾಂ ಪತಯೇ ನಮೋ ನಮೋ ನಿಷಂಗಿಣ ಇಷುಧಿಮತೇ ತಸ್ಕರಾಣಾಂ ಪತಯೇ ನಮೋ ನಮೋ ವಂಚತೇ ಪರಿವಂಚತೇ ಸ್ತಾಯೂನಾಂ ಪತಯೇ ನಮೋ ನಮೋ ನಿಚೇರವೇ ಪರಿಚರಾಯಾರಣ್ಯಾನಾಂ ಪತಯೇ ನಮಃ ||

"ಸಹಮಾನನೂ ನಿವ್ಯಾಧಿಯೂ ಆವ್ಯಾಧಿನಿಗಳ ಪತಿಯೂ ಕಕುಭನೂ ನಿಷಂಗಿಯೂ ಕಳ್ಳರ ಒಡೆಯನೂ, ನಿಷಂಗಿಯೂ, ಇಷುಧಿವಂತನೂ ತಸ್ಕರ ಪತಿಯೂ ಆಗಿರುವ, ವಂಚನೆ ಪರಿವಂಚನೆಗಳನ್ನು ಮಾಡುವ ಸ್ತಾಯುಗಳ ಪತಿಯೂ ಆದ, ನಿಚೇರುವೂ ಪರಿಚರನೂ ಅರಣ್ಯಕರ ಪತಿಯೂ ಆದವನಿಗೆ ನಮಸ್ಕಾರ!"

ಈ ಮಂತ್ರಗಳಲ್ಲಿ ರಾಜಸತಾಮಸಪ್ರಕೃತಿಯ ಜನರೆಲ್ಲರಲ್ಲಿಯೂ ಅಂತರ್ಯಾಮಿಯಾಗಿದ್ದುಕೊಂಡಿರುವವನು ರುದ್ರನೇ-ಎಂದು ತಿಳಿಸಲಾಗಿದೆ. ರುದ್ರನು ಸರ್ವಾತ್ಮಕನೆಂದಮೇಲೆ ಯಾವದೊಂದು ಶರೀರವನ್ನಾಗಲಿ, ಉಪಾಧಿಯನ್ನಾಗಲಿ, ಬಿಡದೆ ಎಲ್ಲದರಲ್ಲಿಯೂ ವ್ಯಾಪಿಸಿಕೊಂಡಿರಬೇಕಷ್ಟೆ ! ಆದ್ದರಿಂದ ಇಲ್ಲಿ ಸ್ತುತಿಮಾಡಿರುವ ಬಗೆಯನ್ನು ಸರಿಯಾದ ರೀತಿಯಿಂದ ಸಮನ್ವಯಮಾಡಿಕೊಳ್ಳಬೇಕು. 'ಭಗವಂತನು ಸರ್ವೇಶ್ವರನು'- ಎಂಬ ಶಬ್ದಕ್ಕೆ ಸಂಕೋಚವಿಲ್ಲದೆ ಎಲ್ಲಾ ಜೀವರುಗಳಿಗೂ ಒಡೆಯನು'- ಎಂಬ ಅಭಿಪ್ರಾಯವನ್ನು ನೆನಪಿಟ್ಟುಕೊಂಡು ಅರ್ಥಮಾಡಿಕೊಳ್ಳಬೇಕು.

ಈಗ ಮೊದಲನೆಯ ವಿಶೇಷಣವನ್ನು ವಿಚಾರಮಾಡೋಣ. ಸಹಮಾನ ನೆಂದರೆ ಶತ್ರುಗಳನ್ನು ಹಿಮ್ಮೆಟ್ಟಿಸುವವನು-ಎಂದು ಒಂದರ್ಥ. ಭಗವಂತನ ವಿಷಯದಲ್ಲಿ ಭಕ್ತರುಗಳು ಮಾಡಬಹುದಾದ ಅಪರಾಧಗಳನ್ನು ಕ್ಷಮಿಸುವವ ನು-ಎಂದು ಮತ್ತೊಂದು ಅರ್ಥ. ಆದರೆ ಇದೇ ಭಗವಂತನೇ ನಿವ್ಯಾಧಿಯು

ಎಂದರೆ ಚೆನ್ನಾಗಿ ಹೊಡೆಯುವವನು; ಮತ್ತು ಸುತ್ತಲೂ ಹೊಡೆಯುವ ಆವ್ಯಾಧಿಗಳ ಪತಿಯು. ಹೀಗೆ ಬಾಣಗಳಿಂದ ಎಲ್ಲೆಲ್ಲೂ ಹೊಡೆಯುವ ಮತ್ತು ಚೆನ್ನಾಗಿ ಏಟುಬೀಳುವಂತೆ ಮಾಡುವ ಬಿಲ್ಲುಗಾರನಾದ್ದರಿಂದ ಭಗವಂತನ ವಿಷಯಕ್ಕೆ ಎಲ್ಲರೂ ಹೆದರಬೇಕಾಯಿತು. ಏಕೆಂದರೆ ಎಲ್ಲಾ ಪ್ರಾಣಿಗಳೂ ಒಂದಲ್ಲ, ಒಂದುರೀತಿಯಿಂದ ಪಾಪವನ್ನು ಮಾಡುತ್ತಾ ಭಗವದಪರಾಧಿಗಳೇ ಆಗಿರುತ್ತಾರೆ. ಆದ್ದರಿಂದಲೇ ಸಹಮಾನನೆಂದು ತಿಳಿಸಿದೆ. ಜನರ ಎಷ್ಟೋ ಅಪರಾಧಗಳನ್ನು ಭಗವಂತನು ಸಹಿಸಿಕೊಂಡೇಬಿಡುತ್ತಾನೆ. ಆದ್ದರಿಂದಲೇ ಇಷ್ಟರಮಟ್ಟಿಗಾದರೂ ಪ್ರಪಂಚವು ಬದುಕಿರಲು ಸಾಧ್ಯವಾಗಿದೆ. ಎಲ್ಲ ತಪ್ಪಿಗೂ ಎಲ್ಲರಿಗೂ ದೇವರು ಶಿಕ್ಷೆಯನ್ನೇ ಕೊಟ್ಟುಬಿಟ್ಟದ್ದರೆ ಯಾರೂ ಈವರೆಗೆ ಬದುಕಿರಲು ಸಾಧ್ಯವಾಗುತ್ತಿರಲಿಲ್ಲ–ಎಂದು ಭಾವ.

ಇನ್ನು ಕಕುಭನಿಗೆ ನಮಸ್ಕಾರ, ಎಂದರೆ ದಿಕ್ಕುಗಳಿಗೆ ಹಾಗೂ ಅವುಗಳ ಒಡೆಯರಾದ ಇಂದ್ರಾದಿಗಳ ರೂಪದಲ್ಲಿರುವ ದೇವನಿಗೆ ನಮಸ್ಕಾರ. ಮತ್ತು ಖಡ್ಗವನ್ನು ಧರಿಸಿರುವ ನಿಷಂಗನಿಗೆ ನಮಸ್ಕಾರ. ಮುಂದಿನ ವಾಕ್ಯದಲ್ಲಿರುವ ನಿಷಂಗವೆಂಬ ಶಬ್ದಕ್ಕೆ ಧನುಸ್ಸಿನಲ್ಲಿ ಹೂಡಲು ಕೈಯಲ್ಲಿ ಹಿಡಿದಿರುವ ಬಾಣವೆಂದು ಹೆಸರು. ಬೆನ್ನಿಗೆ ಕಟ್ಟಿಕೊಂಡಿರುವ ಬಾಣದ ಚೀಲಕ್ಕೆ ಇಷುಧಿಯೆಂದೂ ಹೆಸರು. ಇವೆರಡರಿಂದಲೂ ಕೂಡಿರುವ ದೇವನಿಗೆ ನಮಸ್ಕಾರ ಎಂದು ಸ್ತೋತ್ರಮಾಡಿದೆ.

ಇನ್ನು ಸ್ತೇನರ ಪತಿಯಾದವನಿಗೆ, ತಸ್ಕರರ ಪತಿಯಾದವನಿಗೆ, ವಂಚನೆ, ಪರಿವಂಚನೆಗಳನ್ನು ಮಾಡುವ ಸ್ತಾಯುಗಳ ಪತಿಯಾದವನಿಗೆ ನಮಸ್ಕಾರ– ಎಂಬಿದರ ಅರ್ಥವನ್ನು ವಿಚಾರಮಾಡೋಣ. ಮತ್ತೊಬ್ಬರಿಗೆ ಕಾಣದಂತೆ ಗುಪ್ತವಾಗಿ ಕಳ್ಳತನವನ್ನು ಮಾಡುವವರಿಗೆ ಸ್ತೇನರೆಂದು ಹೆಸರು. ಎಲ್ಲರಿಗೂ ಕಾಣುವಂತೆಯೇ ದರೋಡೆಮಾಡುವವರಿಗೆ ತಸ್ಕರರೆಂದು ಹೆಸರು. ನಮ್ಮವರಂತೆಯೇ ನಟಿಸುತ್ತಾ ಬೇರೆಯವರಿಗೆ ಗೊತ್ತಾಗದಂತೆ (ವೇಷವನ್ನು ಮರೆಯಿಸಿಕೊಂಡು) ಇದ್ದುಕೊಂಡು ಸಮಯವನ್ನು ಕಾದು ಹಣವನ್ನು ಅಪಹರಿಸುವವರು ಸ್ತಾಯುಗಳು. ಸ್ತಾಯುಗಳಲ್ಲಿ ಯಜಮಾನನಿಗೆ ಆಪ್ತನಾಗಿದ್ದುಕೊಂಡು ಅವನ ವ್ಯಾಪಾರವ್ಯವಹಾರಗಳಲ್ಲಿ ಕೈಹಾಕಿ ಎಲ್ಲಿಯೋ ಒಂದು ಕಡೆ ಆತನಿಗೆ ತಿಳಿಯದಂತೆ ದುಡ್ಡು ಹೊಡೆಯುವವನು ವಂಚಕನು. ಎಲ್ಲಾ ವ್ಯವ

ಹಾರದಲ್ಲಿಯೂ ಬಚ್ಚಿಟ್ಟುಕೊಂಡು ಮೋಸಮಾಡುವವನು ಪರಿವಂಚಕನು. ಇಂಥ ವಂಚನಪರಿವಂಚನಚತುರರಾದ ಸ್ತಾಯುಗಳ ಗುಂಪಿಗೆ ಪತಿಯಾದ ಪರಮೇಶ್ವರನಿಗೆ ನಮಸ್ಕಾರ ಎಂಬ ಅಕ್ಷರಾರ್ಥವಾಗುವದು.

ಆದರೆ ಇಂಥವರನ್ನೆಲ್ಲ ಮಹಾದೇವನ ವಿಭೂತಿಗಳೆಂದು ಸ್ತೋತ್ರಮಾಡಬಹುದೆ? ಅಥವಾ ಈ ಕುತ್ಸಿತವಿಶೇಷಣಗಳಿಂದ ಸರ್ವಪೂಜ್ಯನಾದ ಭಗವಂತನನ್ನು ಹೊಗಳಬಹುದೆ? ಎಂದು ಎಲ್ಲರಿಗೂ ಸಂಶಯವು ಉಂಟಾಗಬಹುದಾಗಿದೆ. ಆದರೆ ಭಗವಂತನು ಒಳ್ಳೆಯವರಿಗೆ ಒಳ್ಳೆಯವನೂ ಕೆಟ್ಟವರಿಗೆ ಕೆಟ್ಟವನೂ ಆಗಿಯೇ ವ್ಯವಹಾರದಲ್ಲಿ ತಾನೂ ಲೀಲೆಯನ್ನು ತೋರಿಸುವವನಲ್ಲವೆ? ರುಕ್ಮಿಣೀಕಲ್ಯಾಣದಲ್ಲಿ ಆಕೆಯ ಪ್ರಾರ್ಥನೆಯಂತೆ ಸಮಯಕ್ಕೆ ಸರಿಯಾಗಿ ಬಂದು ಅವಳನ್ನು ಹಾರಿಸಿಕೊಂಡು ಹೋಗಲಿಲ್ಲವೆ? ವಾಲಿಯನ್ನು ಸಂಹಾರ ಮಾಡುವಾಗ ಗುಪ್ತವಾಗಿ ನಿಂತು ಬಾಣವನ್ನು ಹೊಡೆಯಲಿಲ್ಲವೆ? ಬಲಿರಾಜನಿಗೆ ವಾಮನವೇಷದಿಂದ ತೋರಿಕೊಂಡು ಅವನ ಸರ್ವಸ್ವವನ್ನೂ ಅಪಹಾರ ಮಾಡಲಿಲ್ಲವೆ? ಜರಾಸಂಧ, ಜಯದ್ರಥ, ಕರ್ಣಾದಿಗಳ ವಧೆಯಲ್ಲಿ ಸಾಕಷ್ಟು ವಂಚನೆಮಾಡಲಿಲ್ಲವೆ? ಇತ್ಯಾದಿ. ಹೀಗೆ ದುಷ್ಟರಿಗೆ ದುಷ್ಟನಾಗಿಯೇ ತೋರಿಕೊಂಡು ಶಿಕ್ಷಿಸುವ ಭಗವಂತನು ಯಾವ ವಂಚಕರಿಗೂ ಕಡಿಮೆಯವನಲ್ಲ. ಅವನನ್ನು ದ್ವೇಷಮಾಡುವವರಿಗೆ ಹಾಗೆಯೇ, ವಂಚಕರ ಹಾಗೂ ತಸ್ಕರರ ರೂಪದಿಂದ ಬಂದು ತಕ್ಕ ಶಾಸ್ತಿಯನ್ನು ಮಾಡುತ್ತಾನೆಂಬುದೇ ಇಲ್ಲಿ ಅಭಿಪ್ರಾಯವು. ಅಥವಾ 'ಯಸ್ಯಾನುಗ್ರಹಮಿಚ್ಛಾಮಿ' ಎಂಬ ನ್ಯಾಯದಂತೆ ಪುರಂದರದಾಸರಿಗೆ ಬ್ರಾಹ್ಮಣರೂಪದಿಂದ ಬಂದು ಬುದ್ಧಿ ಕಲಿಸಿದಂತೆ, ಮತ್ತು ಗೋಪಿಯರನ್ನು ತನ್ನ ಲೀಲೆಯಿಂದ ಆಟವಾಡಿಸಿದಂತೆ ಜಗತ್ತನ್ನೆಲ್ಲ ವಂಚನಾದಿರೂಪಲೀಲೆಯಿಂದ ವ್ಯಾಪಿಸಿರುತ್ತಾನೆ–ಎಂದೂ ಅರ್ಥ ಮಾಡಹುದು; ಅಥವಾ ಭಕ್ತರ ಪಾಪಗಳನ್ನು ಕದ್ದು ದರೋಡೆಮಾಡಿ ಅವರನ್ನು ಶುದ್ಧಿಗೊಳಿಸಿ ಉಪಕಾರಮಾಡುತ್ತಾನೆಂದೂ ಗೌಣಾರ್ಥವನ್ನು ಕಲ್ಪಿಸಬಹುದು. ಯಾರುಯಾರು ಹೇಗೆಹೇಗೆ ಅವನನ್ನು ಬಳಿಸಾರುವರೋ ಹಾಗೆ ಹಾಗೆ ಅನುಗ್ರಹಿಸುತ್ತಾನೆ–ಎಂಬ ಅಭಿಪ್ರಾಯವು ಇಲ್ಲಿ ಅಡಗಿರುತ್ತದೆ.

ಇನ್ನು ನಿಚೇರುವೆಂದರೆ ಕಾಡಿನಲ್ಲಿ ಸಂಚರಿಸುತ್ತಾ ಕಳ್ಳತನಮಾಡುವವನು. ಪರಿಚರನೆಂದರೆ ಹತ್ತಿರವೇ ಸೇವೆಮಾಡಿಕೊಂಡಿದ್ದು ಧನವನ್ನು

ಅಪಹರಿಸುವವನು. ಅರಣ್ಯನೆಂದರೆ ಕಾಡಿನಲ್ಲಿರಬಹುದಾದ ದರೋಡೆಯವನು. ಹೀಗೆ ಇಂಥವರಿಗೆಲ್ಲ ಪತಿಯು ಪರಮೇಶ್ವರನು-ಎಂದರ್ಥ. ಇಲ್ಲಿಯೂ ಹಿಂದಿನಂತೆಯೇ ಲೀಲಾವೇಷಧಾರಿಯಾಗಿ ಕಿರಾತರೂಪದಿಂದ ಹಾಗೂ ವ್ಯಾಧನ ರೂಪದಿಂದ ಸಂಚರಿಸುವ ಪರಮೇಶ್ವರನಿಗೆ ನಮಸ್ಕಾರವೆಂದರ್ಥ.

ವೇದವು ಭಗವಂತನ ಮಹಿಮೆಯನ್ನು ಹೇಳಹೊರಟಿರುವದರಿಂದ ಅದಕ್ಕೆ ಎಲ್ಲರೂ ಒಂದೇರೀತಿಯಲ್ಲಿ ವಿಷಯರಾಗಿರುತ್ತಾರೆ. ಲೋಕದಲ್ಲಿ ಕಣ್ಣಿಗೆ ಗೋಚರವಾಗುವ ಯಾವ ರೂಪವಾಗಲಿ, ಅದೆಲ್ಲವೂ ಪರಮೇಶ್ವರನ ರೂಪವೇ-ಎಂಬುದೇ ಇಲ್ಲಿ ಮುಖ್ಯ ತಾತ್ಪರ್ಯ. ಬ್ರಾಹ್ಮಣರು ಈ ವೇದವನ್ನು ಅಧ್ಯಯನಮಾಡುತ್ತಾ ರುದ್ರನ ಪೂಜೆಯನ್ನು ಮಾಡುವಲ್ಲಿ ಅವರ ಭಾವನೆಗಳು ಹೇಗಿದ್ದಿರಬಹುದೆಂಬುದನ್ನು ಈಗ ತಿಳಿಯಬಹುದಾಗಿದೆ. ಈಗ ನಾವು ಹೆಸರಿಸುವ ಹರಿಜನರು, ಗಿರಿಜನರು, ಕಳ್ಳಕಾಕರು, ಢಕಾಯಿತರು-ಮುಂತಾದವರೆಲ್ಲರೂ ಮೂಲರೂಪದಿಂದ ಭಗವತ್ ಸ್ವರೂಪರೇ; 'ಬ್ರಹ್ಮ ದಾಶಾಃ ಬ್ರಹ್ಮ ದಾಸಾಃ ಬ್ರಹ್ಮೈವೇಮೇ ಕಿತವಾಃ' (ಬೆಸ್ತರು ಬ್ರಹ್ಮವು. ಜೀತದಾಳುಗಳು ಬ್ರಹ್ಮರು. ಧೂರ್ತರೂ ಬ್ರಹ್ಮರೇ) ಎಂದು ಇನ್ನೊಂದು ಶ್ರುತಿಯೂ ಹೇಳುತ್ತಿದೆ. ನಿಜವಾಗಿ ಅವರುಗಳ ಆತ್ಮನು ಶಿವನೇ-ಎಂಬ ನಿಶ್ಚಯಬುದ್ಧಿಯುಳ್ಳವನೇ ಬ್ರಾಹ್ಮಣನು-ಎಂದರ್ಥವಾಯಿತಲ್ಲವೆ ? ಸಮಬುದ್ಧಿಯುಳ್ಳವನೇ ಪಂಡಿತನಲ್ಲವೆ ? ಇಂಥ ಅಧ್ಯಾತ್ಮಜ್ಞಾನವು ಎಂದಿಗಾದರೂ ಮತಧರ್ಮವೆನಿಸೀತೆ ? ಒಂದುವೇಳೆ ಮತವೆಂದರೂ ಅದು ವಿಶ್ವಕ್ಕೆಲ್ಲ ಏಕರೂಪವಾಗಿರುವ ಸತ್ಯಮತವಲ್ಲವೆ ? ಅದರ ಧರ್ಮವು ವಿಶ್ವವ್ಯಾಪಕಧರ್ಮವಲ್ಲವೆ ? ಹೀಗೆ ಸನಾತನಧರ್ಮವು ತಾನೊಂದೇ ಬಗೆಬಗೆಯಾಗಿ ತೋರಿಕೊಂಡು ಇಡಿಯ ಪ್ರಪಂಚವನ್ನೆಲ್ಲ ತನ್ನೊಳಗೇ ಅಡಕಮಾಡಿಕೊಂಡಿದೆ-ಎಂಬುದು ಈ ವಿವರಣೆಯಿಂದ ಸಿದ್ಧವಾಯಿತು.

---

## ೧೪. ನಮಃ ಸೃಕಾವಿಭ್ಯಃ

ರುದ್ರಾಧ್ಯಾಯದ ಮೂರನೆಯ ಅನುವಾಕದ ಉಳಿದ ಮಂತ್ರಭಾಗವನ್ನು ಈಗ ವಿಚಾರಿಸೋಣ.

ನಮಃ ಸೃಕಾವಿಭ್ಯೋ ಜಿಘಾಂಗ್ಂಸದ್ಭ್ಯೋ ಮುಷ್ಣತಾಂ ಪತಯೇ ನಮೋ ನಮೋಽಸಿಮದ್ಭ್ಯೋ ನಕ್ತಂಚರದ್ಭ್ಯಃ ಪ್ರಕೃನ್ತಾನಾಂ ಪತಯೇ ನಮೋ ನಮ ಉಷ್ಣೀಷಿಣೇ ಗಿರಿಚರಾಯ ಕುಲುಂಚಾನಾಂ ಪತಯೇ ನಮಃ ||

"ಸೃಕಾವಿಗಳೂ ಜಿಘಾಂಸರೂ, ಕದಿಯುವವರ ಪತಿಯೂ ಖಡ್ಗಧಾರಿಗಳೂ ರಾತ್ರಿಯಲ್ಲಿ ಸಂಚರಿಸುವವರೂ ಪ್ರಕೃಂತರ ಪತಿಯೂ, ಉಷ್ಣೀಷಿಯೂ, ಬೆಟ್ಟಗಳಲ್ಲಿ ತಿರುಗುವವನೂ ಕುಲುಂಚರ ಪತಿಯೂ ಆದವನಿಗೆ ನಮಸ್ಕಾರ!"

ಪರಮೇಶ್ವರನು ಸರ್ವಾತ್ಮಕನೆಂಬುದನ್ನು ಮತ್ತೊಮ್ಮೆ ತಿಳಿಸುವದಕ್ಕಾಗಿ ಯಾವಯಾವ ದುಷ್ಟವಾದ ಉಪಾಧಿಗಳಲ್ಲಿ ನಮಗೆ ಭಗವದ್ಭಾವನೆಯು ಉಂಟಾಗುವದು ಕಷ್ಟವೋ ಅಂಥವುಗಳನ್ನೇ ಮತ್ತೊಮ್ಮೆ ಇಲ್ಲಿ ಸಂಗ್ರಹಿಸಿಕೊಡಲಾಗಿದೆ. ಪರಮೇಶ್ವರನ ದೃಷ್ಟಿಯಿಂದ ದುಷ್ಟರು-ಶಿಷ್ಟರು ಎಂಬ ಭೇದವಿಲ್ಲ. ವ್ಯವಹಾರದಲ್ಲಿ ಮಾತ್ರ ಹಾಗೆ ಇದೆ. ಆದ್ದರಿಂದ ಈಗ ನಾವು ವ್ಯವಹಾರಪ್ರಪಂಚದಿಂದ ಮೇಲೇರಿ ಈ ವರ್ಣನೆಗಳನ್ನು ಅರ್ಥಮಾಡಿಕೊಳ್ಳಬೇಕಾಗಿದೆ. ಭಗವಂತನ ಸೃಷ್ಟಿಯಲ್ಲಿ ಎಲ್ಲಕ್ಕೂ ಸ್ಥಾನವಿದೆ. ಎಲ್ಲವೂ ಆತನ ಲೀಲೆಗೆ ಸಾಧನವಾಗಿಯೇ ಇವೆ. ಈ ವೈಚಿತ್ರ್ಯಗಳಿಲ್ಲದಿದ್ದರೆ ಆತನ ಮಹಿಮೆಯಾದರೂ ನಮಗೆ ಹೇಗೆ ತಿಳಿಯಬೇಕು? ಆದ್ದರಿಂದ ತೀರ ಕೀಳೆಂದೂ ಕೆಟ್ಟದ್ದೆಂದೂ ನಾವು ಭಾವಿಸಿರುವಂಥವುಕೂಡ ಪರಮೇಶ್ವರನ ಸ್ವರೂಪದಲ್ಲೇ ಅಡಕವಾಗಿವೆ-ಎಂಬುದು ಇಲ್ಲಿ ತಾತ್ಪರ್ಯ.

ಸೃಕವೆಂದರೆ ಯಂತ್ರವು. ಯಂತ್ರದ(ಬಲ)ದಿಂದ ತನ್ನನ್ನು ರಕ್ಷಿಸಿಕೊಳ್ಳುವವನು ಸೃಕಾವಿಯು. ಇಂಥವರ ಗುಂಪಿಗೆ ನಮಸ್ಕಾರ. ಮಿಲಿಟರಿಯೋಧರನ್ನು ಕಂಡಾಗ ಈ ಮಂತ್ರವನ್ನು ನೆನೆಯಿಸಿಕೊಳ್ಳಬಹುದು. ಜಿಘಾಂಸರೆಂದರೆ ಕೊಲ್ಲುವವರು. ಶತ್ರುಗಳನ್ನೂ ದುಷ್ಟಪ್ರಾಣಿಗಳನ್ನೂ ಕೊಂದು ಜನರಿಗೆ ಅನುಕೂಲಮಾಡಿಕೊಡುವಂಥ ರಕ್ಷಾಪುರುಷರ ರೂಪದಲ್ಲಿಯೂ ಪರಮೇಶ್ವರನೇ ಇರುತ್ತಾನೆ. ಕದಿಯುವವನೂಕೂಡ ತನಗೆ ಅಡ್ಡಬಂದವರನ್ನು ಕೊಲ್ಲಲು ಪ್ರಯತ್ನಮಾಡುತ್ತಾನೆ. ಆದ್ದರಿಂದ ಕದಿಯುವವರ ಗುಂಪಿಗೆ ಪತಿ (ಮುಷ್ಣತಾಂಪತಿ)ಯಾದವನಲ್ಲಿಯೂ ಪರಮೇಶ್ವರನೇ ಇದ್ದು

ಕೊಂಡಿರುವನು. ಅಧ್ಯಾತ್ಮವಾಗಿ ನಮ್ಮ ಪಾಪಗಳನ್ನು ಕದ್ದು, ಕಾಮಾದಿ ಶತ್ರುಗಳನ್ನು ಕೊಂದು, ನಮ್ಮನ್ನು ಕಾಪಾಡುವವನು ಪರಮೇಶ್ವರನು ಎಂಬ ಅರ್ಥವು ಇಲ್ಲಿ ವಿವಕ್ಷಿತವಾಗಿದೆ. ಹಾಗೆಯೇ ಅಸಿಮಂತನೆಂದರೆ ಖಡ್ಗವನ್ನು ಧರಿಸಿರುವವನು-ಎಂದರ್ಥ. ಕತ್ತಿಗಳನ್ನು ಹಿಡಿದು ಸಾಲಾಗಿ ಯುದ್ಧಸನ್ನದ್ಧ ರಾಗಿರುವವರನ್ನು ಪರಮೇಶ್ವರನೆಂದೇ ಭಾವಿಸಬಹುದು. ಮತ್ತು ರಾತ್ರಿಯಲ್ಲಿ ಸಂಚರಿಸುವವರು ನ ಕ್ತಂ ಚ ರ ರು. ಅಂಥ ನಕ್ತಂಚರರ ರೂಪದಲ್ಲಿರು ವವನಿಗೆ ನಮಸ್ಕಾರ! ಈ ಸಂದರ್ಭದಲ್ಲಿ ರಾತ್ರಿಯೆಲ್ಲ ಗಸ್ತು ತಿರುಗುವ ಘೂರ್ಕರನ್ನೂ ಪೋಲೀಸಿನವರನ್ನೂ ಭಗವತ್ಸ್ವರೂಪರೆಂದು ನೆನೆಯಬಹುದು. ನಾಯಿ ಮುಂತಾದ ಪ್ರಾಣಿಗಳೂ ಆಗಬಹುದು. ಪ್ರಕೃಂತರೆಂದರೆ ಕೊಲೆ ಮಾಡಿಯೇ ಧನವನ್ನು ಅಪಹರಿಸುವಂಥ ದರೋಡೆಗಾರರು. ಕೆಲವು ರಾಜ್ಯ ಗಳಲ್ಲಿ ಕ್ರಾಂತಿಗಳಾಗುವದನ್ನು ಕೇಳಿದ್ದೇವಷ್ಟೆ. ಇಂಥ ಕ್ರಾಂತಿಕಾರರುಗಳ ರೂಪದಿಂದ ಹೊರತೋರಿಕೊಳ್ಳುವವನೂ ಪರಮೇಶ್ವರನೇ ಎಂದಭಿಪ್ರಾಯ.

ಉಷ್ಣೀಷಿಯೆಂದರೆ ಪೇಟವನ್ನು ಕಟ್ಟಿರುವವನು ಎಂದರ್ಥ. ಈ ಉಷ್ಣೀ ಷವನ್ನು ಗೃಹಸ್ಥನು ಯಾವಾಗಲೂ ಧರಿಸಿರಬೇಕೆಂದು ವೇದದಲ್ಲಿ ತಿಳಿಸಿದೆ. ಬೋಳುತಲೆಯಲ್ಲಿರಬಾರದು-ಎಂದೂ ಹೇಳಿದೆ. ವಿವಾಹದಲ್ಲಿ ಕಡ್ಡಾಯವಾಗಿ ಸ್ವಲ್ಪಕಾಲವಾದರೂ ಪೇಟವನ್ನು ವರನಿಗೆ ಕಟ್ಟಿರುತ್ತಾರೆ. ಇದು ಈಗಲೂ ಜಾರಿಯಲ್ಲಿದೆ. ಹಿಂದೆಲ್ಲ ರಾಜಮಹಾರಾಜರುಗಳು, ದರ್ಬಾರ್‌ಸಭಾಸದರು, ಅಧಿಕಾರಿಗಳು, ಲಾಯರುಗಳು ಎಲ್ಲರೂ ಪೇಟವನ್ನು ಧರಿಸುತ್ತಿದ್ದರು. ಅದೊಂದು ಗೌರವಸೂಚಕವಾಗಿತ್ತು. ಆದರೆ ಈಗ ಕಾಲಗತಿಯಿಂದ ಅದು ಮರೆಯಾಗುತ್ತಿದೆ. ಆದರೂ ಅಲ್ಲಲ್ಲಿ ಪೇಟಧಾರಿಗಳು ಈಗಲೂ ಅಪರೂಪವಾಗಿ ತೋರಿಕೊಳ್ಳುತ್ತಾರೆ. ಪರಮೇಶ್ವರನಿಗೆ ಪೇಟವು ಯಾವುದೆಂದು ನೀವು ಕೇಳ ಬಹುದು. ಅವನ ಜಟಾಜೂಟವನ್ನೇ ಇಲ್ಲಿ ಉಷ್ಣೀಷವೆಂದು ಭಾವಿಸ ಬಹುದು. ಮತ್ತು ಉಷ್ಣೀಷಧಾರಿಗಳನ್ನು ಕಂಡಾಗ ಪರಮೇಶ್ವರನ ಭಾವನೆ ಯನ್ನು ಮಾಡಿದಲ್ಲಿ ನಿಜವಾಗಿಯೂ ಅದೊಂದು ಅಧ್ಯಾತ್ಮಸಾಧನವಾಗಲಿದೆ; ಇರಲಿ. ಗಿರಿಚರನೆಂದರೆ ಬೆಟ್ಟಗಳಲ್ಲಿ ತಿರುಗಾಡುವವನು. ಕುಲುಂಚರೆಂದರೆ (ಕು-ಭೂಮಿಯನ್ನು ಲುಂಚ-ಅಪಹರಿಸು)ಮನೆ, ಜಮೀನು ಮುಂತಾದ ವನ್ನು ಕಸಿದುಕೊಳ್ಳುವವರು ಎಂದರ್ಥ. ಈಗ ಎಷ್ಟೋ ಜಮೀನುದಾರರ

ಭೂಮಿಯೆಲ್ಲ ಬೇರೆಯವರಿಂದ ವಶಗೊಳಿಸಿಕೊಳ್ಳಲ್ಪಟ್ಟಿದೆಯಲ್ಲವೆ ? ಇದೊಂದು ಪರಮೇಶ್ವರನ ಲೀಲೆಯೆಂದೇ ಭಾವಿಸಬೇಕು. ಇದು ಕೆಲವರಿಗೆ ದುಃಖಕರವಾಗಿ ಕಂಡರೂ ಮತ್ತೆ ಕೆಲವರಿಗೆ ಅನುಕೂಲವಾಗಿಯೇ ಇರುತ್ತದೆ. ಹೀಗೆಲ್ಲ ಆಟವಾಡಿಸುವವನು ಪರಮೇಶ್ವರನಲ್ಲದೆ ಮತ್ತೆ ಯಾರು ಆದಾರು ? ಆದ್ದರಿಂದ ಎಲ್ಲಾರೂಪದಿಂದಲೂ ಪರಮೇಶ್ವರನನ್ನೇ ಕಾಣುವವನೇ ನಿಜವಾದ ಶಿವಭಕ್ತನೆಂದು ತಿಳಿಯಬೇಕು.

ನಮ ಇಷುಮದ್ಭ್ಯೋ ಧನ್ವಾವಿಭ್ಯಶ್ಚ ವೋ ನಮೋ ನಮ ಆತನ್ವಾನೇಭ್ಯಃ ಪ್ರತಿದಧಾನೇಭ್ಯಶ್ಚ ವೋ ನಮೋ ನಮ ಆಯಚ್ಛದ್ಭ್ಯೋ ವಿಸೃಜದ್ಭ್ಯಶ್ಚ ವೋ ನಮೋ ನಮೋಽಸ್ಯದ್ಭ್ಯೋ ವಿಧ್ಯದ್ಭ್ಯಶ್ಚ ವೋ ನಮೋ ನಮ ಆಸೀನೇಭ್ಯಃ ಶಯಾನೇಭ್ಯಶ್ಚ ವೋ ನಮಃ ||

"ಇಷುಮಂತರೂ, ಧನ್ವಾವಿಗಳೂ, ಆತನ್ವಾನರೂ, ಪ್ರತಿದಧಾನರೂ, ಆಯಚ್ಛನ್ತರೂ, ವಿಸೃಜಂತರೂ, ಬಾಣಗಳನ್ನು ಎಸೆಯುವವರೂ, ಹೊಡೆಯುವವರೂ, ಕುಳಿತಿರುವವರೂ, ಮಲಗಿರುವವರೂ (ಆದ ಎಲ್ಲಾ ಪರಮೇಶ್ವರನ ರೂಪಗಳಿಗೂ) ನಮಸ್ಕಾರ!"

ಈಗ ಒಂದೊಂದು ವಸ್ತುವಿನ ಹಾಗೂ ಅದನ್ನು ಹೊಂದಿರುವವರ ರೂಪದಲ್ಲಿರುವ ಭಗವಂತನನ್ನು ಸ್ತುತಿಸಲಾಗುತ್ತದೆ. ಇಷುಮಂತರೆಂದರೆ ಬಾಣಗಳನ್ನು ಹಿಡಿದಿರುವವರು ; ಧನುಸ್ಸನ್ನು ಕೈಯಲ್ಲಿ ಹಿಡಿದಿರುವವರು ಧನ್ವಾವಿಗಳು. ಲೋಕರಕ್ಷಣೆಗಾಗಿ ಧನುರ್ಬಾಣಗಳನ್ನು ಹಿಡಿದಿರುವಂಥ, ಶ್ರೀರಾಮನಂತೆ ಧರ್ಮಿಷ್ಠರಾದ ಕ್ಷತ್ರಿಯರನ್ನು ಪರಮೇಶ್ವರನೆಂದೇ ತಿಳಿಯಬೇಕು. ಇಂಥವರಿಗೆ ನಮಸ್ಕಾರ. ಇಲ್ಲಿಂದ ಮುಂದೆ ಆಗಾಗ್ಗೆ 'ವೋ ನಮಃ' ಎಂದು ಹೇಳಿರುವದರ ಅಭಿಪ್ರಾಯವೇನೆಂದರೆ 'ನೀವುಗಳು ಪ್ರತ್ಯಕ್ಷವಾಗಿ ಕಂಡುಬರುತ್ತಿದ್ದೀರಿ; ಇಂಥ ನಿಮಗೆ ನಮಸ್ಕಾರ!' ಎಂದು ಭಕ್ತಿಯ ಪರವಶತೆಯಿಂದ ಹೇಳುವಿಕೆ–ಎಂದು ತಿಳಿಯಬೇಕು. ಧನುಸ್ಸಿನಲ್ಲಿ ಹಗ್ಗವನ್ನು ಏರಿಸುವವರು ಆತನ್ವಾನರು. ಬಾಣಗಳನ್ನು ಅದರಲ್ಲಿ ಜೋಡಿಸುವವರು ಪ್ರತಿಧಾನರು. ಧನುಸ್ಸಿನ ಹಗ್ಗವನ್ನು ಎಳೆಯುವವರು ಆಯಚ್ಛನ್ತರು; ಬಾಣ

ಗಳನ್ನು ಬಿಡುವವರು ವಿಸೃಜಂತರು. ಇಂಥವರೆಲ್ಲ ರುದ್ರರೂಪರೇ-ಎಂದು ಸ್ತುತಿಸಲಾಗಿದೆ. ಯುದ್ಧರಂಗದಲ್ಲಿ ನೋಡುವಾಗ ಈ ಬಗೆಯ ಎಲ್ಲಾ ವ್ಯಕ್ತಿಗಳೂ ಕಂಡುಬರುತ್ತಾರೆ. ಅವರೊಳಗೆಲ್ಲ ರುದ್ರನೇ ಇದ್ದುಕೊಂಡಿರುವನು-ಎಂಬುದು ಅಭಿಪ್ರಾಯ. ಧರ್ಮರಕ್ಷಣೆಗಾಗಿಯೇ ಪ್ರಾಣವನ್ನೂ ಲೆಕ್ಕಿಸದೆ ಕಾದಾಡುವಂಥ ವೀರರು ರುದ್ರನ ಅಂಶವಿಲ್ಲದೆ ಎಂದಿಗೂ ತಮ್ಮ ಕಾರ್ಯಗಳನ್ನು ನೆರವೇರಿಸಲಾರರು. ಆದ್ದರಿಂದ ಅವರುಗಳ ರೂಪದಲ್ಲಿರುವ ರುದ್ರನನ್ನು ಇಲ್ಲಿ ಹೊಗಳಿರುವದು ಸಮಂಜಸವಾಗಿದೆ. ಬಾಣಗಳನ್ನು ಗುರಿಗೆ ತಗಲುವಂತೆ ಎಸೆಯುವವರು ಅಸ್ಯಂತರು. ಗುರಿಯನ್ನು ಸಮೀಪಿಸಿ ಅದರೊಳಕ್ಕೆ ಪ್ರವೇಶಮಾಡುವಂತೆ ಹೊಡೆಯುವವರು ವಿಧ್ಯಂತರು. ಇಂಥವರಿಗೂ ಇಲ್ಲಿ ವಂದನೆಗಳನ್ನು ಅರ್ಪಿಸಲಾಗಿದೆ.

ಇನ್ನು ಕುಳಿತಿರುವವರು ಆಸೀನರು. ಪರಮಾತ್ಮನು ಕುಳಿತಿರುವವರ ರೂಪದಲ್ಲಿಯೂ ಇರುತ್ತಾನೆ. ಶಯಾನರೆಂದರೆ ಮಲಗಿರುವವರು. ಅವರಲ್ಲಿಯೂ ಶಂಭುವೇ ಇದ್ದಾನೆ. ಒಂದು ಮಗು ಬೆಳೆಯುತ್ತಿರುವಾಗ ಮಲಗಿಕೊಂಡದ್ದು ಮಗುಚಿಕೊಂಡರೆ ತಾಯಿಗೆ ಎಷ್ಟೋ ಸಂತೋಷ. ಹಾಗೆಯೇ ಕುಳಿತರೆ, ನಿಂತರೆ, ಹೆಜ್ಜೆಯಿಟ್ಟರೆ ಇನ್ನೂ ಆನಂದವಾಗುತ್ತದೆಯಲ್ಲವೆ? ಇದೆಲ್ಲ ಯಾರ ಶಕ್ತಿಯಿಂದ? ಪರಮೇಶ್ವರನೇ ಮಗುವಾಗಿ ಮಲಗಿ, ಕುಳಿತು, ನಿಂತು-ನಮ್ಮನ್ನು ಸಂತೋಷಪಡಿಸುತ್ತಾನಲ್ಲವೆ? ಇನ್ನು ಕಠೋಪನಿಷತ್ತಿನಲ್ಲಿ **'ಆಸೀನೋ ದೂರಂ ವ್ರಜತಿ, ಶಯಾನೋ ಯಾತಿ ಸರ್ವತಃ'** ಎಂದು ಭಗವತ್ಸ್ವರೂಪವನ್ನು ಹೊಗಳಿದೆ. ಭಗವಂತನು ತಾನು ವಿಕಾರವಾಗದೆಯೇ ಎಲ್ಲಾ ಕರ್ಮಗಳನ್ನೂ ಮಾಡಬಲ್ಲಂಥ ಸರ್ವಸಮರ್ಥನು ಎಂದರ್ಥ. ಹೀಗೆ ರುದ್ರನು ನಮ್ಮ ಸುತ್ತಲೂ ಕುಳಿತು, ಮಲಗಿ, ಓಡಾಡುತ್ತಾ ನಮ್ಮೊಡನೆಯೇ ಇದ್ದರೂ ನಾವು ಅವನನ್ನು ಅರಿಯೆವು-ಎಂದರೆ ನಮ್ಮದು ಎಂಥ ದಡ್ಡತನ! ಆದ್ದರಿಂದ ರುದ್ರನು ಸರ್ವಾತ್ಮಕನೆಂದೇ ತಿಳಿಯಬೇಕು.

---

## ೧೫. ನಮಃ ಸಭಾಭ್ಯಃ ಸಭಾಪತಿಭ್ಯಃ

ಈಗ ಮೂರನೆಯ ಅನುವಾಕದ ಕೊನೆಯ ಭಾಗವನ್ನು ವಿಚಾರಮಾಡಬೇಕಾಗಿದೆ.

ನಮಃ ಸ್ವಪದ್ಭ್ಯೋ ಜಾಗ್ರದ್ಭ್ಯಶ್ಚ ವೋ ನಮೋ ನಮ ಸ್ತಿಷ್ಠದ್ಭ್ಯೋ ಧಾವದ್ಭ್ಯಶ್ಚ ವೋ ನಮೋ ನಮಃ ಸಭಾಭ್ಯಃ ಸಭಾ ಪತಿಭ್ಯಶ್ಚ ವೋ ನಮೋ ನಮೋ ಅಶ್ವೇಭ್ಯೋಽಶ್ವಪತಿಭ್ಯಶ್ಚ ವೋ ನಮಃ ॥

"ಮಲಗಿರುವವರಿಗೂ ಎಚ್ಚತ್ತಿರುವವರಿಗೂ ನಿಂತಿರುವವರಿಗೂ ಓಡುತ್ತಿರುವವರಿಗೂ ಸಭೆಗಳಿಗೂ ಸಭಾಪತಿಗಳಿಗೂ ಕುದುರೆಗಳಿಗೂ ಕುದುರೆಗಳ ಒಡೆಯರಿಗೂ ನಮಸ್ಕಾರವು."

ರುದ್ರಭಾಷ್ಯಕಾರರು ಈ ಮಂತ್ರಗಳು ಸ್ಪಷ್ಟಾರ್ಥವುಳ್ಳವುಗಳಾಗಿವೆಯಾಗಿ ನಾವು ವ್ಯಾಖ್ಯಾನಮಾಡಿಲ್ಲ-ಎಂದು ತಿಳಿಸಿದ್ದಾರೆ. ಆದರೂ ಈ ವರ್ಣನೆಯಲ್ಲಿ ಅಡಕವಾಗಿರುವ ವಿಶೇಷಣಗಳ ಅರ್ಥವನ್ನು ಚಿಂತಿಸುವದರಿಂದ ಲಾಭವುಂಟು. ಪರಮೇಶ್ವರನಿಗೆ ನಿಜವಾಗಿ ಎಚ್ಚರನಿದ್ರೆಗಳೆಂಬುದಿಲ್ಲ. ಆತನು ನಿದ್ರಿಸುವ ಸಂಭವವೇ ಇಲ್ಲ. ಹೀಗಿದ್ದರೂ ಉಪಾಧಿವಿಶಿಷ್ಟನಾಗಿ ತೋರಿಕೊಳ್ಳುವಾಗ ನಿದ್ರೆಮಾಡುವವನಲ್ಲಿಯೂ ಎಚ್ಚತ್ತಿರುವವನಲ್ಲಿಯೂ ತಾನೇ ಇದ್ದುಕೊಂಡು ಎಲ್ಲರಿಗೂ ಆತ್ಮನಾಗಿರುತ್ತಾನೆ. ಇಲ್ಲಿ ಸ್ವಪತೀತಿ ಸ್ವಪನ್ ಎಂದು-ವ್ಯುತ್ಪತ್ತಿಯನ್ನು ಮಾಡಿದಲ್ಲಿ ನಿದ್ರೆಮಾಡುತ್ತಾ ಕನಸು ಕಾಣುವವನು ಎಂದೂ ಅರ್ಥಮಾಡಿಕೊಳ್ಳಬಹುದು. ಆತನು ಅವಸ್ಥಾತ್ರಯಗಳಿಗೂ ಸಾಕ್ಷಿಯಾಗಿದ್ದುಕೊಂಡಿರುವನಾದರೂ ಆಯಾ ಅವಸ್ಥೆಗಳಿಗೆ ಕಟ್ಟುಬಿದ್ದಿರುವ ಜೀವರುಗಳ ರೂಪದಲ್ಲಿಯೂ ತಾನೇ ಮಾಯೆಯಿಂದ ತೋರಿಕೊಳ್ಳುತ್ತಾ ಇರುವನೆಂದು ತಿಳಿಯಬೇಕು. ಏಕಕಾಲಕ್ಕೆ ಒಬ್ಬ ಮನುಷ್ಯನು ಕನಸನ್ನೂ ಕಾಣುತ್ತಾ ಎಚ್ಚರವಾಗಿಯೂ ಇದ್ದುಕೊಂಡಿರುವದು ಅಸಂಭವ. ಆದರೆ ಪರಮೇಶ್ವರನು ಒಂದು ಜೀವರೂಪದಿಂದ ಸ್ವಪ್ನವನ್ನು ಕಾಣುತ್ತಿದ್ದು ಮತ್ತೊಂದು ಜೀವರೂಪದಿಂದ ಎಚ್ಚತ್ತಿರಬಹುದು. ಇದು ಅವನ ಮಹಿಮೆ. ಅಂತೂ ಕನಸುಕಾಣುತ್ತಾ ನಿದ್ರಿಸುತ್ತಿರುವವರನ್ನೂ ಎಚ್ಚತ್ತಿರುವವರನ್ನೂ ನಾವು ರುದ್ರರೂಪರೆಂದೇ ಭಾವಿಸಬಹುದಾಗಿದೆ.

ಹೀಗೆಯೇ ನಿಲ್ಲುವದು, ಓಡಾಡುವದೂ-ಎರಡೂ ಒಂದಕ್ಕೊಂದು ವಿರುದ್ಧಕ್ರಿಯೆಗಳು. ಆದರೆ ಪರಮೇಶ್ವರನು ಸರ್ವಾತ್ಮನಾಗಿರುವದರಿಂದ

ಸದಾ ನಿಂತೇಇರುವ ಎಂದರೆ ಚಲನೆಯಿಲ್ಲದಿರುವ ಸ್ಥಾವರಜೀವಿಗಳಾದ ಮರ, ಬೆಟ್ಟ, ಗುಡ್ಡ-ಮುಂತಾದ ರೂಪಗಳಿಂದಲೂ ಯಾವಾಗಲೂ ಚಲಿಸುತ್ತಿರುವ ಪ್ರಾಣಿಗಳು, ಮನುಷ್ಯ, ಪಕ್ಷಿ-ಮುಂತಾದ ಜಂಗಮಪ್ರಾಣಿಗಳ ರೂಪ ದಿಂದಲೂ ಇದ್ದುಕೊಂಡಿರುತ್ತಾನೆ. ಈ ಎರಡನ್ನೂ ಶಿವನೆಂದೇ ನಾವು ತಿಳಿಯ ಬೇಕು. ಇಲ್ಲಿ ಜಂಗಮಪ್ರಾಣಿಗಳನ್ನೇ ಗುರಿಯಾಗಿಟ್ಟುಕೊಂಡು 'ನಿಂತಿರುವ ಹಾಗೂ ಓಡುತ್ತಿರುವವರಿಗೆ ನಮಸ್ಕಾರ' ಎಂದೂ ಹೇಳಿದೆ. ಓಟದಲ್ಲಿಯೂ ಜಿಂಕೆ, ಹಕ್ಕಿ- ಮುಂತಾದವು ತುಂಬ ವೇಗವಾಗಿ ಓಡುವವುಗಳಾಗಿವೆ. ಇವುಗಳಲ್ಲೆಲ್ಲ ಪರಮೇಶ್ವರನೇ ತುಂಬಿತುಳುಕಾಡುತ್ತಿರುವನೆಂದು ಭಾವಿಸ ಬಹುದಾಗಿದೆ.

ಸಭೆಗಳಿಗೂ ಸಭಾಪತಿಗಳಿಗೂ ನಮಸ್ಕಾರ ಎಂಬುದನ್ನು ಈಗ ವಿಚಾರ ಮಾಡೋಣ. ಸದಸ್ಸು, ಪರಿಷತ್ತು-ಎಂಬ ಶಬ್ದಗಳಿಗೂ ಸಭೆಯೆಂದೇ ಅರ್ಥ. ಚತುರ್ಮುಖಬ್ರಹ್ಮನನ್ನು 'ಸದಸಸ್ಪತಿ'ಯೆಂದೂ ಆತನ ಸಭೆಯನ್ನು ಬ್ರಹ್ಮಸಭೆ-ಎಂದೂ ವೇದದಲ್ಲಿ ಕರೆದಿದೆ. ದ್ವಿಜರು ಉಪಾಕರ್ಮದಲ್ಲಿ ಸದಸಸ್ಪತಿ ಯೆಂದೇ ಬ್ರಹ್ಮನನ್ನು ಪೂಜಿಸುತ್ತಾರೆ. ಅಂತೂ ವೈದಿಕಕಾಲದಿಂದಲೂ ಸಭೆ ಗಳಿಗೂ ಸಭಾಪತಿಗಳಿಗೂ ತುಂಬ ಗೌರವವು ಇದ್ದುಕೊಂಡಿದೆ. ಪರಿಷತ್ ಎಂದರೆ ಶಾಸ್ತ್ರಜ್ಞರಾದ ಹತ್ತು ಜನರ ಗುಂಪು-ಎಂದರ್ಥ. ಧರ್ಮಾಧರ್ಮಗಳ ಹಾಗೂ ಕರ್ತವ್ಯಾಕರ್ತವ್ಯಗಳ ವಿಷಯದಲ್ಲಿ ಸಂಶಯವು ಬಂದಾಗ ಹಿಂದೆ ಪರಿಷತ್ತಿನಲ್ಲಿ ನಿರ್ಣಯವಾಗುತ್ತಿತ್ತು. ಇಂಥ ಪರಿಷತ್ತಿಗೆ ಅಧ್ಯಾತ್ಮಜ್ಞಾನಿ ಯಾದ ಒಬ್ಬನೇ ಇದ್ದರೂ ಸಾಕು- ಎಂದು ಸ್ಮೃತಿಗಳಲ್ಲಿ ಏಕಸದಸ್ಯ ಪರಿಷತ್ತನ್ನೂ ಅಂಗೀಕರಿಸಲಾಗಿದೆ. ಈಗಲೂ ವ್ಯವಹಾರದಲ್ಲಿ ಕೆಲವು ನಿರ್ಣಯ ಗಳನ್ನು ಕೈಗೊಳ್ಳುವದಕ್ಕಾಗಿ 'ಸಮಿತಿ'ಗಳನ್ನೂ ಅದರ 'ಅಧ್ಯಕ್ಷ'ರನ್ನೂ ನೇಮಿಸುವ ವಾಡಿಕೆಯಿದೆ. ಆದರೆ ಇದರಲ್ಲಿ ಆಯಾ ವಿಷಯಗಳಲ್ಲಿ ನುರಿತ ಜ್ಞಾನಿಗಳೂ ಅಕಾಮಹತರೂ ವಿದ್ವಾಂಸರೂ ಆದಂಥ ಬುದ್ಧಿಜೀವಿಗಳಿಗೆ ಅವಕಾಶವು ಕಡಿಮೆಯಾಗುತ್ತಿದೆ. ರಾಜಕೀಯಪ್ರಭಾವಶಾಲಿಗಳೇ ಸದಸ್ಯ ರಾಗುವದು, ಪಕ್ಷಪಾತದ ನಿರ್ಣಯಗಳನ್ನು ಕೈಗೊಳ್ಳುವದು- ಹೆಚ್ಚಾಗಿ ಬಿಟ್ಟಿದೆ. ಇದರಿಂದ ಜನಸಾಮಾನ್ಯಕ್ಕೆ ಆಗುತ್ತಿರುವ ನಷ್ಟವು ಅಷ್ಟಿಷ್ಟಲ್ಲ. ಜೊತೆಗೆ ದೈವಿಕವಾಗಿಯೂ ಕ್ಷಾಮಡಾಮರಗಳು, ರೋಗರುಜಿನಗಳು-

ಷುಂತಾದ ಅಪಘಾತಗಳು ನ್ಯಾಯವನ್ನು ಹಿಂಸೆಮಾಡಿದ್ದರ ಫಲವಾಗಿ ಉಂಟಾಗುತ್ತಿವೆ. ಆದ್ದರಿಂದ ನಾವು ಭಗವಂತನ ವಿಭೂತಿರೂಪವಾಗಿರುವ 'ಸಭೆ'ಯನ್ನು ರಚಿಸುವಾಗ ಪ್ರಾಮಾಣಿಕತೆಗೂ ಜನಸೇವೆಗೂ ಧರ್ಮ ಪ್ರವೃತ್ತಿಗೂ ಕಾರಣರಾಗಿರುವಂಥ ಸದಸ್ಯರನ್ನೇ ಆರಿಸಿದಲ್ಲಿ ಅಂಥ ಸಭೆಯು ಈಶ್ವರನ ಸ್ವರೂಪವೇ ಆಗಿರುವದು. ಅದರ ಯಜಮಾನನು ನಿಜವಾದ ಸಭಾ ಪತಿಯಾದ ಪರಮೇಶ್ವರನೇ ಆಗುವನು. 'ಪ್ರಜಾಪ್ರಭುತ್ವ'ವನ್ನು ಗೌರವಿಸು ವವರು ಈ ವಿಷಯಗಳನ್ನು ಗಮನದಲ್ಲಿಡಬೇಕಾದದ್ದು ಆಗತ್ಯ. ಒಟ್ಟಿನಲ್ಲಿ ನಮ್ಮ ಭಾರತದೇಶದಲ್ಲಿ ಸಭೆಗಳನ್ನೂ ಸಭಾಪತಿಗಳನ್ನೂ ಭಗವಂತನೆಂದೇ ಗೌರವಿಸುವ ಸಂಪ್ರದಾಯವು ಅನಾದಿಕಾಲದಿಂದಲೂ ಇದ್ದುಕೊಂಡಿದೆ. ಇಂಥ ಪರಮೇಶ್ವರನಿಗೆ ನಮಸ್ಕಾರ-ಎಂದು ಈ ಮಂತ್ರದ ಅಭಿಪ್ರಾಯ. ವಿವಾಹಾದಿಕರ್ಮಗಳು ನಡೆಯುವಾಗ ಈಗಲೂ 'ಸಭಾಪೂಜೆ'ಯನ್ನು ಮಾಡುವ ಪದ್ಧತಿಯಿದೆ. ವಿದ್ವಾಂಸರನ್ನೂ ಕಲಾವಿದರನ್ನೂ ಗೌರವಿಸಲು ಸಭೆಗಳನ್ನು ಏರ್ಪಡಿಸುವದೂ ಸುಪ್ರಸಿದ್ಧವಾಗಿದೆ. ಇಂಥ ಸಂದರ್ಭಗಳನ್ನು ಕೇವಲ ಆಡಂಬರಗಳಲ್ಲೇ ಪೂರೈಸದೆ ಅಧ್ಯಾತ್ಮಾನುಸಂಧಾನಕ್ಕೂ ಉಪ ಯೋಗಿಸಿಕೊಳ್ಳಲು ಇಲ್ಲಿ ಸೂಚಿಸಿದೆ.

ಈಗ 'ಅಶ್ವೇಭ್ಯಃ' ಎಂಬುದನ್ನು ವಿಚಾರಮಾಡೋಣ. ಅಶ್ವವೆಂದರೆ ಕುದುರೆ-ಎಂದರ್ಥ. ಹಿಂದಿನಕಾಲದಲ್ಲಿ ರಥಗಳಿಗೆಲ್ಲ ಕುದುರೆಗಳನ್ನೇ ಕಟ್ಟುತ್ತಿದ್ದರು. ಈಗಿನಂತೆ ತೈಲವಾಹನಗಳಿರಲಿಲ್ಲ. ರಾಜಮಹಾರಾಜರುಗಳು ಸೈನ್ಯ ಗಳಲ್ಲಿ ಚತುರಂಗಬಲಕ್ಕೆ ಕುದುರೆಸವಾರರನ್ನೂ ಸೇರಿಸಿದ್ದರು. ಆನೆ, ಕುದುರೆ ಗಳನ್ನು ರಾಜ್ಯಲಕ್ಷ್ಮಿಯೆಂದೂ ಗೌರವಿಸಿ ನವರಾತ್ರಿಯಲ್ಲಿ ರಾಜರುಗಳು ಪೂಜಿಸುತ್ತಿದ್ದುದು ಸರಿಯಷ್ಟೆ! ಕುದುರೆಯನ್ನು 'ಅಶ್ವಮೇಧ'ವೆಂಬ ಪವಿತ್ರ ವಾದ ಯಜ್ಞಕ್ಕೆ ಪಶುವಾಗಿಯೂ ಹಿಂದೆ ಉಪಯೋಗಿಸುತ್ತಿದ್ದರು. ನೂರು ಅಶ್ವಮೇಧಗಳನ್ನು ಮಾಡಿದಲ್ಲಿ 'ಇಂದ್ರಪದವಿ' ದೊರಕುವದೆಂದೂ ಪುರಾಣ ಗಳಲ್ಲಿದೆ. ಕುದುರೆಯನ್ನು ಸೂರ್ಯನ ಪ್ರತಿನಿಧಿಯೆಂದೂ ಉಪನಿಷತ್ತಿನಲ್ಲಿ ಕರೆದಿದೆ. ಅಶ್ವಮೇಧವೆಂಬ ಯಜ್ಞವು ಕ್ಷತ್ರಿಯರು ಮಾಡತಕ್ಕದ್ದಾದರೂ ಉಳಿದವರು ಅಶ್ವಮೇಧವೆಂಬ ಉಪಾಸನೆಯನ್ನು ಮಾಡಬಹುದೆಂದೂ ಇದರಿಂದ ಬ್ರಹ್ಮಹತ್ಯಾದೋಷನಿವೃತ್ತಿಯಾಗುವದೆಂದೂ ವೇದದಲ್ಲಿಯೇ

ಹೇಳಿದೆ. ಬೃಹದಾರಣ್ಯಕೋಪನಿಷತ್ತಿನಲ್ಲಿ ಪ್ರಾರಂಭದಲ್ಲಿಯೇ ಈ ಅಶ್ವಮೇಧೋಪಾಸನೆಯನ್ನು ವಿವರಿಸಿದೆ. ಹೀಗೆ ನಾನಾರೀತಿಯಿಂದ ವೈದಿಕವಾಗಿಯೂ ಲೌಕಿಕವಾಗಿಯೂ ಪೂಜ್ಯವೂ ಉಪಯುಕ್ತವೂ ಆಗಿರುವ ಕುದುರೆಯನ್ನು ಭಗವಂತನ ವಿಭೂತಿಯೆಂದು ಗೌರವಿಸಿ ಸ್ತುತಿಸುತ್ತಿರುವದು ಸೂಕ್ತವಾಗಿದೆ. ಉಚ್ಚೈಃಶ್ರವಸ್ಸು-ಎಂಬ ಕುದುರೆಯು ಭಗವಂತನ ವಿಭೂತಿಯೆಂದೇ ಗೀತೆಯಲ್ಲಿ ಹೇಳಿದೆ.

ಅಶ್ವಪತಿಗಳಿಗೆ ನಮಸ್ಕಾರ-ಎಂಬುದಕ್ಕೂ ಹೀಗೆಯೇ ತಿಳಿಯಬೇಕು. ಕುದುರೆಯ ಒಡೆಯರೇ ಅಶ್ವಪತಿಗಳು. ಹಿಂದೆ ಕೆಲವು ರಾಜರುಗಳಿಗೆ 'ಅಶ್ವಪತಿ'ಎಂಬ ಹೆಸರೂ ಪ್ರಸಿದ್ಧವಾಗಿತ್ತು. ನಳಮಹಾರಾಜನೂ ಪಾಂಡವರಲ್ಲಿ ಒಬ್ಬನಾದ ಸಹದೇವನೂ ಅಶ್ವವಿದ್ಯಾನಿಪುಣರಾಗಿದ್ದರೆಂದು ಪುರಾಣಗಳಲ್ಲಿದೆ. ಅಶ್ವಗಳನ್ನು ನಡೆಯಿಸುವ ಜಾಣತನವು ಬಹುಮುಖ್ಯ. ಇದರಲ್ಲಿ ಸಾರಥಿಯಾಗಿ ಸುಪ್ರಸಿದ್ಧನಾಗಿರುವವನು ಪಾರ್ಥಸಾರಥಿಯೆಂಬ ಶ್ರೀಕೃಷ್ಣನು. ಆಧ್ಯಾತ್ಮಿಕವಾಗಿ ನೋಡಿದರೆ ಇಂದ್ರಿಯಗಳೆಂಬಿವೇ ಅಶ್ವಗಳು. ಅವುಗಳನ್ನು ಹತೋಟಿಯಲ್ಲಿಡುವದು ಒಂದು ದೊಡ್ಡ ಯೋಗಸಾಧನೆಯೇ ಸರಿ. 'ಹೃಷೀಕೇಶ'ನೆಂಬ ಬಿರುದಿನ ಶ್ರೀಕೃಷ್ಣಭಗವಂತನು ಎಲ್ಲಾರೀತಿಯಿಂದಲೂ ನಿಜವಾದ ಅಶ್ವಪತಿಯು. ಆತನ ಅನುಗ್ರಹದಿಂದ ಸಾಧಕರು ತಮ್ಮ ಗುರಿಯನ್ನು ಮುಟ್ಟಬಹುದಾಗಿದೆ. ಹೀಗೆ ಅಶ್ವಪತಿಯಾಗಿ ಲೀಲೆಯನ್ನು ತೋರಿಸುತ್ತಿರುವ ಪರಮೇಶ್ವರನನ್ನು ನಾವು ಗೌರವಿಸಲೇಬೇಕು. ಲೌಕಿಕವಾಗಿಯೂ ಈಗಿನ ಕಾಲದಲ್ಲಿ ಕುದುರೆಯನ್ನು 'ಜೂಜು'ಗಳಿಗಾಗಿ ಉಪಯೋಗಿಸುತ್ತಿರುವದು ಪ್ರಸಿದ್ಧವಾಗಿದೆ. ಇದರಲ್ಲಿ ಎಷ್ಟೋ ಜನರ ಅದೃಷ್ಟಪರೀಕ್ಷೆಗಳಾಗುತ್ತಿವೆ. ಇಲ್ಲಿಯೂ ಅಶ್ವಗಳ ಗೆಲವು 'ಅಶ್ವಪತಿ'(ಜಾಕಿ)ಗಳನ್ನೇ ಅವಲಂಬಿಸಿರುತ್ತದೆಯಲ್ಲವೆ ? ಹೀಗೆ ಎಲ್ಲೆಲ್ಲಿ ನೋಡಿದರೂ ಏನೇನು ಯೋಚಿಸಿದರೂ ಎಲ್ಲವೂ ಶಿವನೇ ಆಗಿರುವದೆಂಬ ಮಂಗಳಸಂದೇಶವನ್ನೇ ರುದ್ರಾಧ್ಯಾಯವು ಸಾರುತ್ತಿದೆ.

---

## ೧೬. ನಮೋ ಗಣೇಭ್ಯೋ ಗಣಪತಿಭ್ಯಃ

ನಾಲ್ಕನೆಯ ಅನುವಾಕವನ್ನು ಈಗ ವಿಚಾರಮಾಡೋಣ.

ನಮ ಆ ವ್ಯಾಧಿನೀಭ್ಯೋ ವಿವಿಧ್ಯಂತೀಭ್ಯಶ್ಚ ವೋ ನಮೋ ನಮ ಉಗಣಾಭ್ಯಸ್ತೃಗ್ಂಹತೀಭ್ಯಶ್ಚ ವೋ ನಮೋ ನಮೋ ಗೃತ್ಸೇಭ್ಯೋ ಗೃತ್ಸಪತಿಭ್ಯಶ್ಚ ವೋ ನಮೋ ನಮೋ ವ್ರಾತೇಭ್ಯೋ ವ್ರಾತಪತಿಭ್ಯಶ್ಚ ವೋ ನಮೋ ನಮೋ ಗಣೇಭ್ಯೋ ಗಣಪತಿಭ್ಯಶ್ಚ ವೋ ನಮಃ ||

"ಆವ್ಯಾಧಿನಿಯರೂ ವಿವಿಧ್ಯಂತಿಯರೂ ಆದ, ಹಿಂಸೆಮಾಡಲು ಸಮರ್ಥರಾದ ಉತ್ಕೃಷ್ಟಗಣದೇವತೆಗಳಿಗೂ ಗೃತ್ಸರಿಗೂ ಗೃತ್ಸಪತಿಗಳಿಗೂ ವ್ರಾತರಿಗೂ ವ್ರಾತಪತಿಗಳಿಗೂ ಗಣಗಳಿಗೂ ಗಣಪತಿಗಳಿಗೂ ನಮಸ್ಕಾರವು!"

ಮೂರನೆಯ ಅನುವಾಕದಂತೆಯೇ ಇಲ್ಲಿಯೂ ಸರ್ವಾತ್ಮಕನಾದ ಭಗವಂತನನ್ನು ನಮಸ್ಕರಿಸಲಾಗಿದೆ. ಮೊದಲನೆಯ ನಾಲ್ಕು ವಿಶೇಷಣಗಳು ಸ್ತ್ರೀವಾಚಕಗಳಾಗಿವೆ. ಸ್ತ್ರೀರೂಪದಲ್ಲಿಯೂ ಇರುವವನು ಪರಮೇಶ್ವರನೇ ಎಂದಭಿಪ್ರಾಯ. ಆವ್ಯಾಧಿನಿಯರು ಎಂದರೆ ಯುದ್ಧದಲ್ಲಿ ಸುತ್ತಲೂ ಎಲ್ಲಾ ದಿಕ್ಕುಗಳಿಗೂ ಬಾಣಗಳನ್ನು ಎಸೆಯಲು ಸಮರ್ಥರಾದವರು ಎಂದರ್ಥ; ಮತ್ತು ವಿವಿಧ್ಯಂತಿಯರು ಎಂದರೆ ನಾನಾವಿಧವಾಗಿ ಆಯುಧಗಳನ್ನು ಉಪಯೋಗಿಸಿ ಶತ್ರುಗಳನ್ನು ಹೊಡೆಯುವಂಥವರು-ಎಂದರ್ಥ. ಹೀಗೆ ಜಗತ್ತಿನಲ್ಲಿ ಶಕ್ತಿರೂಪಿಣಿಯರಾಗಿ ಎಷ್ಟುಮಂದಿ ದೇವಿಯರು ರಾಕ್ಷಸರನ್ನು ನಿಗ್ರಹ ಮಾಡುತ್ತಾ ಭಕ್ತರನ್ನು ಅನುಗ್ರಹಿಸುತ್ತಾ ಪರಮೇಶ್ವರನಿಗೆ ಅಧೀನರಾಗಿ ಎಲ್ಲೆಲ್ಲಿಯೂ ಇದ್ದುಕೊಂಡಿರುವರೋ ಅವರಿಗೆಲ್ಲ ನಮಸ್ಕಾರ! ಎಂದು ತಿಳಿಸಿದೆ. ಹಾಗೆಯೇ ತೃಹಂತಿಯಾದ ಉಗಣಗಳಿಗೂ ನಮಸ್ಕಾರ. ಉ-ಎಂದರೆ ಉತ್ಕೃಷ್ಟರಾದವರು; ಮತ್ತು ತೃಂಹಣವೆಂದರೆ ಹಿಂಸೆ; ಅಸುರರನ್ನೆಲ್ಲ ಹಿಂಸಿಸಲು ಸಮರ್ಥರಾದ ದುರ್ಗಾದಿಗಣದೇವತೆಗಳು ಹಾಗೂ ಸಪ್ತಮಾತೃಕೆಯರು ಎಂದರ್ಥ. ದುರ್ಗೆ, ಭೈರವಿ, ಚಾಮುಂಡಿ, ಕಾಳಿ, ಚಂಡಿ, ಚೌಡಿ-ಎಂದು ನಾವು ಹೆಸರಿಸುವ ಈ ದೇವಿಯರು ಲೋಕರಕ್ಷಣೆಯ ಭಾರವನ್ನು ಹೊತ್ತಿರುವರು. ಇವರುಗಳು ಶತ್ರುಗಳನ್ನು ಹಿಂಸಿಸಿ ಜಯಿಸುವದರಲ್ಲಿ ಗಟ್ಟಿಗರು. ಇವರೆಲ್ಲ ರುದ್ರನ ಶಕ್ತಿರೂಪರು. ಇವರಿಗೆಲ್ಲ ನಮಸ್ಕಾರವು.

ಗೃತ್ಸರೆಂದರೆ ಗರ್ಧನಶೀಲರು. ಅತಿಯಾದ ಆಶೆಯುಳ್ಳವರು. ಇಂಥವರ ಒಡೆಯರು ಗೃತ್ಸಪತಿಗಳು; ವಿಷಯಲಂಪಟರಾಗಿ ಅವುಗಳಲ್ಲಿಯೇ

ಮುಳುಗಿರುವ ಪ್ರಾಕೃತರು ಎಂದರ್ಥ. ಆದರೆ ಇವರುಗಳೂ ಪರಮಾರ್ಥವಾಗಿ ಪರಮೇಶ್ವರನ ಸ್ವರೂಪರೇ ಆಗಿರುತ್ತಾರೆ. ಸರ್ವಾತ್ಮಕನಾದ್ದರಿಂದಲೇ ಪರಮೇಶ್ವರನು ಇವರುಗಳಲ್ಲಿಯೂ ಇದ್ದೇಇರುತ್ತಾನಷ್ಟೆ! ಆದ್ದರಿಂದ ಇಂಥ ವಿಷಯಲಂಪಟರಾದ ಜನರನ್ನು ನಾವು ಕಂಡಾಗಲೂ ಅವರಲ್ಲಿಯೂ ಪರಮೇಶ್ವರನನ್ನೇ ಭಾವಿಸಿಕೊಳ್ಳಬೇಕು. ಈಗಿನ ಕಾಲಕ್ಕೆ ಈ ಅನುಸಂಧಾನವು ಅಗತ್ಯ. ಏಕೆಂದರೆ ಭೋಗಾಸಕ್ತರಾಗಿ ದೇವರ ವಿಷಯಕ್ಕೆ ಉದಾಸೀನರಾಗಿರುವವರನ್ನು ಕಂಡಾಗ ಆಸ್ತಿಕರಿಗೆ ಕೆಲವುವೇಳೆ ಕೋಪವು ಬರಬಹುದು. ಅದರ ಬದಲು ಅಂಥವರನ್ನೂ ಈಶ್ವರರೂಪದಿಂದಲೇ ಕಂಡುಕೊಳ್ಳುವದು ಹೆಚ್ಚಿನ ಸಾಧನವಾದೀತು.

ವ್ರಾತವೆಂದರೆ ಗುಂಪು. ವ್ರಾತಗಳ ಒಡೆಯರೇ ವ್ರಾತಪತಿಗಳು. ವಿನಾಯಕನನ್ನು ವ್ರಾತಪತಿಯೆಂದು ಉಪನಿಷತ್ತಿನಲ್ಲಿ ಸ್ತುತಿಸಿದೆ. ದೇವತೆಗಳಲ್ಲಿ ಅನೇಕ ಗುಂಪುಗಳಿವೆ. ಸಪ್ತಮರುತ್ತುಗಳು, ಅಷ್ಟವಸುಗಳು, ನವಗ್ರಹಗಳು, ಏಕಾದಶರುದ್ರರು, ದ್ವಾದಶಾದಿತ್ಯರು, ಅಶ್ವಿನೀದೇವತೆಗಳು, ಗೌರ್‍ಯಾದಿಷೋಡಶ ಮತ್ತು ಬ್ರಾಹ್ಮ್ಯಾದಿಸಪ್ತಮಾತೃಕೆಯರು-ಹೀಗೆ ಅನೇಕ ಗುಂಪುಗಳು ಪ್ರಸಿದ್ಧವಾಗಿರುತ್ತವೆ. ಇವರುಗಳು ಯಾವಾಗಲೂ ಒಟ್ಟಾಗಿಯೇ ಇರುತ್ತಾರೆ; ಇಂಥ ಗುಂಪು ಪರಮೇಶ್ವರನ ಸ್ವರೂಪವೇ ಆಗಿರುತ್ತವೆ-ಎಂದು ಅಭಿಪ್ರಾಯ. ಪ್ರತಿಯೊಂದು ಗುಂಪಿಗೂ ಒಬ್ಬ ಒಡೆಯನಿರುತ್ತಾನೆ. ಈ ದೇವತೆಗಳು ಪುರುಷರಾಗಿರಬಹುದು ಅಥವಾ ಸ್ತ್ರೀರೂಪರಾಗಿಯೂ ಇರಬಹುದು. ಇವರುಗಳ ಶಕ್ತಿಯೂ ಬಲವೂ ಸಾಮರ್ಥ್ಯವೂ ಐಶ್ವರ್ಯವೂ ಮಿಗಿಲಾದುದು. ಅಲ್ಲದೆ ಆಯಾ ದೇವತೆಗಳಿಗೇ ಅಸಾಧಾರಣವಾದ ರೂಪ, ಆಕಾರ, ವೇಷಭೂಷಣಗಳು, ಆಯುಧಗಳು-ಮುಂತಾಗಿ ಎಲ್ಲ ಸೌಕರ್ಯಗಳೂ ಇರುತ್ತವೆ. ಈ ಎಲ್ಲಾ ದೇವತೆಗಳನ್ನೂ ಅರಿತು ಪರಿಚಯಮಾಡಿಕೊಳ್ಳುವದೂ ಉಪಾಸನೆ ಮಾಡುವದೂ ಎಷ್ಟು ಕಷ್ಟವೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಪ್ರತಿಯೊಂದು ದೇವತೆಗೂ ಶಾಸ್ತ್ರೋಕ್ತವಾದ ಮಂತ್ರ, ಧ್ಯಾನ, ಪೂಜಾದಿಗಳ ವಿವರಣೆಯಿರುತ್ತದೆ. ಇದನ್ನೆಲ್ಲ ಆಲೋಚಿಸಿದರೆ ಮಾನವನ ಆಯುಷ್ಯವು ಏತಕ್ಕೂ ಸಾಲದು. ಆದರೆ ಪರಮೇಶ್ವರ ಸ್ವರೂಪದಿಂದ ಇವರೆಲ್ಲರನ್ನೂ ಅರಿತಾಗ ಈ ದೇವತೆಗಳ ಅನುಗ್ರಹವು ತಾನಾಗಿಯೇ ಆಗುತ್ತದೆ. ಏಕೆಂದರೆ

ದೇವತೆಗಳಿಗೂ ದೇವನಾದ ಮಹಾದೇವನಿಗಿಂತ ಇವರುಗಳು ಬೇರೆಯಲ್ಲ. ಅವನ ವಿಭೂತಿರೂಪರೇ ಆಗಿದ್ದಾರೆ. ಆದ್ದರಿಂದ 'ವ್ರಾತೇಭ್ಯಃ ವ್ರಾತಪತಿಭ್ಯಃ' ಎಂದು ಇಲ್ಲಿ ನಮಸ್ಕಾರವನ್ನು ಅರ್ಪಿಸಲಾಗಿದೆ.

ಮನುಷ್ಯರಲ್ಲಿಯೂ ಗುಂಪುಗಳಿಗೆ ವಿಶೇಷಗೌರವವುಂಟು. ಅವುಗಳನ್ನು ಒಂದೊಂದು ಜನಾಂಗವೆಂದು ಈಗ ರೂಢಿಯಲ್ಲಿ ಕರೆಯುತ್ತಾರೆ. ಪ್ರತಿಯೊಂದು ಜನಾಂಗದವರಿಗೂ ಅವರವರಿಗೇ ವಿಶೇಷವಾದ ಭಾಷೆ, ವೇಷ, ಸಂಸ್ಕೃತಿಗಳನ್ನು ನಾವು ಈಗಲೂ ಕಾಣಬಹುದು. ಇಂಥವುಗಳನ್ನು ಕಾಪಾಡಲು ಸರ್ಕಾರದವರು ಈಗ ಉದ್ಯುಕ್ತರಾಗಿದ್ದಾರೆ. ನಮ್ಮ ಭಾರತದೇಶದಲ್ಲಿ ದಕ್ಷಿಣದಿಂದ ಉತ್ತರದವರೆಗೆ, ಪೂರ್ವದಿಂದ ಪಶ್ಚಿಮದವರೆಗೆ ಇಂಥ ಅನೇಕ ಜನಾಂಗಗಳಿವೆ. ಒಬ್ಬೊಬ್ಬರ ಸಂಸ್ಕೃತಿಯೂ ಭಿನ್ನವಾಗಿದೆ. ಆದರೂ 'ನಾವು ಭಾರತೀಯರು' ಎಂಬ ಭಾವನೆ ಹೇಗೆ ಸರ್ವಸಮ್ಮತವೋ ಹಾಗೆ ವ್ರಾತಗಳೆಲ್ಲ ಪರಮೇಶ್ವರನೇ ಎಂಬ ಭಾವನೆಯೂ ಭಗವಂತನಿಗೆ ಸಲ್ಲಿಸುವ ಗೌರವವೇ– ಎಂಬುದು ವೇದದ ಅಭಿಪ್ರಾಯವಾಗಿದೆ. ಆದ್ದರಿಂದ ಈ ಸ್ತುತಿಯನ್ನು ಆಧಾರವಾಗಿಟ್ಟುಕೊಂಡು ಭಿನ್ನತೆಯಲ್ಲಿ ಏಕತ್ವವನ್ನು ಕಾಣುವ ದಿವ್ಯದೃಷ್ಟಿಯನ್ನು ಸಂಪಾದಿಸಲು ಯತ್ನಿಸಬೇಕು. ಎಲ್ಲ ಜನಾಂಗಗಳ ಹಾಗೂ ಅವರ ಜೀವನಾದಿಗಳ ಪರಿಚಯವನ್ನು ಸ್ವಲ್ಪವಾದರೂ ಮಾಡಿಕೊಳ್ಳಬೇಕು. ಇಷ್ಟೇ ಅಲ್ಲದೆ ಭಾರತದ ಹೊರಗಿರುವ ವಿದೇಶಗಳಲ್ಲಿಯೂ ತುಂಬಿರುವ ಜನಾಂಗಗಳನ್ನು ಭಗವಂತನ ವ್ರಾತಗಳೆಂದೂ ಅವುಗಳ ಒಡೆಯರನ್ನು ವ್ರಾತಪತಿಗಳೆಂದೂ ಭಾವಿಸಿದಲ್ಲಿ ಒಂದು ದೊಡ್ಡ ಉಪಾಸನೆಯೇ ಆದೀತು.

ಗಣೇಭ್ಯಃ ಗಣಪತಿಭ್ಯೋ ನಮಃ ಎಂಬುದನ್ನೀಗ ವಿಚಾರಮಾಡೋಣ. ವ್ರಾತಗಳಿಗೂ ಗಣಗಳಿಗೂ ವ್ಯತ್ಯಾಸವನ್ನು ತಿಳಿಸಲು ಭಾಷ್ಯಕಾರರು ಗಣಗಳೆಂದರೆ ಇಲ್ಲಿ ಪ್ರಮಥಗಣಗಳೆಂದು ತಿಳಿಸಿದ್ದಾರೆ. ಇವರುಗಳು ಪರಮೇಶ್ವರನ ಪರಿವಾರಕ್ಕೇ ನೇರಾಗಿ ಸೇರಿದವರಾಗಿರುತ್ತಾರೆ. ಸೃಷ್ಟಿಯ ಆರಂಭದಲ್ಲಿ ರುದ್ರನೂ ಸೃಷ್ಟಿಯನ್ನು ಕೈಗೊಂಡನಂತೆ. ಆಗ ಅವನಿಂದ ಸೃಷ್ಟರಾದವರೆಲ್ಲ ರುದ್ರನಂತೆಯೇ ಮರಣವಿಲ್ಲದವರಾಗಿಬಿಟ್ಟರು. ಹೀಗೆಯೇ ಮುಂದುವರಿದರೆ ಪ್ರಪಂಚದಲ್ಲಿ ಜಾಗವಿಲ್ಲದೆಹೋದೀತೆಂದು ಹೆದರಿ ಬ್ರಹ್ಮನು ರುದ್ರನಿಗೆ ಸೃಷ್ಟಿಮಾಡಬೇಡವೆಂದು ಕೇಳಿಕೊಂಡನಂತೆ. ಅವರೆಗೆ ಸೃಷ್ಟ

ರಾದವರೆಲ್ಲ ಗಣಗಳಾಗಿ ಪರಮೇಶ್ವರನ ಪರಿವಾರದಲ್ಲೇ ಸೇರಿಬಿಟ್ಟರು. ಇವರೇ ಪ್ರಮಥಗಣಗಳು- ಎಂದು ಪುರಾಣದಲ್ಲಿದೆ. ಗಣಪತಿಗಳೆಂದರೆ ನಂದಿಕೇಶ್ವರ, ವೀರಭದ್ರನೇ ಮೊದಲಾದವರು. ಇವರೆಲ್ಲರೂ ಪರಮೇಶ್ವರನಂತೆಯೇ ನಿತ್ಯ ಪೂಜ್ಯರು. ದೇವತಾರ್ಚನೆಯ ಕೊನೆಯಲ್ಲಿ ಆಸ್ತಿಕರು ಒಂದು ಶ್ಲೋಕವನ್ನು ಹೀಗೆ ಪಠಿಸುತ್ತಾರೆ: "ಬಾಣರಾವಣಚಂಡೀ ಚ ನಂದೀ ಭೃಂಗೀ ರಿಟಾದಯಃ । ಸದಾಶಿವಪ್ರಸಾದೋಽಯಂ ಸರ್ವೇ ಗೃಹ್ಣಂತು ಶಾಂಭವಾಃ" ಹೀಗೆಂದು ಹೇಳಿ ನಿವೇದನಮಾಡಿ ಪದಾರ್ಥದಲ್ಲಿ ಸ್ವಲ್ಪಭಾಗ ವನ್ನು ಗಣಗಳಿಗಾಗಿ ಬಲಿಹರಣವೆಂತ ಹಾಕುತ್ತಾರೆ. ಅಂತೂ ಬಾಣಾದಿ ರಾಕ್ಷಸರೂ ಸಹ ಪರಮೇಶ್ವರನ ಭಕ್ತರಾಗಿದ್ದು ಸ್ಥಾನಮಾನಗಳನ್ನು ಪಡೆದು ಗಣದೇವತೆಗಳಾಗಿದ್ದಾರೆ ; ಅವರೆಲ್ಲ ನಮಗೆಲ್ಲ ಪೂಜ್ಯರು – ಎಂದು ಅಭಿಪ್ರಾಯ. ಇಂಥ ಗಣಗಳಿಗೂ ಗಣಪತಿಗಳಾದವರಿಗೂ ನಮಸ್ಕಾರವೆಂತ ಇಲ್ಲಿ ತಿಳಿಸಿದೆ.

ನಮ್ಮ ದೇಶವನ್ನು 'ಗಣರಾಜ್ಯ'ವೆಂತ ಕರೆದಿದ್ದೇವೆ. ಪ್ರಜಾಪ್ರಭುತ್ವ ದಲ್ಲಿ ಪ್ರಜೆಗಳೇ ಸಾರ್ವಭೌಮರೆಂದೂ ಗೌರವಿಸಲಾಗಿದೆ. ಇಂಥ ಪ್ರಜೆಗಳಿಂದ ಚುನಾಯಿತರಾದ ಪ್ರತಿನಿಧಿಗಳ ಗುಂಪೇ ಗಣವು. ಆ ಗಣವು ಆರಿಸಿದ ವ್ಯಕ್ತಿಯೇ ಗಣಪತಿ- ಎಂದು ಭಾವಿಸಿದರೆ ತಪ್ಪಾಗಲಾರದು. ಇದು ನಮ್ಮ ವೈದಿಕಸಾಹಿತ್ಯದಿಂದಲೇ ಸಿದ್ಧವಾಗುತ್ತದೆಯೆಂದರೆ ಒಂದು ದೊಡ್ಡ ಗೌರವವೇ ದೊರೆತಂತಾಯಿತು. ಇದರಿಂದ ನಮ್ಮಲ್ಲಿ ದೇಶಭಕ್ತಿಯೂ ಈಶಭಕ್ತಿಯೂ ಒಂದಾಗಿ ಸೇರಿ ಇಹಪರಗಳೆರಡರಲ್ಲೂ ನಾವು ಶ್ರೇಯೋವಂತರಾಗಬಹು ದಲ್ಲವೆ? ದೇಶವು ಎಷ್ಟಾದರೂ ಏಕದೇಶ. ಈಶನೆಂಬುವನು ಸರ್ವವ್ಯಾಪಕನು. ಆದ್ದರಿಂದ ನಾವು ರುದ್ರಾಧ್ಯಾಯವನ್ನು ನಿತ್ಯವೂ ಪಠಿಸುವದರಿಂದ ದೇಶಭಕ್ತಿ ಈಶಭಕ್ತಿಗಳನ್ನು ಸಮರಸವಾಗಿ ಮಾಡಿಕೊಂಡು ಪರಮಶ್ರೇಯಸ್ಸನ್ನೇ ಹೊಂದಬಹುದಾಗಿದೆ. ಇಂಥ ವೇದವಾಣಿಗೆ ನಾವು ಯಾವಾಗಲೂ ವಿಧೇಯ ರಾಗಿ ನಡೆಯೋಣ.

---

## ೧೭. ನಮೋ ಮಹದ್ಭ್ಯಃ

'ಗಣಪತಿಭ್ಯಶ್ಚ ವೋ ನಮಃ' ಎಂಬುದರಿಂದ ಮುಂದಿನ ಭಾಗವನ್ನು ಈಗ ವಿಚಾರಮಾಡಬೇಕಾಗಿದೆ.

ನಮೋ ವಿರೂಪೇಭ್ಯೋ ವಿಶ್ವರೂಪೇಭ್ಯಶ್ಚ ವೋ ನಮೋ ನಮೋ ಮಹದ್ಭ್ಯಃ ಕ್ಷುಲ್ಲಕೇಭ್ಯಶ್ಚ ವೋ ನಮೋ ನಮೋ ರಥಿಭ್ಯೋಽರಥೇಭ್ಯಶ್ಚ ವೋ ನಮೋ ನಮೋ ರಥೇಭ್ಯೋ ರಥಪತಿಭ್ಯಶ್ಚ ನಮೋ ನಮಃ ಸೇನಾಭ್ಯಃ ಸೇನಾನಿಭ್ಯಶ್ಚ ವೋ ವೋ ನಮೋ ನಮಃ ಕ್ಷತ್ತೃಭ್ಯಃ ಸಂಗ್ರಹೀತೃಭ್ಯಶ್ಚ ವೋ ನಮೋ ನಮಸ್ತಕ್ಷಭ್ಯೋ ರಥಕಾರೇಭ್ಯಶ್ಚ ವೋ ನಮಃ ||

"ವಿರೂಪರಿಗೂ ವಿಶ್ವರೂಪರುಗಳಿಗೂ ಮಹಾಂತರಿಗೂ ಕ್ಷುಲ್ಲಕರಿಗೂ ರಥಿಗಳಿಗೂ ರಥವಿಲ್ಲದವರಿಗೂ ರಥಗಳಿಗೂ ರಥಪತಿಗಳಿಗೂ ಸೇನೆಗಳಿಗೂ ಸೇನಾನಿಗಳಿಗೂ ಕ್ಷತ್ತೃಗಳಿಗೂ ಸಂಗ್ರಹೀತೃಗಳಿಗೂ ತಕ್ಷರಿಗೂ ರಥಕಾರರಿಗೂ ನಮಸ್ಕಾರ!"

ವಿರೂಪರೆಂದರೆ ವಿಕಾರವಾದ ರೂಪವುಳ್ಳವರು ; ಲೋಕದಲ್ಲಿ ಒಬ್ಬೊಬ್ಬರು ಒಂದೊಂದು ವಿಧವಾಗಿರುತ್ತಾರೆ. ಆದರೂ ಕುರೂಪಿಗಳನ್ನು ಕಂಡರೆ ಎಲ್ಲರಿಗೂ ಅಸಹ್ಯವಾಗುತ್ತದೆ. ಕೆಲವರು ಹಾಸ್ಯವನ್ನೂ ಮಾಡುತ್ತಾರೆ. ಆದರೆ ದೇವರು ಕೊಟ್ಟಿರುವ ರೂಪವನ್ನು ನಾವು ಎಷ್ಟೇ ತಿದ್ದಿಕೊಂಡರೂ ಅಲಂಕರಿಸಿಕೊಂಡರೂ ಬದಲಾಯಿಸಿಕೊಳ್ಳಲಾಗುವದಿಲ್ಲ. ಆದ್ದರಿಂದ ವಿರೂಪರಾದವರನ್ನು ಕಂಡರೆ ಅವರಲ್ಲಿ ನಾವು ಪರಮೇಶ್ವರನ ಬುದ್ಧಿಯನ್ನೇ ಮಾಡಬೇಕು. ಅಲ್ಲದೆ ಪರಮೇಶ್ವರನ ಪ್ರಮಥಾದಿಗಣಗಳಲ್ಲಿಯಂತೂ ವಿರೂಪರಾದ ಅನೇಕವ್ಯಕ್ತಿಗಳೇ ಇದ್ದಾರೆ. ಆದರೆ ಅವರೆಲ್ಲ ಶಿವನ ಪರಮಭಕ್ತರು. ಅಂಥವರನ್ನೆಲ್ಲ ನಾವು ಗೌರವಿಸಿ ಪೂಜಿಸಲೇಬೇಕು. ಒಂದುಬಾರಿ ರಾವಣನು ಕೈಲಾಸದಲ್ಲಿ ನಂದಿಯನ್ನು ನೋಡಿ 'ಕಪಿಯ ಹಾಗಿದೆ' ಎಂತ ಹಾಸ್ಯಮಾಡಿದನಂತೆ. ಆಗ ನಂದಿಯು 'ನಿನ್ನ ಊರೆಲ್ಲ ಕಪಿಯಿಂದಲೇ ಹಾಳಾಗಲಿ!' ಎಂದು ಶಪಿಸಿದನಂತೆ. ಆದ್ದರಿಂದಲೇ ಹನುಮಂತನು ಬಂದು ಲಂಕೆಯನ್ನು ಹಾಳುಮಾಡಿದನು. ಹೀಗೆ ಶಿವಭಕ್ತರನ್ನು ಅಣಕಿಸುವದು ಮಹಾಪರಾಧವಾದ್ದರಿಂದ ಅವರನ್ನು ಗೌರವಿಸುವದನ್ನೇ ಕಲಿಯಬೇಕು. ವಿಶ್ವರೂಪರೆಂದರೆ ನಾನಾರೂಪವುಳ್ಳವರು. ಭಗವಂತನ ಸೃಷ್ಟಿಯೇ ವಿಶ್ವರೂಪವಾಗಿದೆ; ಚಿತ್ರವಿಚಿತ್ರವಾಗಿದೆ. ದೇವರು ಮಾಡಿರುವಂಥ ಒಂದು ಸೃಷ್ಟಿ

ಯನ್ನೂ ಮನುಷ್ಯನು ಮಾಡಲಾರನು. ಹಕ್ಕಿಪಕ್ಷಿಗಳು, ಕ್ರಿಮಿಕೀಟಗಳಿಂದ ಹಿಡಿದು ದೇವಮನುಷ್ಯಯಕ್ಷರಾಕ್ಷಸಕಿಂನರಕಿಂಪುರುಷಗಂಧರ್ವಾಪ್ಸರಾದಿಗಳ ಸೃಷ್ಟಿಗಳನ್ನು ನೋಡಿದರೆ ನಾನಾಪ್ರಕಾರವಾಗಿರುವದು ಕಂಡುಬರುತ್ತದೆ. ಇಂಥ ವಿಶ್ವರೂಪಗಳೂ ಮಹಾದೇವನ ವಿಭೂತಿಗಳೇ ಆದ್ದರಿಂದ ಎಲ್ಲಾ ರೂಪಗಳಿಗೂ ನಮಸ್ಕಾರವೆಂದಿದೆ.

**ಮಹಾಂತರಿಗೆ ನಮಸ್ಕಾರ.** ಮಹಾಂತರೆಂದರೆ ಅಣಿಮಾದಿ ಅಷ್ಟೈಶ್ವರ್ಯವುಳ್ಳವರು ಎಂದು ಭಾಷ್ಯದಲ್ಲಿದೆ. ಮಹಾತ್ಮರು ಎಂದು ಇವರನ್ನು ಕರೆಯಬಹುದು. ಐಶ್ವರ್ಯವೆಂದರೆ ಸ್ವಾತಂತ್ರ್ಯವೆಂದರ್ಥ. ದೇವತೆಗಳಿಗೆ ಅಡೆತಡೆಗಳಿಲ್ಲ. ಆಕಾಶಾದಿಗಳಲ್ಲಿಯೂ ಸಂಚರಿಸಬಲ್ಲರು. ಅವರ ಶರೀರಗಳೂ ಸೂಕ್ಷ್ಮ; ಅದೃಶ್ಯವಾಗಿರುವವು. ದೂರದೃಷ್ಟಿ, ಶ್ರವಣ- ಮುಂತಾದ ಎಲ್ಲಾ ಸೌಕರ್ಯಗಳಿದ್ದುಕೊಂಡಿರುವವರಾದ್ದರಿಂದ ಅವರು ಮಹಾಂತರೆಂದು ಕರೆಯಲ್ಪಟ್ಟಿರುತ್ತಾರೆ. ಅಂಥ ದೇವತೆಗಳಿಗೆ ಎಂದರೆ ಆಯಾ ರೂಪದಲ್ಲಿರುವ ಪರಮೇಶ್ವರನಿಗೆ ನಮಸ್ಕಾರ. ಕ್ಷುಲ್ಲಕರೆಂದರೆ ಸಾಮಾನ್ಯರು, ಸಿದ್ಧಿಗಳಿಲ್ಲದವರು ಮತ್ತು ಹುಲ್ಲುಕಡ್ಡಿಯವರೆಗೂ ಇದ್ದುಕೊಂಡಿರುವ ಜೀವರುಗಳು. ಪ್ರಪಂಚದಲ್ಲಿ ನಿಷ್ಪ್ರಯೋಜನವಾದ ವಸ್ತುವೇ ಇರುವದಿಲ್ಲ. ಆದರೆ ಅವುಗಳನ್ನು ಉಪಯೋಗಿಸಿಕೊಳ್ಳುವಂಥ ಜಾಣನು ಮಾತ್ರ ದುರ್ಲಭನೆಂದು ಹೇಳಬಹುದು. ಆದ್ದರಿಂದ ಅಲ್ಪವಾದವುಗಳೆಂಬ ಭಾವನೆಯಿಂದ ತಿರಸ್ಕಾರ ಮಾಡದೆ ಎಲ್ಲವನ್ನೂ ಪರಮೇಶ್ವರನ ಸ್ವರೂಪವೆಂದೇ ಭಾವಿಸಿ ಗೌರವಿಸಬೇಕು- ಎಂದರ್ಥ. ಕೆಲವು ಸಂದರ್ಭಗಳಲ್ಲಿ ದೊಡ್ಡ ಪದಾರ್ಥಗಳಿಗಿಂತ ಚಿಕ್ಕ ಪದಾರ್ಥಗಳೇ ಹೆಚ್ಚು ಅವಶ್ಯವಾಗಿಬಿಡುವವು. ಉದಾಹರಣೆಗೆ : ಒಂದು ಮದುವೆಯಲ್ಲಿ ಬೀಗರನ್ನು ಸಂತೋಷಗೊಳಿಸಲು ಸಮಸ್ತಸಿದ್ಧತೆಗಳೂ ಆಗಿದ್ದು ಊಟೋಪಚಾರಗಳು ಪೂರೈಸಿದ ಅನಂತರ ಕೈತೊಳೆಯುವಾಗ ಜಿಡ್ಡನ್ನು ಕಳೆಯಲು ಸೀಗೆಪುಡಿಯ ಆವಶ್ಯಕತೆಯುಂಟಾಯಿತು. ಯಜಮಾನನು ಅಕಸ್ಮಾತ್ ಅದನ್ನು ಮರೆತಿದ್ದನಾದ್ದರಿಂದ ಬೀಗರು ಕುಪಿತರಾದರೆಂತ ಒಂದು ಕಥೆ ಹೇಳುವದುಂಟು. ಹೀಗೆ ಯಾವದೇ ಪದಾರ್ಥವಾದರೂ ತನ್ನ ತನ್ನ ಅಸಾಧಾರಣಗುಣವನ್ನು ಹೊಂದಿದೆಯಾದ್ದರಿಂದ ಈಶ್ವರನ ದೃಷ್ಟಿಯಲ್ಲಿ ಎಲ್ಲಕ್ಕೂ ಪೂರ್ಣಬೆಲೆಯುಂಟು. ಆದ್ದರಿಂದ ಎಲ್ಲಾ ಮಹತ್ತಾದ ಹಾಗೂ ಕ್ಷುದ್ರವಾದ ವಸ್ತುಗಳನ್ನೂ ಗೌರವಿಸಬೇಕೆಂದು ಅಭಿಪ್ರಾಯ.

ಇನ್ನು ರಥಿಗಳು, ಅರಥರು, ರಥಗಳು, ರಥಪತಿಗಳು, ರಥಕಾರರು- ಇವರುಗಳಿಗೆಲ್ಲ ನಮಸ್ಕಾರವೆಂದಿದೆ. ರಥಿಗಳೆಂದರೆ ರಥವುಳ್ಳವರು, ರಥದ ಮಾಲೀಕರು ಎನ್ನಬಹುದು. ಒಂದು ರಥವನ್ನು ಒಬ್ಬನು ಇಟ್ಟುಕೊಳ್ಳಬೇಕಾದರೆ ಹಾಗೂ ಅದರಲ್ಲಿ ಸಂಚರಿಸಬೇಕಾದರೆ ಆತನು ಗಣ್ಯವ್ಯಕ್ತಿಯಾಗಿರಬೇಕು. ಈಗಿನ ಕಾಲಕ್ಕೆ ಕಾರು ಮಾಲೀಕರುಗಳನ್ನು ರಥಿಗಳೆಂದು ಭಾವಿಸಬಹುದಾಗಿದೆ. ಆದರೆ ಎಲ್ಲರಿಗೂ ಕಾರು ಇಟ್ಟುಕೊಳ್ಳುವ ಸೌಕರ್ಯವಿರುವದಿಲ್ಲ. ಆದ್ದರಿಂದ ಅರಥರೂ ಇದ್ದೇ ಇರುತ್ತಾರೆ. ಅಂಥವರಿಗೂ ನಮಸ್ಕಾರ. ಒಡವಬಲ್ಲಿದರೆಂಬ ಭೇದವಿಲ್ಲದೆ ಪರಮೇಶ್ವರನು ಎಲ್ಲರಲ್ಲಿಯೂ ಇದ್ದೇ ಇರುತ್ತಾನೆ. ರಥಗಳಿಗೂ ನಮಸ್ಕಾರ ಎಂದರೆ ಅವುಗಳಲ್ಲಿಯೂ ಭಗವಂತನೇ ಇರುತ್ತಾನೆಂದು ತಿಳಿಸಲು ಹೇಳಿರುತ್ತದೆ. 'ರಥೋತ್ಸವ'ವೆಂಬುದು ಪ್ರಸಿದ್ಧವಷ್ಟೆ! ಆ ಸಮಯದಲ್ಲಿ ದೇವರಿಗೆ ವಿಶೇಷಪೂಜಾದಿಗಳು ನಡೆಯುವವು. ರಥಕ್ಕೂ ಪೂಜೆ, ಬಲಿಪ್ರದಾನಾದಿಗಳನ್ನು ಮಾಡುವರು. ರಥದ ಅವಯವಗಳಲ್ಲೆಲ್ಲ ದೇವತೆಗಳು ಇರುತ್ತಾರೆ. 'ಬ್ರಹ್ಮರಥ'ವೆಂದು ಕರೆಯುವ ವಾಡಿಕೆಯೂ ಇದೆ. ಹೀಗೆ ರಥವು ದೇವತಾಸ್ವರೂಪವೇ ಆಗಿರುತ್ತದೆ. ಕಠೋಪನಿಷತ್ತಿನಲ್ಲಿ ಶರೀರವನ್ನೇ ರಥವೆಂದೂ ಆತ್ಮನನ್ನು ರಥಿಯೆಂದೂ ಕರೆದಿದೆ. ಈ ಅಭಿಪ್ರಾಯದಲ್ಲಿ ಎಲ್ಲ ಶರೀರಗಳೂ ರಥವಾಗಿಯೂ ಜೀವರುಗಳು ರಥಿಗಳಾಗಿಯೂ ಆಗಿರುತ್ತಾರಾದ್ದರಿಂದ ಸಮಸ್ತ ಚೇತನಾಚೇತನರೂಪಗಳಿಗೂ ನಮಸ್ಕಾರವೆಂದು ಹೇಳಿದಂತಾಯಿತು.

ಇನ್ನು ರಥಪತಿಗಳಿಗೆ ನಮಸ್ಕಾರವೆಂದರೇನೆಂಬುದನ್ನು ವಿಚಾರಿಸೋಣ. ರಥಕ್ಕೆ ಒಡೆಯನೇ ರಥಪತಿ. ಮತ್ತು ಅನೇಕರಥಗಳಿಗೆ ಒಡೆಯನಾದರೂ ರಥಪತಿಯೇ ಆಗಿರುವನು. ಯುದ್ಧಕಾಲದಲ್ಲಿ ರಾಜರು ಹಿಂದೆ ಅನೇಕರಥಗಳನ್ನು ಬಳಸುತ್ತಿದ್ದರು. ಅಂಥ ದೊಡ್ಡದೊಡ್ಡ ಚಕ್ರವರ್ತಿಗಳ ರೂಪದಲ್ಲಿರುವ ಪರಮೇಶ್ವರನಿಗೆ ನಮಸ್ಕಾರವೆಂದರ್ಥ. ರಥಕಾರರೆಂದರೆ ರಥಗಳನ್ನು ತಯಾರುಮಾಡುವವರು. ಅವರು ತಮ್ಮ ಬುದ್ಧಿಕೌಶಲದಿಂದ ತಯಾರಿಸಿದ ರಥಗಳೇ ಜನರಿಗೆ ಪ್ರಯೋಜನಕಾರಿಗಳಾಗಿರುತ್ತವೆ. ಈಗಿನ ಕಾಲಕ್ಕೆ ಕಾರು, ಬಸ್ಸು, ಲಾರಿ- ಮುಂತಾದ ವಾಹನಗಳನ್ನು ತಯಾರಿಸುವ ಕಂಪನಿಗಳವರೇ ರಥಕಾರರು. ಅವರಿಗೆ ಇರುವ ವಾಹನರಚನೆಯ

ಸಾಮರ್ಥ್ಯವು ಭಗವಂತನ ಅನುಗ್ರಹವೇ ಸರಿ. ಆದ್ದರಿಂದ ರಥಕಾರರ ರೂಪದಲ್ಲಿರುವ ಆ ಪರಮೇಶ್ವರನಿಗೆ ವಂದನೆಗಳು ಎಂದರ್ಥ.

ಸೇನೆಗಳಿಗೂ ಸೇನಾನಿಗಳಿಗೂ ನಮಸ್ಕಾರ. ಸೇನೆಯೆಂಬುದು ಅನೇಕ ಜನರಿಂದ ಗೂಡಿದ ಗುಂಪು. ಪಂಕ್ತಿ, ವನ- ಮುಂತಾದವುಗಳಂತೆ ಅದು ಅನೇಕ ಅವಯವಿವಸ್ತುಗಳಿಂದ ಕೂಡಿರುತ್ತದೆ. ಸೈನ್ಯವು ದೇಶದ ರಕ್ಷಣೆಗೆ ಅತ್ಯಗತ್ಯ. ಅದಕ್ಕಾಗಿ ಈಗ ಪ್ರತಿಯೊಂದು ದೇಶದವರೂ ತಮ್ಮ ಆದಾಯದ ಅರ್ಧಕ್ಕೂ ಹೆಚ್ಚಿನ ಭಾಗವನ್ನು ಖರ್ಚುಮಾಡುವರು. ಹೀಗೆ ರಕ್ಷಣೆಯನ್ನು ಒದಗಿಸುವ ಸೇನೆಯೂ ಅದರ ನಾಯಕರಾದ ಸೇನಾನಿಗಳೂ ಪರಮೇಶ್ವರನ ಸ್ವರೂಪರೇ ಎಂದರ್ಥ. ಮನುಷ್ಯರಲ್ಲಿ ಮಾತ್ರವಲ್ಲದೆ ದೇವಾಸುರರುಗಳಲ್ಲಿಯೂ ಸೈನ್ಯವ್ಯವಸ್ಥೆಯುಂಟು. ದೇವಸೇನಾಪತಿಯೆಂದು ಷಣ್ಮುಖನಿಗೆ ಹೆಸರು. 'ಸೇನಾನೀನಾಮಹಂ ಸ್ಕಂದಃ' ಎಂದು ಭಗವಂತನು ತನ್ನ ವಿಭೂತಿಯಾಗಿ ಸ್ಕಂದನನ್ನು ತಿಳಿಸಿರುತ್ತಾನೆ. ಸೇನಾನಿಗಳ ಬೆಂಬಲವಿದ್ದರೆ ಮಾತ್ರ ರಾಜ್ಯವನ್ನಾಳಬಹುದು. ಅಂಥ ಸೇನಾನಿಗಳಿಗೆ ನಮಸ್ಕಾರ ಎಂದಿರುತ್ತಾರೆ.

ಕ್ಷತ್ತೃಗಳಿಗೂ ಸಂಗ್ರಹೀತೃಗಳಿಗೂ ನಮಸ್ಕಾರ! ರಥಗಳನ್ನು ನಡೆಯಿಸುವವರು ಕ್ಷತ್ತೃಗಳು. ಎಂಥ ಗಟ್ಟಿಗನಾದ ರಥಿಕನಾದರೂ ಸರಿಯಾದ ಸಾರಥಿ ಇಲ್ಲದಿದ್ದರೆ ಯುದ್ಧಮಾಡಲಾರನು. ಭಗವಂತನೇ ಪಾರ್ಥಸಾರಥಿಯಾಗಿ ನಿಂತು ಅರ್ಜುನನ ರಥವನ್ನು ನಡೆಯಿಸಿದ್ದು ಪ್ರಸಿದ್ಧವೇ ಆಗಿದೆಯಷ್ಟೆ! ನಮ್ಮ ಜೀವನವೆಂಬ ರಥವನ್ನು ಭಗವಂತನೇ ಸಾರಥಿಯಾಗಿ ನಿಂತು ನಡೆಯಿಸಿದಲ್ಲಿ ಮಾತ್ರ ಅದು ಮಂಗಳಕರವಾದ ಗತಿಯನ್ನು ಪಡೆದೀತು. ಆದ್ದರಿಂದ ಕ್ಷತ್ತೃರೂಪನಾಗಿ ಅನುಗ್ರಹಿಸೆಂದು ಅವನನ್ನು ನಾವು ಬೇಡಿಕೊಳ್ಳಬೇಕಾಗಿದೆ. ಇನ್ನು ಸಂಗ್ರಹೀತೃಗಳೆಂದರೆ ರಥಗಳನ್ನು ನಿಯಮನಮಾಡುವವರು; ಎಂದರೆ ಹತ್ತಾರುರಥಗಳನ್ನು ಹೊಂದಿದ್ದು ಅವುಗಳನ್ನು ಸರಿಯಾದ ದಿಕ್ಕಿಗೆ ನಡೆಯಿಸುವಂತೆ ಸೂಚನೆಕೊಡುವವರು. ಕಂಟ್ರೋಲರ್ ಎಂದು ಭಾವಿಸಬಹುದು. ಅವರುಗಳು ಪರಮೇಶ್ವರನ ಸ್ವರೂಪರೇ ಆಗಿದ್ದಾರೆ. ತಕ್ಷರೆಂದರೆ ಬಡಗಿಗಳೂ, ಮರಗೆಲಸಮಾಡುವವರು. ದೇವತೆಗಳಲ್ಲಿ ವಿಶ್ವಕರ್ಮನೆಂಬವನು ಇಂಥ ತಕ್ಷನೆಂದು ಪ್ರಸಿದ್ಧಿಯಿದೆ. ಹೀಗೆ ನಾನಾರೂಪದಿಂದ ತೋರಿಕೊಳ್ಳುತ್ತಿರುವ ಎಲ್ಲಾ ರುದ್ರಮೂರ್ತಿಗಳಿಗೂ ನಮಸ್ಕಾರ! ಎಂಬುದು ತಾತ್ಪರ್ಯಾರ್ಥವಾಗಿದೆ.

---

## ೧೮. ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ

ರುದ್ರಾಧ್ಯಾಯದ ನಾಲ್ಕನೆಯ ಅನುವಾಕದ ಕೊನೆಯ ಭಾಗವನ್ನು ಈಗ ವಿಚಾರಮಾಡಬೇಕಾಗಿದೆ.

ನಮಃ ಕುಲಾಲೇಭ್ಯಃ ಕರ್ಮಾರೇಭ್ಯಶ್ಚ ವೋ ನಮೋ ನಮಃ ಪುಂಜಿಷ್ಟೇಭ್ಯೋ ನಿಷಾದೇಭ್ಯಶ್ಚ ವೋ ನಮೋ ನಮ ಇಷುಕೃದ್ಭ್ಯೋ ಧನ್ವಕೃದ್ಭ್ಯಶ್ಚ ವೋ ನಮೋ ನಮೋ ಮೃಗಯುಭ್ಯಃ ಶ್ವನಿಭ್ಯಶ್ಚ ವೋ ನಮೋ ನಮಃ ಶ್ವಭ್ಯಃ ಶ್ವಪತಿಭ್ಯಶ್ಚ ವೋ ನಮಃ ॥

"ಕುಂಬಾರರಿಗೂ ಕಮ್ಮಾರರಿಗೂ ಹಕ್ಕಿಗಳ ಗುಂಪನ್ನು ಹೊಡೆಯುವವರಿಗೂ, ನಾಯಿಯನ್ನು ಬೇಯಿಸಿ ತಿನ್ನುವವರಿಗೂ ಬಾಣಗಳನ್ನು ತಯಾರಿಸುವವರಿಗೂ ಬಿಲ್ಲುಗಳನ್ನು ತಯಾರಿಸುವವರಿಗೂ ಬೇಟೆಗಾರರಿಗೂ ನಾಯಿಗಳನ್ನು ಹಿಡಿದುಕೊಂಡು ಸಂಚರಿಸುವವರಿಗೂ ನಾಯಿಗಳಿಗೂ ನಾಯಿಗಳ ಯಜಮಾನರಿಗೂ ನಮಸ್ಕಾರ!"

ಈ ಮಂತ್ರಭಾಗವನ್ನು ತಟ್ಟನೆ ನೋಡಿದಾಗ ಪರಮೇಶ್ವರನ ಸ್ತುತಿಯು ಇದು ಹೇಗಾದೀತು? ಎನಿಸುತ್ತದೆ. ಏಕೆಂದರೆ ತೀರ ನಿಕೃಷ್ಟವೆಂತ ನಾಗರಿಕರು ವ್ಯವಹಾರದಲ್ಲಿ ಭಾವಿಸಿರುವ ಮನುಷ್ಯರನ್ನೂ ಪ್ರಾಣಿಗಳನ್ನೂ ಪರಮೇಶ್ವರ ಸ್ವರೂಪರೆಂದೇ ಇಲ್ಲಿ ಹೇಳಿದೆ. ಆದ್ದರಿಂದ ಯಾರಿಗಾದರೂ ಇದು ಭಗವಂತನ ಸ್ತುತಿಯು ಹೌದೆ? ಎಂದು ಸಂಶಯವು ಬರುತ್ತದೆ. ಆದರೆ ಅನಾದಿಯಾಗಿರುವ ಈ ವೇದಭಾಗವನ್ನು ನಾವು ಬೇಡವೆಂತ ಕಿತ್ತುಹಾಕುವದಾಗಲಿ, ತಿದ್ದುವದಾಗಲಿ ಸಾಧ್ಯವಿಲ್ಲವಷ್ಟೆ! ಹಿಂದೆ ಒಮ್ಮೆ ರಾಷ್ಟ್ರಾಶೀರ್ವಾದವನ್ನು ದೇವಾಲಯಗಳಲ್ಲಿ ಪಠಿಸುವಂತೆ ಜಾರಿಗೆ ಕೊಟ್ಟ ಕಾಲದಲ್ಲಿ 'ಗೋಬ್ರಾಹ್ಮಣೇಭ್ಯಃ' ಎಂಬಿದನ್ನು ಯಾರೋ 'ಗೋಸಜ್ಜನೇಭ್ಯಃ' ಎಂದು ಬದಲಾಯಿಸಿದರು. ಆದರೆ ಹಾಗೆ ಬದಲಾಯಿಸುವ ಅಗತ್ಯವಿರಲಿಲ್ಲ. ಒಂದುವೇಳೆ ಅದು ಶ್ಲೋಕವಾದ್ದರಿಂದ ಹಾಗೆ ಬದಲಾಯಿಸಿದರೂ ತಪ್ಪಾಗಲಾರದು. ಇಲ್ಲಿ ಮಾತ್ರ ಬದಲಾವಣೆಯು ಎಂದಿಗೂ ಸಾಧ್ಯವೇ ಇಲ್ಲ. ಆದರೂ ಈ ಮಂತ್ರವನ್ನು ಪವಿತ್ರವೆಂದೇ ಭಾವಿಸಿ ಬ್ರಾಹ್ಮಣರು ಅಧ್ಯಯನಮಾಡುತ್ತಾರೆ;

ದೇವರಿಗೆ ಅಭಿಷೇಕಮಾಡುತ್ತಾರೆ. ಹೋಮಗಳಲ್ಲಿ ವಿನಿಯೋಗಿಸುತ್ತಾರೆ. ಇದೆಲ್ಲ ಹೇಗೆ ಸಮಂಜಸವಾಯಿತು ? ಎಂದು ಆಕ್ಷೇಪಿಸಬಹುದಾಗಿದೆ.

ಇದಕ್ಕೆ ಉತ್ತರವೇನೆಂದರೆ : ವೇದಮಾತೆಗೆ ಮೇಲುಕೀಳುಗಳೆಂಬ ಉಪಾಧಿಭೇದದ ಬಗ್ಗೆ ತಾತ್ಪರ್ಯವೇ ಇಲ್ಲ. ಸರ್ವೇಶ್ವರನೂ ಸರ್ವಾಂತರನೂ ಆದ ಭಗವಂತನನ್ನು ಯಾವಯಾವ ರೀತಿಯಿಂದ ಸ್ತುತಿಸಿದರೂ ಆ ಸ್ತುತಿಯೆಲ್ಲವೂ ಸರ್ವವ್ಯವಹಾರಾತೀತನಾದ ಆ ಪರಮೇಶ್ವರನನ್ನು ಮುಟ್ಟುವದೇ ಇಲ್ಲ. ಏಕೆಂದರೆ ಅವಾಙ್ಮನಸಗೋಚರನಾದ ಆ ಭಗವಂತನು ಎಲ್ಲಾ ವೇದಗಳನ್ನೂ ಮೀರಿರುತ್ತಾನೆ. ಆದ್ದರಿಂದ ಉಪಾಧಿವಿಶಿಷ್ಟನಾಗಿ ತೋರಿಕೊಳ್ಳುವಾಗ ಆತನು ಹೇಗೇ ತೋರಿಕೊಳ್ಳಲಿ - ಅವನನ್ನು ಪರಬ್ರಹ್ಮವೆಂದೇ ಬಲ್ಲವರು ಗುರುತಿಸುತ್ತಾರೆ. ಅಜ್ಞಾನಿಗಳು ಮಾತ್ರ ಆಯಾ ಉಪಾಧಿಗಳಲ್ಲಿಯೇ ಮನಸ್ಸಿಟ್ಟವರಾಗಿ ಪರಮೇಶ್ವರನನ್ನು ಮರೆತೇಬಿಡುತ್ತಾರೆ. ಹೀಗೆ ಮೋಸಹೋಗುವವರನ್ನು ತಿದ್ದಿ ಎಲ್ಲಾ ಉಪಾಧಿಗಳಲ್ಲಿಯೂ ಒಬ್ಬ ಪರಮಾತ್ಮನೇ ಸಾಕ್ಷಿಯಾಗಿ ಇದ್ದುಕೊಂಡಿರುತ್ತಾನೆ–ಎಂಬುದನ್ನು ತಿಳಿಸುವದಕ್ಕಾಗಿಯೇ ವೇದಮಾತೆಯು ಈಗ ಹೊರಟಿರುತ್ತಾಳೆ.

ಒಂದು ದೃಷ್ಟಾಂತದಿಂದ ಈ ವಿಷಯವನ್ನು ಚೆನ್ನಾಗಿ ಮನಗಾಣಬಹುದು. ಪರಮೇಶ್ವರನು ಪ್ರತಿಯೊಬ್ಬ ಜೀವರಲ್ಲಿಯೂ ತಾನೇ ಪ್ರವೇಶಮಾಡಿ ಇದ್ದುಕೊಂಡಿರುವನಾದರೆ ಆಯಾ ಉಪಾಧಿಗಳ ಗುಣದೋಷಗಳು ಅವನಿಗೆ ಅಂಟಬೇಡವೆ ? ಎಂಬ ಆಕ್ಷೇಪಕ್ಕೆ ಉತ್ತರವಾಗಿ ಉಪನಿಷತ್ತಿನಲ್ಲಿ ಒಂದು ಉದಾಹರಣೆಯನ್ನು ಕೊಟ್ಟಿದೆ. ಸೂರ್ಯನು ಆಕಾಶದಲ್ಲಿದ್ದುಕೊಂಡು ತನ್ನ ಕಿರಣಗಳಿಂದ ಎಲ್ಲಾ ವಸ್ತುಗಳನ್ನೂ ಬೆಳಗುತ್ತಾನಷ್ಟೆ ! ಹಾಗೆ ಕಿರಣಗಳಿಂದ ಅವನು ಎಲ್ಲವನ್ನೂ ಮುಟ್ಟುವಾಗ ಅಪವಿತ್ರವೆಂದು ನಾವು ಭಾವಿಸುವ ಮೃತಶರೀರ, ಅಸ್ಥಿ, ಮಾಂಸ, ಮಲಮೂತ್ರಾದಿಗಳು– ಎಲ್ಲವನ್ನೂ ಸ್ಪರ್ಶಿಸಿಯೇತೀರುತ್ತಾನೆ. ಅದೇ ಸೂರ್ಯನು ನದಿ, ದೇವಾಲಯ, ದೇವತಾವಿಗ್ರಹಗಳು, ಶುಚಿಯಾದ ಜನರು ಇವೆಲ್ಲವನ್ನೂ ಮುಟ್ಟುತ್ತಾನೆ. ಆದರೆ ಇದರಿಂದ ಸೂರ್ಯನಿಗೇನಾದರೂ ಗುಣದೋಷಗಳು ಅಂಟುತ್ತವೆಯೊ ? ಅಥವಾ ಅದೇ ಸೂರ್ಯನೇ ತನ್ನ ಬೆಳಕಿನಿಂದ ಮಂತ್ರಿಮಹೋದಯರುಗಳ ಬಂಗಲೆಗಳನ್ನೂ ಕೊಳಚೆನಿವಾಸಿಗಳ ಗುಡಿಸಲುಗಳನ್ನೂ ಸಮಾನವಾಗಿಯೇ ಬೆಳಗು

ತ್ತಾನೆ. ಇದರಿಂದ ಸೂರ್ಯನಮೇಲೆ ಯಾರಾದರೂ ವಿಚಾರಣೆಯನ್ನು ದಾಖಲುಮಾಡಲಾದೀತೆ ? ಅಥವಾ ಬೆಳಕು ಇಂಥಿಂಥವರಿಗೆ ಮಾತ್ರವೇ-ಎಂದು ನಿಯಂತ್ರಿಸಲು ಸಾಧ್ಯವಾಗಿದೆಯೆ ? ಯಾವದೇ ದೇಶದವರಾಗಲಿ, ಸೂರ್ಯನನ್ನು ತಮ್ಮವನನ್ನಾಗಿ ಮಾಡಿಕೊಂಡು ಉಳಿದ ದೇಶದವರಿಗೆ ಆತನ ಬೆಳಕುಶಾಖಗಳು ದೊರೆಯದಂತೆ ಮಾಡಲು ಸಾಧ್ಯವಾಗಿದೆಯೆ ? ಇವಕ್ಕೆಲ್ಲ ಒಂದೇ ಉತ್ತರ 'ಇಲ್ಲ' ಎಂಬುದು. ಅದರಂತೆಯೇ ಪರಮೇಶ್ವರನೂ ವಿದ್ಯಾ ವಿನಯಸಂಪನ್ನರಾದ ಬ್ರಾಹ್ಮಣರಲ್ಲಿಯೂ ಗೋವಿನಲ್ಲಿಯೂ ಆನೆಯಲ್ಲಿಯೂ ನಾಯಿಯಲ್ಲಿಯೂ ಚಂಡಾಲನಲ್ಲಿಯೂ ಒಂದೇ ಸಮನಾಗಿರುತ್ತಾನೆ. ನ್ಯಾಯಾಧಿಪತಿಯಲ್ಲಿಯೂ ಅಪರಾಧಿಯಲ್ಲಿಯೂ ಅವಿದ್ಯಾವಂತನಲ್ಲಿಯೂ ದಡ್ಡನಲ್ಲಿಯೂ ರೋಗಿಷ್ಠನಲ್ಲಿಯೂ ವೈದ್ಯನಲ್ಲಿಯೂ ಸಮನಾಗಿಯೇ ಇರುತ್ತಾನೆ. ಅವನನ್ನು ಯಾರೂ ಕಟ್ಟುಮಾಡುವದು ಸಾಧ್ಯವಿಲ್ಲ. ಅವನೇ ಎಲ್ಲರಿಗೂ ಒಡೆಯನು ಆದರೆ ಆತನನ್ನು ಎಲ್ಲೆಲ್ಲಿಯೂ ದರ್ಶನಮಾಡುವ ದಿವ್ಯದೃಷ್ಟಿಯು ಮಾತ್ರ ನಮಗೆ ಬೇಕು. ಅದನ್ನೇ ಶ್ರುತಿಮಾತೆಯು ಇಲ್ಲಿ ನಮಗೆ ತೆರೆಯಿಸಿ ಭೇದಭಾವವನ್ನು ಬಿಡಿಸಿ ಎಲ್ಲಾ ವಸ್ತುಗಳಲ್ಲಿಯೂ ಪರಮೇಶ್ವರನ ದರ್ಶನವನ್ನು ಮಾಡಿಸಿರುತ್ತಾಳೆ.

ಇಲ್ಲಿ ಕುಲಾಲರೆಂದು ಕುಂಬಾರರನ್ನು ಪರಾಮರ್ಶಿಸಿದೆ. ಕರ್ಮಾರರೆಂದು ಕಮ್ಮಾರ(ಕಬ್ಬಿಣದ ಕೆಲಸಮಾಡುವವ)ರನ್ನು ತಿಳಿಸಿದೆ. ಇವರಿಬ್ಬರೂ ಕಾರ್ಮಿಕರು. ಜನಸಾಮಾನ್ಯರಿಗೆಲ್ಲ ಬೇಕಾದವರು. ಪ್ರತಿಯೊಂದು ಹಳ್ಳಿಯಲ್ಲಿಯೂ ಈ ಕಸುಬಿನವರು ಇದ್ದೇಇರುತ್ತಾರೆ. ನಾವೆಲ್ಲರೂ ಇವರನ್ನು ಎಷ್ಟೋಬಾರಿ ಕಂಡಿದ್ದೇವಾದರೂ ಇವರುಗಳನ್ನು ಪರಮೇಶ್ವರಸ್ವರೂಪರೆಂದು ಮಾತ್ರ ಭಾವಿಸಿರುವದಿಲ್ಲ. ಹೀಗೆ ಪರಮೇಶ್ವರನು ನಮಗೆ ಸುಲಭವಾಗಿಯೇ ಕಂಡುಬರುತ್ತಿದ್ದರೂ ನಾವು ಅವನನ್ನು ಗುರುತಿಸಲಾರದೆ ಇದ್ದೇವೆ. ಆದರೆ ಈ ಸ್ತುತಿಯಿಂದ ಕುಂಬಾರರೂ ಕಮ್ಮಾರರೂ ಅಹಂಕಾರಪಟ್ಟುಕೊಳ್ಳಬೇಕಾಗಿಲ್ಲ. ಅವರುಗಳ ಆತ್ಮನನ್ನು ಮಾತ್ರ ಪರಮೇಶ್ವರನೆಂದು ಇಲ್ಲಿ ಹೇಳಿರುವದರಿಂದ ಆತ್ಮರೂಪದಿಂದ ಎಲ್ಲರೂ ಪರಮೇಶ್ವರರೇ ಆಗಿರುತ್ತಾರೆ. ಹಾಗೆಯೇ ಪುಂಜಿಷ್ಟನಿಷಾದರನ್ನೂ ತಿಳಿಯಬೇಕು. ಪುಂಜಿಷ್ಟರೆಂಬವರು ಕಾಡುಗಳಲ್ಲಿ ಸಂಚರಿಸುತ್ತಾ ಹಕ್ಕಿಗಳನ್ನು ಕೊಲ್ಲುವವರು. ನಿಷಾದರೆಂಬವರು ಬೇಡರ ಜಾತಿಯವರು ಅಥವಾ ಬೆಸ್ತರು ಎಂದಾದರೂ ಕರೆಯಬಹುದು.

ಇವರುಗಳ ಕರ್ಮವನ್ನು ನೋಡಿದರೆ ತುಂಬ ಪಾಪಿಷ್ಠರೆನಿಸುವರು. ಆದರೆ ಪಾಪ, ಪುಣ್ಯಗಳೆಂಬಿವು ಅಸಂಗನಾದ ಆತ್ಮನಿಗೆ ಎಂದಿಗೂ ಅಂಟಲಾರವು. ಹೀಗೆ ಪಾಪಿಷ್ಠರಾದವರ ಶರೀರದಲ್ಲಿಯೂ ಪರಮಾತ್ಮನೇ ಇದ್ದುಕೊಂಡಿರುವನು. ಹೆಚ್ಚೇಕೆ ? ಪರಮೇಶ್ವರನೇ ಕಿರಾತವೇಷದಿಂದ ಅರ್ಜುನನಿಗೆ ತೋರಿಕೊಂಡಾಗ ಅರ್ಜುನನಂಥ ಭಕ್ತನೂ ಮೊದಲು ಆತನನ್ನು ಗುರುತಿಸಲಾರದೆ ಹೋದನು. ಶಂಕರಭಗವತ್ಪಾದರಿಗೆ ಚಂಡಾಲವೇಷದಿಂದ ಪರಮೇಶ್ವರನು ಕಾಶಿಯಲ್ಲಿ ದರ್ಶನಕೊಟ್ಟನೆಂದೂ ಅವನೊಡನೆ ನಾಲ್ಕು ನಾಯಿಗಳಿದ್ದವೆಂದೂ ಅವೇ ನಾಲ್ಕು ವೇದಗಳೆಂದೂ ಶಂಕರವಿಜಯದಲ್ಲಿ ಕಥೆಯಿದೆ. ಹೀಗೆ ಪರಮೇಶ್ವರನು ಕಿರಾತನಾಗಿಯೂ ಬೇಡನಾಗಿಯೂ ತೋರಿಕೊಳ್ಳುವದು, ತಾನೇ ಮತ್ಸ್ಯ (ಮೀನು), ಕೂರ್ಮ (ಆಮೆ), ವರಾಹ (ಹಂದಿ)– ಮುಂತಾದ ರೂಪಗಳಿಂದ ಅವತಾರಮಾಡುವದು - ಇವೆಲ್ಲ ಇತಿಹಾಸಪುರಾಣಗಳನ್ನು ಕೇಳಿರುವವರಿಗೆ ತಿಳಿದೇಇದೆ.

ಇನ್ನು ಬಾಣಗಳನ್ನೂ ಧನುಸ್ಸನ್ನೂ ತಯಾರಿಸುವವರು, ಬೇಟೆಗಾರರು, ನಾಯಿಗಳ ಪಾಲಕರು– ಎಂದು ವರ್ಣಿಸಿರುವಲ್ಲಿಯೂ ಪರಮೇಶ್ವರನ ವಿಭೂತಿಗಳನ್ನು ಕಾಣಬಹುದಾಗಿದೆ. ಧನುರ್ಬಾಣಗಳಂಥ ಯುದ್ಧಸಾಮಗ್ರಿಗಳ ತಯಾರಕರೂ ಬೇಟೆಗಾರರೂ ಪ್ರಸಿದ್ಧರಾಗಿಯೇ ಇದ್ದಾರೆ. ಶ್ವನಿಗಳು, ಶ್ವಪತಿಗಳು– ಎಂಬವರನ್ನೂ ನಾವು ನೋಡಿಯೇಇದ್ದೇವೆ. ಪಟ್ಟಣಗಳಲ್ಲಿ ಮನೆಯ ಕಾವಲಿಗಾಗಿ ನಾಯಿಗಳನ್ನು ಸಾಕುವದು ತೀರ ಸಾಮಾನ್ಯ. ಅವುಗಳಿಂದ ಉಪಯೋಗವಿರುವಷ್ಟೇ ಕೆಲವುವೇಳೆ ಹಾನಿಯೂ ಉಂಟು. ಆದರೇನು ? ನಾಯಿಗಳೊಡನೆ ಗಾಳಿಯ ಸಂಚಾರಕ್ಕಾಗಿ ಹೊರಡುವವರನ್ನೂ ನಾವು ಕಂಡಿಲ್ಲವೆ ? ಅಂಥ ಸಂದರ್ಭಗಳಲ್ಲೆಲ್ಲ ಪರಮೇಶ್ವರನ ಸ್ಮರಣೆಯನ್ನೇ ಮಾಡುತ್ತಾ ಈ ಅನುಸಂಧಾನವನ್ನು ಮಾಡಬೇಕು.

ಅಂತೂ ಅಧ್ಯಾತ್ಮದೃಷ್ಟಿಯಿಂದ ವಿಶಾಲವಾಗಿ ಪರಿಶೀಲಿಸಿದಾಗ ಪ್ರಪಂಚದಲ್ಲಿ ಕಾಣುವ ಉಚ್ಚನೀಚಭಾವನೆಗಳನ್ನೆಲ್ಲ ಕಳೆದುಹಾಕಿ ಎಲ್ಲಾ ಉಪಾಧಿಗಳಲ್ಲಿಯೂ ಒಳಹೊಕ್ಕಿದ್ದರೂ ಯಾವ ಉಪಾಧಿಧರ್ಮಗಳ ಸೋಂಕೂ ಇಲ್ಲದೆ ಇದ್ದುಕೊಂಡಿರುವ ಪರಮೇಶ್ವರನನ್ನು ಸದಾಕಾಲವೂ ಅನುಸಂಧಾನ ಮಾಡುತ್ತಿರುವವರೇ ನಿಜವಾದ ಜ್ಞಾನಿಗಳು– ಎಂದು ಇಲ್ಲಿ ತಿಳಿಸಿದಂತಾಗಿದೆ.

# ೧೯. ನಮೋ ಭವಾಯ ಚ

ರುದ್ರಾಧ್ಯಾಯದ ಐದನೆಯ ಅನುವಾಕವನ್ನು ಈಗ ವಿಚಾರಮಾಡಬೇಕಾಗಿದೆ. ಈ ಅನುವಾಕದ ಮೊದಲನೆಯ ಮಂತ್ರಭಾಗವು ಹೀಗಿದೆ :-

ನಮೋ ಭವಾಯ ಚ ರುದ್ರಾಯ ಚ ನಮಃ ಶರ್ವಾಯ ಚ ಪಶುಪತಯೇ ಚ ನಮೋ ನೀಲಗ್ರೀವಾಯ ಚ ಶಿತಿಕಂಠಾಯ ಚ ನಮಃ ಕಪರ್ದಿನೇ ಚ ವ್ಯುಪ್ತಕೇಶಾಯ ಚ ನಮಃ ಸಹಸ್ರಾಕ್ಷಾಯ ಚ ಶತಧನ್ವನೇ ಚ ||

"ಭವನಿಗೂ ರುದ್ರನಿಗೂ ಶರ್ವನಿಗೂ ಪಶುಪತಿಗೂ ನೀಲಗ್ರೀವನಿಗೂ ಶಿತಿಕಂಠನಿಗೂ ಕಪರ್ದಿಗೂ ವ್ಯುಪ್ತಕೇಶನಿಗೂ ಸಹಸ್ರಾಕ್ಷನಿಗೂ ಶತಧನ್ವನಿಗೂ ನಮಸ್ಕಾರವು"

ಈ ಅನುವಾಕಗಳಲ್ಲಿ ನಮಃಶಬ್ದವು ಒಮ್ಮೆ ಮಾತ್ರ ಪ್ರಯುಕ್ತವಾಗುತ್ತದೆ. ಎಂದರೆ ಉಭಯತೋನಮಸ್ಕಾರಮಂತ್ರಗಳಂತೆ ಇಲ್ಲಿ ಹಿಂದೆಯೂ ಮುಂದೆಯೂ ಎರಡು ಸಲ ನಮಃಶಬ್ದವು ಬರುವದಿಲ್ಲ. ಮತ್ತು ಎರಡೆರಡು ನಾಮಗಳಿಗೆ ಒಂದೊಂದು ನಮಃ ಶಬ್ದವಿರುತ್ತದೆ. ಆದ್ದರಿಂದ 'ನಮೋ ಭವಾಯ ಚ ರುದ್ರಾಯ ಚ' ಎಂದು ನಮಸ್ಕಾರಾದಿಯಾಗಿರುವದು ಒಂದು ಮಂತ್ರವು. ಇದರಂತೆಯೇ 'ನಮಃ ಶರ್ವಾಯ ಚ ಪಶುಪತಯೇ ಚ' ಎಂದು ಮಂತಾಗಿ ಮುಂದಿನ ಮಂತ್ರಗಳನ್ನೂ ತಿಳಿಯಬೇಕು.

ಈಗ ಈ ಸ್ತುತಿಯ ಅರ್ಥವನ್ನು ವಿಚಾರಮಾಡೋಣ. ಹಿಂದಿನ ಅನುವಾಕದಲ್ಲಿ ಸರ್ವಾತ್ಮನಾದ ಪರಮೇಶ್ವರನನ್ನು ಎಲ್ಲಾ ರೂಪಗಳಿಂದಲೂ ಕಂಡು ನಮಸ್ಕರಿಸಿದ್ದಾಯಿತು. ಈಗಲಾದರೊ, ಭಗವಂತನಿಗೆ ಮಾತ್ರವೇ ಮೀಸಲಾಗಿರುವ ಗುಣಕರ್ಮರೂಪಗಳಿಂದ ಸ್ತುತಿಸಲಾಗುತ್ತದೆ. ಇದು 'ದ್ರಾಪೇ' ಎಂಬವರೆಗಿನ ಮಂತ್ರದವರೆಗೂ ಮುಂದುವರಿಯುತ್ತದೆ. ಇಲ್ಲಿ ಈಗ ಮೊದಲನೆಯ ಎರಡು ಮಂತ್ರಗಳಿಂದ ಪರಮೇಶ್ವರನು ಜಗತ್ತಿನ ಉತ್ಪತ್ತಿ, ಸ್ಥಿತಿ, ಸಂಹಾರ, ಬಂಧ, ಮೋಕ್ಷ- ಎಂಬ ಐದು ಕರ್ಮಗಳನ್ನು ಬೇರೆಬೇರೆಯ ಹೆಸರಿನಿಂದ ಒಬ್ಬನೇ ಮಾಡುತ್ತಾನೆ- ಎಂದು ತಿಳಿಸಿದೆ.

ಭವನೆಂದರೆ ಉತ್ಪತ್ತಿಕಾರಕನು. ಈತನಿಂದ ಜಗತ್ತು 'ಭವತಿ'- ಉಂಟಾಗುತ್ತದೆಯಾದ್ದರಿಂದ ಭವನು. ಬ್ರಹ್ಮವಿಷ್ಣುಇಂದ್ರಾದಿಸಮಸ್ತದೇವತೆಗಳಿಂದ ಕೂಡಿದ ಎಲ್ಲಾ ಪ್ರಪಂಚವೂ ಇವನಿಂದಲೇ ಸೃಷ್ಟಿಯಾಗುತ್ತದೆ- ಎಂಬು ಅಭಿಪ್ರಾಯ. ಹಾಗೆಯೇ ರುದ್ರನೆಂದರೆ ಮೋಕ್ಷಕಾರಕನು. ರುದಂ- ಅಳುವನ್ನು ದ್ರಾವಯತಿ- ಓಡಿಸುತ್ತಾನೆ- ಶೋಕವನ್ನು ನಾಶಮಾಡುತ್ತಾನೆ -ಎಂಬರ್ಥದಲ್ಲಿ ಪರಮೇಶ್ವರನಿಗೆ ರುದ್ರನೆಂದು ಹೆಸರು. ಭಗವಂತನನ್ನು ಅರಿತುಕೊಳ್ಳದೆ ದುಃಖನಾಶವು ಎಂದಿಗೂ ಆಗಲಾರದು. 'ಮನುಷ್ಯರು ಆಕಾಶವನ್ನು ಚರ್ಮದಂತೆ ಸುರುಳಿಸುತ್ತುವದು ಸಾಧ್ಯವಾದಲ್ಲಿ ಆಗ ರುದ್ರನನ್ನು ಅರಿತುಕೊಳ್ಳದೆಯೂ ದುಃಖವನ್ನು ಕೊನೆಗಾಣಿಸಲಾದೀತು' ಎಂಬ ಉಪನಿಷದ್ವಾಕ್ಯವು ಆಕಾಶವನ್ನು ಸುರುಳಿಸುತ್ತುವದು ಹೇಗೆ ಅಸಾಧ್ಯವೋ ಹಾಗೆ ರುದ್ರನನ್ನು ಅರಿಯದೆ ದುಃಖವನ್ನು ದಾಟುವದೂ ಅಸಾಧ್ಯವೇ- ಎಂದು ತಿಳಿಸುತ್ತಿದೆ. ಹೀಗೆ ರುದ್ರನೇ ಮೋಕ್ಷಕಾರಕನಾಗಿರುತ್ತಾನೆ. 'ರುದ್ರನೇ ತಾರಕಬ್ರಹ್ಮವು' ಎಂದೂ ವೇದವು ತಿಳಿಸುತ್ತಿದೆ.

ಇನ್ನು ಶರ್ವನೆಂದರೆ ಹಿಂಸಾಕಾರಕನು. ಶೃಣಾತಿ ಹಿಂಸಿಸುತ್ತಾನೆ- ಎಂಬರ್ಥದಲ್ಲಿ ಶರ್ವನೆಂದಿದೆ. ಪ್ರಲಯಕಾಲದಲ್ಲಿ ಜಗತ್ತೆಲ್ಲವನ್ನೂ ನುಂಗಿ ಬಿಡುವನಾದ್ದರಿಂದ ಈತನು ಶರ್ವನೆನಿಸುವನು. ಆದರೆ ಪರಮೇಶ್ವರನ ದೃಷ್ಟಿಯಿಂದ ನೋಡಿದರೆ ಜಗತ್ತಿನ ಈ ಉತ್ಪತ್ತಿಸ್ಥಿತಿಸಂಹಾರಗಳೆಂಬಿವು ಆ ಮಹಾಮಹಿಮನಿಗೆ ಒಂದು ಲೀಲಾಮಾತ್ರವೇ. ಇದರಿಂದ ಅವನಿಗೆ ಏನೂ ಆಯಾಸವಿಲ್ಲ. ಇಂಥ ಮಹಾಸತ್ತ್ವಶಾಲಿಯು ಅವನು- ಎಂದು ಅಭಿಪ್ರಾಯ. ಆದರೂ ಜನರಿಗೆ ದೇವರನ್ನು ಉತ್ಪತ್ತಿಸ್ಥಿತಿಕಾರಕನೆಂದು ಹೇಳಿದರೆ ಸಂತೋಷವಾಗುತ್ತದೆ. ಸಂಹಾರಕಾರಕನೆಂದರೆ ಭಯವೂ ಹಾಗೂ ಅವನು ಅಷ್ಟೊಂದು ಕ್ರೂರಿಯೆ ? ಎನಿಸುತ್ತದೆ. ಆದರೆ ಹಾಗಲ್ಲ. ಜಗತ್ತಿನಲ್ಲಿ ಉತ್ಪತ್ತಿಯು ಎಷ್ಟು ಮುಖ್ಯವೋ ಪ್ರಲಯವೂ ಅಷ್ಟೇ ಮುಖ್ಯ. ನಮಗೆ ಆಹಾರವನ್ನು ತಿನ್ನುವದು ಎಷ್ಟು ಮುಖ್ಯವೋ ಅರಗುವದೂ ಅಷ್ಟೇ ಮುಖ್ಯವಲ್ಲವೆ ? ಹಾಗೆಯೇ ಪ್ರಪಂಚದ ಆರೋಗ್ಯಕ್ಕೆ ಪ್ರಲಯವು ಅಗತ್ಯ. ಆದ್ದರಿಂದಲೇ ಭಗವಂತನು ಪ್ರಪಂಚವನ್ನು ಉತ್ಪತ್ತಿವಿನಾಶಗಳೆಂಬ ಕ್ರಿಯೆಗಳಿಂದ ಸಮನಾಗಿಟ್ಟಿರುವನು. ಆತನ ದೃಷ್ಟಿಯಲ್ಲಿ ಎಲ್ಲವೂ ಸರಿಯಾಗಿಯೇ ಇದೆ. ನಾವು

ಮಾತ್ರ ಆತನ ತತ್ತ್ವವನ್ನು ಅರಿತುಕೊಳ್ಳದೆ 'ದೇವರು ಹೀಗೆ ಮಾಡಿದ್ದು ಸರಿಯಲ್ಲ' ಎಂದು ದೂಷಿಸುತ್ತಿರುವೆವು. ಇದು ನಮ್ಮ ಅಜ್ಞಾನವನ್ನು ತೋರಿಸುತ್ತದೆಯೇ ಹೊರತು ಪರಮೇಶ್ವರನಲ್ಲಿ ಯಾವ ದೋಷವನ್ನೂ ಉಂಟುಮಾಡಲಾರದು.

ಪಶುಪತಿಯೆಂಬ ನಾಮವು ಭಂಗವಂತನು ಬಂಧ ಮತ್ತು ಸ್ಥಿತಿ ಎಂಬ ಕಾರ್ಯಗಳನ್ನು ಮಾಡುವವನು ಎಂಬುದನ್ನು ತಿಳಿಸುತ್ತದೆ. ನಾವೆಲ್ಲರೂ ಪಶುಗಳು-ಎಂದರೆ ಪರಾಧೀನರು ಹಾಗೂ ಅಜ್ಞಾನಿಗಳು. ನಮ್ಮನ್ನೆಲ್ಲ ಆಳುತ್ತಿರುವ ಪರಮೇಶ್ವರನು ಸ್ವತಂತ್ರನು ಮತ್ತು ಸರ್ವಜ್ಞನು. ಆತನೇ ನಮ್ಮಗಳ ಉತ್ಪತ್ತಿ, ಸ್ಥಿತಿ, ಗತಿ, ಆಗತಿ, ಬಂಧ, ಮೋಕ್ಷ-ಎಲ್ಲಕ್ಕೂ ಕಾರಣ ನಾಗಿರುವನು. ಆದ್ದರಿಂದಲೇ ಅವನು ಭಗವಂತನು. ಹೀಗೆ ಪಶುಗಳನ್ನು ನಿಯಮಮಾಡುವವನಾದ್ದರಿಂದ ಪಶುಪತಿಯು. ಆದರೆ ಈ ಕಾರ್ಯವೇನೂ ಸುಲಭಸಾಧ್ಯವಾದುದಲ್ಲ. ಯಾವನೊಬ್ಬ ಜೀವನಿಂದಲೂ ಇದು ಆಗಲಾರದು. ಭಗವಂತನಿಗೆ ಮಾತ್ರವೇ ಇದು ಶಕ್ಯವಾದದ್ದು. ಇಂಥ ಪಶುಪತಿಯಾದವ ನಿಗೆ ನಮಸ್ಕಾರವು.

ನೀಲಗ್ರೀವನೆಂಬ ನಾಮವನ್ನು ಹಿಂದೆಯೇ ಒಮ್ಮೆ ವ್ಯಾಖ್ಯಾನಮಾಡಿದೆ. ಕಾಲಕೂಟವೆಂಬ ಮಹಾವಿಷವು ಸಮುದ್ರಮಥನಕಾಲದಲ್ಲಿ ಉತ್ಪನ್ನವಾದಾಗ ಅದು ಜಗತ್ತನ್ನೇ ಸುಡುತ್ತಿರುವಲ್ಲಿ ಬೇರೆಯ ದೇವತೆಗಳು ಯಾರೂ ಮುಂದೆ ಬರಲಿಲ್ಲ. ಆಗ ಪರಮೇಶ್ವರನು ಲೋಕಕಲ್ಯಾಣಕ್ಕಾಗಿ ಆ ವಿಷವನ್ನು ಕುಡಿದನು. ಅದು ಕಂಠದಲ್ಲಿಯೇ ನಿಂತದ್ದರಿಂದ ಕುತ್ತಿಗೆಯು ಕಪ್ಪಾಯಿತು. ಆದರಿಂದ ನೀಲಗ್ರೀವನೆಂದು ಹೆಸರಾಯಿತು. 'ಶಿತಿಕಂಠನೆಂದರೆ ವಿಷವನ್ನು ಕುಡಿಯುವ ಮುಂಚೆ ಬಿಳುಪಾದ ಕಂಠವೇ ಆತನಿಗೆ ಇತ್ತು. ಆದ್ದರಿಂದ ಶಿತಿಕಂಠನಾದನು. ಹೀಗೆ ತನ್ನ ಕಂಠವು ಕಪ್ಪಾಗುವದನ್ನು ಲಕ್ಷಿಸದೆ ವಿಷ ವನ್ನು ಪಾನಮಾಡಿದ್ದು, ಆತನಿಗೆ ಲೋಕದ ಪ್ರಾಣಿಗಳಮೇಲೆ ಇರುವ ದಯೆ ಯನ್ನು ಸೂಚಿಸುತ್ತದೆ.

ಇನ್ನು ಕಪರ್ದಿ ಎಂಬ ನಾಮವನ್ನು ವಿಚಾರಮಾಡೋಣ. ಪರ ಮೇಶ್ವರನ ಜಟಾಜೂಟಕ್ಕೆ ಕಪರ್ದವೆಂದು ಹೆಸರು. ಅದನ್ನು ಉಳ್ಳವನು ಕಪರ್ದಿಯು. ಇಂಥ ಜಟಾಜೂಟದಲ್ಲಿಯೇ ಭಗವಂತನು ಗಂಗೆಯನ್ನು ಧರಿಸಿ

ರುವನು. ಮತ್ತು ಈ ಜಟೆಯೆಂಬುದು ಅಸಾಧಾರಣವಾದ ಶಕ್ತಿಯುಳ್ಳದ್ದು. ಹೇಗೆಂದರೆ: ದಕ್ಷಯಜ್ಞಕಾಲದಲ್ಲಿ ಭಗವಂತನನ್ನು ಅವಮಾನಗೊಳಿಸಿದ ದಕ್ಷನನ್ನು ಶಿಕ್ಷಿಸಲು ಕೋಪದಿಂದ ಈಶ್ವರನು ತನ್ನ ಜಟೆಯಿಂದ ಒಂದು ಕೂದಲನ್ನು ಕಿತ್ತುಹಾಕಿದಕೂಡಲೆ ಅದರಿಂದ ವೀರಭದ್ರನು ಹುಟ್ಟಿ ದಕ್ಷಯಜ್ಞವನ್ನೆಲ್ಲ ನಾಶಮಾಡಿಬಿಟ್ಟನು. ಇಂಥ ಮಹಾಮಹಿಮೆಯುಳ್ಳದ್ದು ಈಶ್ವರನ ಜಟೆಯು. ಹೀಗೆ ಜಟಾಜೂಟಧರನಾದ ಪರಮೇಶ್ವರನೇ ಕಪರ್ದಿಯು.

ಕಪರ್ದಿಯಾಗಿರುವಂತೆಯೇ ವ್ಯುಪ್ತಕೇಶನೂ ಆಗಿರುವವನು ಪರಮೇಶ್ವರನೇ. ವ್ಯುಪ್ತವೆಂದರೆ ಬೋಳಿಸಲ್ಪಟ್ಟ, ಕೇಶಗಳೆಂದರೆ ಕೂದಲುಳ್ಳವನು. ಪರಮಹಂಸ ಸಂನ್ಯಾಸಿಗಳಿಗೆ ಕಂಠದವರೆಗೂ ಮುಂಡನವು ವಿಹಿತವಾಗಿದೆ. ಆದ್ದರಿಂದ ಬೋಳುತಲೆಯೆಂಬುದು ವೇದಾಂತವಿಜ್ಞಾನಸುನಿಶ್ಚಿತಾರ್ಥರಾದ ಸಂನ್ಯಾಸಿಗಳನ್ನು ಸೂಚಿಸುತ್ತದೆ. ಬದುಕಿರುವಾಗಲೇ ಜ್ಞಾನದಿಂದ ಮುಕ್ತರಾಗಿ ಲೋಕಕಲ್ಯಾಣಾರ್ಥವಾಗಿ ಅಲ್ಲಲ್ಲಿ ಸಂಚರಿಸುತ್ತಾ ಜನರಿಗೆ ಆಧ್ಯಾತ್ಮಿಕಬೋಧೆಯನ್ನು ನೀಡಿ ಅನುಗ್ರಹಿಸುತ್ತಿರುವ ಮಹಾತಪಸ್ವಿಗಳಾದ ಸಂನ್ಯಾಸಿಗಳು ಸಾಕ್ಷಾತ್ ಪರಮೇಶ್ವರನ ಸ್ವರೂಪರೇ ಆಗಿರುತ್ತಿರುವರು. ಅಂಥ ಸಂನ್ಯಾಸಿಗಳ ರೂಪದಲ್ಲಿರುವವನಿಗೆ ನಮಸ್ಕಾರವು- ಎಂದು ಈ ನಾಮವು ತಿಳಿಸುತ್ತಿದೆ.

ಸಹಸ್ರಾಕ್ಷನೆಂದರೆ ಅನಂತವಾದ ಕಣ್ಣುಗಳುಳ್ಳವನು. ಪರಮೇಶ್ವರನಿಗೆ ಎಲ್ಲಾ ಶರೀರಗಳೂ ಉಪಾಧಿಗಳೇ ಆದ್ದರಿಂದ ಸಾವಿರಾರು ಶರೀರಗಳಲ್ಲಿ ಸಾವಿರಾರು ಕಣ್ಣುಗಳಿಂದ ಕೂಡಿರುವವನು ಸಹಸ್ರಾಕ್ಷನು–ಎಂದರ್ಥ. ಮತ್ತು ಸರ್ವಜ್ಞನಾದುದರಿಂದ ಎಲ್ಲವನ್ನೂ ಬಲ್ಲವನು ಎಂಬರ್ಥದಲ್ಲಿಯೂ ಸಹಸ್ರಾಕ್ಷನಾಗಬಹುದು. ಅಥವಾ ದೇವೇಂದ್ರನ ರೂಪದಲ್ಲಿರುವವನೂ ಪರಮೇಶ್ವರನೇ ಆದ್ದರಿಂದ ಸಹಸ್ರಾಕ್ಷನೆಂಬ ದೇವೇಂದ್ರನೂ ಆತನೇ– ಎಂದೂ ಹೇಳಬಹುದಾಗಿದೆ.

ಶತಧನ್ವನು ಎಂದರೆ ನೂರು ಬಿಲ್ಲುಗಳುಳ್ಳವನು. ಸಾಮಾನ್ಯವಾದ ಬಿಲ್ಲುಗಳಜೊತೆಗೆ ವೇದಗಳನ್ನೂ ಓಂಕಾರವನ್ನೂ ಮೇರುಪರ್ವತವನ್ನೂ ಸಮಯಾನುಸಾರ ಬಿಲ್ಲಾಗಿ ಮಾಡಿಕೊಂಡ ಮಹಾಮಹಿಮನು ಇವನು. ಆದ್ದರಿಂದ ಶತಧನ್ವನೆಂದು ಸ್ತುತಿಸಿದೆ.

---

## ೨೦. ನಮೋ ಹ್ರಸ್ವಾಯ ಚ ವಾಮನಾಯ ಚ

ರುದ್ರಾಧ್ಯಾಯದ ಐದನೆಯ ಅನುವಾಕದ ಉತ್ತರಾರ್ಧವನ್ನು ಈಗ ವಿಚಾರಮಾಡಬೇಕಾಗಿದೆ.

ನಮೋ ಗಿರಿಶಾಯ ಚ ಶಿಪಿವಿಷ್ಟಾಯ ಚ ನಮೋ ಮೀಢುಷ್ಟಮಾಯ ಚೇಷುಮತೇ ಚ ನಮೋ ಹ್ರಸ್ವಾಯ ಚ ವಾಮನಾಯ ಚ ನಮೋ ಬೃಹತೇ ಚ ವರ್ಷೀಯಸೇ ಚ ನಮೋ ವೃದ್ಧಾಯ ಚ ಸಂವೃಧ್ವನೇ ಚ॥ ನಮೋ ಅಗ್ರಿಯಾಯ ಚ ಪ್ರಥಮಾಯ ಚ ನಮ ಆಶವೇ ಚಾಜಿರಾಯ ಚ ನಮಃ ಶೀಘ್ರಿಯಾಯ ಚ ಶೀಭ್ಯಾಯ ಚ ನಮ ಊರ್ಮ್ಯಾಯ ಚಾವಸ್ವನ್ಯಾಯ ಚ ನಮಃ ಸ್ರೋತಸ್ಯಾಯ ಚ ದ್ವೀಪ್ಯಾಯ ಚ ॥

"ಗಿರಿಶನಿಗೂ ಶಿಪಿವಿಷ್ಟನಿಗೂ ಮೀಢುಷ್ಟಮನಿಗೂ ಇಷುಮಂತನಿಗೂ ಹ್ರಸ್ವನಿಗೂ ವಾಮನನಿಗೂ ಬೃಹಂತನಿಗೂ ವರ್ಷೀಯನಿಗೂ ವೃದ್ಧನಿಗೂ ಸಂವೃಧ್ವನಿಗೂ ನಮಸ್ಕಾರವು."

"ಅಗ್ರಿಯನಿಗೂ ಪ್ರಥಮನಿಗೂ ಆಶುವಿಗೂ ಅಜಿರನಿಗೂ ಶೀಘ್ರಿಯನಿಗೂ ಶೀಭ್ಯನಿಗೂ ಊರ್ಮ್ಯನಿಗೂ ಅವಸ್ವನ್ಯನಿಗೂ ಸ್ರೋತಸ್ಯನಿಗೂ ದ್ವೀಪ್ಯನಿಗೂ ನಮಸ್ಕಾರವು."

ಗಿರಿಶನೆಂದರೆ ಕೈಲಾಸವೆಂಬ ನಿಲಯವುಳ್ಳವನೆಂದರ್ಥ. ಗಿರಿ ಎಂಬುದು ಎಲ್ಲಾ ಬೆಟ್ಟಗಳಿಗೂ ವಾಚಕವಾಗಿದೆ. ಆದ್ದರಿಂದ ಬೆಟ್ಟಗಳೆಲ್ಲವೂ ಪರಮೇಶ್ವರನ ವಾಸಸ್ಥಾನಗಳು ಎಂದೂ ಹೇಳಬಹುದು. ಆದರೂ ರಜತಗಿರಿ, ಧವಳಗಿರಿ, ಎಂಬ ಹೆಸರುಗಳಿಂದ ಪ್ರಸಿದ್ಧವಾದ ಹಿಮಾಚಲವು ಈಶ್ವರನ ವಿಶೇಷವಾಸಸ್ಥಾನವಾಗಿದೆ. ಗೌರೀಶಂಕರಶಿಖರವು ಪ್ರಪಂಚದಲ್ಲೇ ಅತ್ಯಂತ ಎತ್ತರವಾದುದಷ್ಟೆ! ಅಲ್ಲಿ ಪರಮೇಶ್ವರನು ವಾಸಿಸುತ್ತಾನೆಂದು ಪುರಾಣಪ್ರಸಿದ್ಧಿಯಿದೆ. ಭಕ್ತರುಗಳಿಗೆ ತನ್ನ ವಿಶೇಷಮಹಿಮಾಯುಕ್ತವಾದ ಕೈಲಾಸದಲ್ಲಿ ಶಿವನು ದರ್ಶನವನ್ನು ಕೊಡುತ್ತಾನೆ. ಹೀಗೆ ಗಿರಿಶನೆಂದು ಇಲ್ಲಿ ಸ್ತುತಿಸಲ್ಪಟ್ಟಿರುವನು. ಶಿಪಿವಿಷ್ಟನೆಂದರೆ ವಿಷ್ಣುವು. ವಿಷ್ಣುಸಹಸ್ರನಾಮದ ೨೭೩ನೆಯ

ನಾಮವನ್ನು ನೋಡಿರಿ. ಶಿಪಿಗಳೆಂದರೆ ಪಶುಗಳು. ಅವುಗಳಲ್ಲಿ ಯಜ್ಞರೂಪ ದಿಂದ ಇದ್ದುಕೊಂಡಿರುವನಾದ್ದರಿಂದ ಶಿಪಿವಿಷ್ಟನೆಂದರೆ ವಿಷ್ಣುವೆಂದರ್ಥ. ಇದಕ್ಕೆ ತೈತ್ತಿರೀಯಸಂಹಿತೆಯ 'ಯಜ್ಞೋ ವೈ ವಿಷ್ಣುಃ ಪಶವಃ ಶಿಪಿಃ ಯಜ್ಞ ಏವ ಪಶುಷು ಪ್ರತಿತಿಷ್ಠತಿ' ಎಂಬ ವಾಕ್ಯವೂ ಪ್ರಮಾಣವಾಗಿದೆ. ಹೀಗೆ ವಿಷ್ಣುರೂಪನಾಗಿರುವವನೂ ಶಿವನೇ-ಎಂದರ್ಥ. ಮೀಢುಷ್ಟಮ- ಅತಿಶಯ ದಿಂದ ವೀರ್ಯವನ್ನು ಚೆಲ್ಲುವವನು ಎಂದರ್ಥ. ಸೃಷ್ಟಿಕಾಲದಲ್ಲಿ ಹಿರಣ್ಯ ಗರ್ಭಬ್ರಹ್ಮನ ರೂಪದಿಂದ ಎಲ್ಲಾ ಪ್ರಾಣಿಗಳನ್ನೂ ಉಂಟುಮಾಡುವವನು ಎಂದು ಅಭಿಪ್ರಾಯ. ಹಿರಣ್ಯಗರ್ಭನೂ ಶಿವನೇ-ಎಂದು ವೇದದಲ್ಲಿ ಸ್ತುತಿ ಸಿದೆ. "ಸ ಬ್ರಹ್ಮ ಸ ಶಿವಃ ಸ ಹರಿಃ" ಎಂಬ ಉಪನಿಷತ್ತಿನ ಭಾಗವನ್ನು ನೋಡಿರಿ. ಪ್ರಶಸ್ತವಾದ ಬಾಣಗಳು ಉಳ್ಳವನು ಇಷುಮಂತನು. ತ್ರಿಪುರ ಸಂಹಾರಕಾಲದಲ್ಲಿ ವಿಷ್ಣುವನ್ನೇ ಬಾಣವಾಗಿಮಾಡಿಕೊಂಡು ಪರಮೇಶ್ವರನು ಅಸುರಸಂಹಾರವನ್ನು ಮಾಡಿದನು. ಇದರಿಂದ ಉಳಿದ ಎಲ್ಲಾ ದೇವತೆಗಳೂ ಪರಮೇಶ್ವರನ ಅಧೀನರೆಂದೇ ತಿಳಿಸಿದಂತೆ ಆಗಿದೆ. 'ಇಡಿಯ ಜಗತ್ತೇ ಪರ ಮೇಶ್ವರನಿಗೆ ಸರಿಸಮಾನವಾಗಲಾರದು. ಅದಕ್ಕೂ ಅಧಿಕನಾದ ಮಹರ್ಷಿ ಯು ಅವನು'-ಎಂದು ಶ್ರುತಿಯಲ್ಲಿ ಸ್ತುತಿಸಿದೆ.

ಹ್ರಸ್ವನೆಂದರೆ ಅಲ್ಪಪ್ರಮಾಣದವನೆಂದರ್ಥ. ಪರಮೇಶ್ವರನು ದಹರಾ ಕಾಶದಲ್ಲಿ ಉಪಾಸ್ಯನಾಗಿರುವದರಿಂದ ಅಲ್ಪಪ್ರಮಾಣನಾಗಿರುವಂತೆ ಕಂಡು ಬರುತ್ತಾನೆ. ಆದರೆ ಅದು ಉಪಾಧಿಯ ನಿಮಿತ್ತವಾದದ್ದು. ಸರ್ವವ್ಯಾಪಿ ಯಾದ ಆತನು ಚಿಕ್ಕದಾಗಿ ತೋರಿಕೊಂಡಮಾತ್ರದಿಂದ ಚಿಕ್ಕವನೆಂದೇ ಆಗುವದಿಲ್ಲ. ಇನ್ನು ಚಿಕ್ಕ ಚಿಕ್ಕ ಪದಾರ್ಥಗಳ ರೂಪದಲ್ಲಿಯೂ ಕಂಡು ಬರುವವನು ಪರಮೇಶ್ವರನೇ-ಎಂದೂ ಭಾವಿಸಬಹುದಾಗಿದೆ. ವಿಸ್ತಾರವಾದ ಆಕಾಶದಲ್ಲಿ ಸೂರ್ಯನು ಒಂದು ಹಪ್ಪಳದಂತೆ ಕಂಡುಬಂದರೂ ಅವನ ತೇಜಸ್ಸಿನ ವ್ಯಾಪ್ತಿಯು ಮಾತ್ರ ಎಲ್ಲೆಲ್ಲಿಯೂ ಹರಡಿರುವಂತೆಯೇ ಪರಮೇಶ್ವ ರನೂ ಉಪಾಧಿಗಳಿಂದ ಹ್ರಸ್ವನಾಗಿ ತೋರಿದರೂ ಅವನ ಮಹತ್ವಕ್ಕೇನೂ ಕೊರತೆಯಾಗಲಾರದು-ಎಂದರ್ಥ. ವಾಮನನೆಂದರೆ ಸಂಕುಚಿತವಾದ ಅವ ಯವಗಳುಳ್ಳವನು. ಭಗವಂತನು ಸಮಯಾನುಸಾರ ಯಾವ ರೀತಿಯಿಂದ ಲಾದರೂ ತೋರಿಕೊಳ್ಳಬಹುದಾಗಿದೆ. ವಾಮನರೂಪದಿಂದ ಬಲಿರಾಜನನ್ನು

ಅನುಗ್ರಹಿಸಿದ್ದು ಪುರಾಣಪ್ರಸಿದ್ಧವಾಗಿದೆ. 'ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು' ಎಂಬ ಗಾದೆಯೂ ಇದರಿಂದಲೇ ಹುಟ್ಟಿರುತ್ತದೆಯಲ್ಲವೆ? ಇನ್ನು ಗಣಪತಿಯ ಆಕಾರವನ್ನು ನೋಡಿದರೂ ಅವಯವಗಳು ಎಂದರೆ ಕೈಕಾಲು ಗಳು ಸಂಕುಚಿತವೇ ಆಗಿವೆ. ಹೊಟ್ಟೆಯು ಮಾತ್ರವೇ ದೊಡ್ಡದು. ಆದ್ದರಿಂದ ವಾಮನರೂಪನಾದ ಗಣಪತಿಯನ್ನೂ ಪರಮೇಶ್ವರನ ಅವತಾರವೆಂದು ಹೇಳ ಬಹುದಾಗಿದೆ. ಆದರೆ ಉಪನಿಷತ್ತುಗಳಲ್ಲಿ ವಾಮನನೆಂದರೆ ವನನೀಯನು-ಎಲ್ಲರಿಂದಲೂ ಭಜಿಸಲ್ಪಡುವವನು; ವಾಮಾನಿ ನಯತಿ- ಎಲ್ಲರ ಕಾಮ ಗಳನ್ನೂ ಪೂರೈಸುವವನು ಎಂಬರ್ಥದಲ್ಲಿಯೂ ವಾಮನನೆಂದು ಪರಮೇಶ್ವರ ನನ್ನು ಹೆಸರಿಸಲಾಗಿದೆ. ಇದೂ ಸಮಂಜಸವಾಗಿಯೇ ಇದೆ. ಸುಂದರಮೂರ್ತಿ ಎಂಬರ್ಥದಲ್ಲಿಯೂ ವಾಮನನೆಂದು ಕರೆಯಬಹುದು. ಅಂತೂ ವಾಮನ ರೂಪಿಯಾದ ಪರಮೇಶ್ವರನಿಗೆ ನಮಸ್ಕಾರವು-ಎಂದರ್ಥ.

ಬೃಹತ್ ಎಂದರೆ ದೊಡ್ಡದು. ದೇಶಕಾಲವಸ್ತುಗಳ ಪರಿಚ್ಛೇದವಿಲ್ಲದ ಅಖಂಡವಾದ ಪರಬ್ರಹ್ಮವು-ಎಂದರ್ಥ. ಬೃಹತ್ವಾತ್ ಬೃಂಹಣತ್ವಾಚ್ಚ-ಎಂಬ ವ್ಯುತ್ಪತ್ತಿಯಂತೆ ಎಲ್ಲಕ್ಕಿಂತಲೂ ಮಿಗಿಲಾದುದೂ ಎಲ್ಲೆಲ್ಲಿಯೂ ವ್ಯಾಪಿಸಿಕೊಂಡಿರುವದೂ ಆಗಿರುವದೇ ಬ್ರಹ್ಮವು. ಬ್ರಹ್ಮವೆಂಬುದೇ ಬೃಹತ್ತು. ಪರಮೇಶ್ವರನೇ ಬೃಹತ್ತೆಂಬ ಬ್ರಹ್ಮವು ಎಂದು ಇಲ್ಲಿ ಹೊಗಳಿದೆ. ವರ್ಷೀಯಾನ್ ಎಂದರೆ ಗುಣಗಳಿಂದ ಪರಿಪೂರ್ಣನಾದವನು. ಸತ್ಯಕಾಮನು, ಸತ್ಯಸಂಕಲ್ಪನು, ಪರಮೇಶ್ವರನು ಎಂದು ಶ್ರುತಿಯಲ್ಲಿ ಹೊಗಳಿದೆ. ಇಂಥ ಮಹಿಮಾಯುಕ್ತನು ಎಂದರ್ಥ. ವೃದ್ಧನೆಂದರೆ ವಯಸ್ಸಿನಲ್ಲಿ ಎಲ್ಲರಿ ಗಿಂತಲೂ ದೊಡ್ಡವನೆಂದು ಸಾಮಾನ್ಯಾರ್ಥ. ಪರಮೇಶ್ವರನು ಅಜನಾಗಿರು ವದರಿಂದ ಅವನಿಗೆ ಆಯುಷ್ಯಪ್ರಮಾಣದ ಪರಿಮಿತಿಯೇನೂ ಇರುವದಿಲ್ಲ. ಆದುದರಿಂದ ಆತನು ಎಲ್ಲರಿಗೂ ಹಿರಿಯನೇ ಎಂಬುದು ಸ್ವತಃಸಿದ್ಧವಾಯಿತು. ಇನ್ನು ಜ್ಞಾನದಲ್ಲಿಯೂ, ಧರ್ಮದಲ್ಲಿಯೂ, ಐಶ್ವರ್ಯದಲ್ಲಿಯೂ, ವೈರಾಗ್ಯಾದಿ ಗಳಲ್ಲಿಯೂ ಕೂಡ ಆತನಿಗಿಂತ ಮಿಗಿಲಾದವರು ಯಾರೂ ಇರುವದಿಲ್ಲ. ಆದ್ದರಿಂದ ಎಲ್ಲರೂ ಆತನಿಗೇ ನಮಸ್ಕಾರಮಾಡಬೇಕೆಂದಾಯಿತು. ಶ್ರುತಿಯೂ 'ಯಸ್ಮೈ ನಮಃ ತಚ್ಛಿರಃ' ಎಂದು ಭಗವಂತನನ್ನು ಸ್ತೋತ್ರಮಾಡಿದೆ. ಹೀಗೆ ಎಲ್ಲಾರೀತಿಯಿಂದಲೂ ವೃದ್ಧನು ಆತನು. ಸಂವೃಧ್ವನೆಂದರೆ ಸಮ್ಯಕ್-

ಅಸಾಧಾರಣವಾಗಿ ವರ್ಧಿತಃ-ಬೆಳೆಯಿಸಲ್ಪಟ್ಟವನು-ಎಂದರೆ ಸ್ತುತಿಗಳಿಂದ ಮೇಲಕ್ಕೆ ಏರಿಸಲ್ಪಟ್ಟವನು-ಎಂದರ್ಥ. ಎಲ್ಲಾ ಶ್ರುತಿಗಳಿಂದಲೂ ಸ್ಮೃತಿಗಳಿಂದಲೂ ಹೊಗಳಲ್ಪಡುವವನು ಹೆಚ್ಚಾಗಿ ಪರಮೇಶ್ವರನೇ ಆಗಿರುತ್ತಾನೆ. ಹದಿನೆಂಟು ಪುರಾಣಗಳಲ್ಲಿ ಹತ್ತು ಪುರಾಣಗಳು ಈಶ್ವರನನ್ನೇ ಸ್ತೋತ್ರ ಮಾಡುತ್ತಿವೆ. ಇಂಥ ಸ್ತೋತ್ರಾರ್ಹನಾದ ಸಂವೃಧ್ವನು ಪರಮೇಶ್ವರನು ಎಂದರ್ಥ.

ಅಗ್ರಿಯನೆಂದರೆ ಅಗ್ರೇ-ಜಗತ್ತು ಹುಟ್ಟುವದಕ್ಕಿಂತ ಮುಂಚೆಯೇ ಯು-ಇದ್ದುಕೊಂಡಿರುವವನು ಅಗ್ರಿಯನು. ಪರಮೇಶ್ವರನು ಜಗತ್ತಿಗೇ ಕಾರಣನಾಗಿರುವದರಿಂದ ಆತನು ಅದು ಹುಟ್ಟುವ ಪೂರ್ವದಲ್ಲಿಯೇ ಇದ್ದುಕೊಂಡಿರುವನು. ಆದ್ದರಿಂದಲೇ ಪ್ರಥಮನೂ ಆಗಿದ್ದಾನೆ. ಹಿರಣ್ಯಗರ್ಭನನ್ನೂ ಪ್ರಥಮನೆನ್ನುವರು. ಆಗ್ಗೆ ಪರಮೇಶ್ವರನನ್ನು ಪ್ರಪ್ರಥಮನೆನ್ನಬೇಕಾಗುವದು. ಏಕೆಂದರೆ ಹಿರಣ್ಯಗರ್ಭನನ್ನು ಉಂಟುಮಾಡಿರುವವನೇ ಈತನು. ಆಶುವೆಂದರೆ ವ್ಯಾಪಕನು. ಜಗತ್ತನ್ನೆಲ್ಲ ವ್ಯಾಪಿಸಿರುವವನಾದ್ದರಿಂದ ಈ ಹೆಸರು ಬಂದಿದೆ. ಅಜಿರನೆಂದರೆ ಗಮನಕುಶಲನೆಂದರ್ಥ. ಈತನು ಎಲ್ಲಾ ವಸ್ತುಗಳಲ್ಲಿಯೂ ತಾನು ಇದ್ದುಕೊಂಡಿರುವನಾಗಿ ಮೊದಲು ವ್ಯಾಪಿಸಿಬಿಟ್ಟಿರುವನಾಗಿದ್ದಾನೆ. ಶ್ರುತಿಯೂಕೂಡ 'ಯಾವ ರುದ್ರನು ಅಗ್ನಿಯಲ್ಲಿಯೂ ನೀರಿನಲ್ಲಿಯೂ ಸಸ್ಯಗಳಲ್ಲಿಯೂ ಇಡಿಯ ಬ್ರಹ್ಮಾಂಡದಲ್ಲಿಯೂ ಪ್ರವೇಶಿಸಿ ಬಿಟ್ಟಿರುವನೋ ಅವನಿಗೆ ನಮಸ್ಕಾರ' ಎಂದು ಹೇಳುತ್ತಿದೆ.

ಇನ್ನು ಶೀಘ್ರಿಯನೆಂದರೆ ವೇಗವಾಗಿ ಹರಿಯುವ ನೀರಿನಲ್ಲಿರುವವನು -ಎಂದರ್ಥ. ನದಿಗಳನ್ನು ನೋಡಿದಾಗ ಈ ಮಹಿಮೆಯನ್ನು ನೆನಪುಮಾಡಿಕೊಳ್ಳಬಹುದು. ಕೆಲವು ಕಡೆಗಳಲ್ಲಿಯಂತೂ ನದಿಗಳು ತುಂಬ ಸೆಳವಿನಿಂದ ಶೀಘ್ರವಾಗಿ ಹರಿಯುತ್ತಿರುತ್ತವೆ. ತಗ್ಗಾದ ಪ್ರದೇಶಗಳಲ್ಲಿ ಕೆಳಕ್ಕೆ ಬೀಳುವಾಗ ಜಲಪಾತಗಳ ರೂಪದಿಂದ ಮನಸ್ಸಿಗೆ ಆಹ್ಲಾದವನ್ನುಂಟುಮಾಡುವವು. ಅವೆಲ್ಲ ಮಹಾದೇವನ ವಿಭೂತಿಗಳೇ-ಎಂದಭಿಪ್ರಾಯ. ಎಷ್ಟೋ ಜನರು ಜಲಪಾತಗಳ ಸೊಬಗನ್ನು ನೋಡಿ ಸವಿಯಲು ಹೋಗುವದುಂಟು. ಅಂಥವರು ಒಮ್ಮೆ ಇದು ಪರಮೇಶ್ವರನ ವಿಭೂತಿಯೇ-ಜ್ಞಾಪಿಸಿಕೊಳ್ಳಬೇಕು. ಶೀಭ್ಯನೆಂದರೂ ಉದಕಪ್ರವಾಹದಲ್ಲಿರುವವನು ಎಂದೇ ಅರ್ಥ./ಶೀಭವೆಂದರೆ ನೀರು.

ನೀರೆಂಬುದು ಪ್ರವಾಹರೂಪವಾಗಿ ಹರಿದಾಗ ಭಯಂಕರವಾಗಿರುವದು. ಅದು ಎಷ್ಟೋ ವೇಳೆ ಊರುಗಳನ್ನೂ ಮನೆಮಠಗಳನ್ನೂ ನೆಲಸಮಮಾಡುತ್ತದೆ. ಇಂಥ ರೌದ್ರಪ್ರಕೃತಿಯು ಪರಮೇಶ್ವರನಲ್ಲದೆ ಮತ್ತೇನಾಗಲು ಸಾಧ್ಯ ?

ಊರ್ಮ್ಯನೆಂದರೆ ಅಲೆಗಳಲ್ಲಿರುವವನು ಎಂದರ್ಥ. ಸಮುದ್ರದಲ್ಲಿ ಏಳುತ್ತಿರುವ ಅಲೆಗಳನ್ನು ದೂರದಿಂದ ನೋಡಿದಾಗ ರಮ್ಯವಾಗಿರುವವು ; ಆದರೆ ಸಮುದ್ರವು ಕುಪಿತವಾದಾಗ ಅದರ ಅಲೆಗಳು ಎಷ್ಟೋ ವಿನಾಶವನ್ನೇ ಮಾಡಿಬಿಡುವವು. ಹೀಗೆ ಅಲೆಗಳ ರೂಪದಿಂದ ಭಯವನ್ನೂ ಸಂತೋಷವನ್ನೂ ಉಂಟುಮಾಡುವವನು ಪರಮೇಶ್ವರನೇ ಎಂದಭಿಪ್ರಾಯ. ಅವಸ್ವನ್ಯನೂ ಪರಮೇಶ್ವರನೇ. ಶಬ್ದವಿಲ್ಲದ ನೀರಿನಲ್ಲಿರುವವನು ಎಂದರ್ಥ. ದಡದಲ್ಲಿ ಸಮುದ್ರವು ಚಂಚಲವಾಗಿದ್ದರೂ ನಡುಭಾಗಕ್ಕೆ ಹೋದಾಗ ಶಾಂತವಾಗಿರುವದು. ಆಳವಾಗಿದ್ದಷ್ಟೂ ಗಾಂಭೀರ್ಯವು ಹೆಚ್ಚು. ನಿಶ್ಶಬ್ದವಾಗಿಯೂ ಇರುತ್ತದೆ. ಶ್ರೀರಾಮನನ್ನು ಗಾಂಭೀರ್ಯದಲ್ಲಿ ಸಮುದ್ರಕ್ಕೆ ಸಮಾನನೆಂದು ರಾಮಾಯಣದಲ್ಲಿ ಹೋಲಿಸಿದೆ. ಹೀಗೆ ಶಾಂತವಾದ ಜಲರೂಪದಿಂದ ಪರಮೇಶ್ವರನು ಅವಸ್ವನ್ಯನಾಗಿ ತೋರುತ್ತಿರುವನು-ಎಂದಭಿಪ್ರಾಯ.

ಸ್ರೋತಸ್ಯನೆಂದರೆ ಪ್ರವಾಹದಲ್ಲಿರುವವನು ಎಂದೇ ಅರ್ಥ. ನೀರಿನ ಸ್ವಭಾವವೇ ಹರಿಯುವಿಕೆ. ಹಾಗೆ ಹರಿಯದೆ ನಿಂತರೆ ಅದು ಕಲ್ಮಷಯುಕ್ತವೂ ಆಗುತ್ತದೆ. ಆದ್ದರಿಂದಲೇ ಕೆರೆಯ ನೀರಿಗಿಂತಲೂ ನದಿಯ ನೀರು ಆರೋಗ್ಯಕರವು. ಈ ನೀರನ್ನು ಬೇಕಾದಕಡೆಗೆ ಹರಿಯಿಸುವಂಥ ಯೋಜನೆಗಳೂ ದೇಶದಲ್ಲಿ ಬೇಕಾದಷ್ಟಿವೆ. ಹರಿಯುವ ಸ್ವಭಾವವು ನೀರಿಗೆ ಇಲ್ಲದೆ ಹೋಗಿದ್ದರೆ ಮನುಷ್ಯರಾಗಲಿ, ಸಸ್ಯಗಳಾಗಲಿ, ಬದುಕುತ್ತಲೇಇರಲಿಲ್ಲ. ಆದ್ದರಿಂದ ಹರಿಯುವ ನೀರನ್ನು ನಾವು ಎಷ್ಟೇ ಸಣ್ಣಪ್ರಮಾಣದಲ್ಲಿ ಕಂಡಾಗಲೂ ಕಾಲುವೆ ಉಪಕಾಲುವೆಗಳಲ್ಲಿ ನೋಡಿದಾಗಲೂ ಸ್ರೋತಸ್ಯರೂಪನಾದ ಪರಮೇಶ್ವರನ ವಿಭೂತಿಯೇ ಇದು- ಎಂದು ಚಿಂತಿಸಬಹುದಾಗಿದೆ. ದ್ವೀಪ್ಯನೆಂದರೆ ದ್ವೀಪದಲ್ಲಿರುವವನು. ಸುತ್ತಲೂ ನೀರಿನಿಂದ ಆವೃತವಾಗಿರುವ ಭೂಮಿಯನ್ನು ದ್ವೀಪವೆನ್ನುವರು. ಈ ಭರತಖಂಡವನ್ನು ಪುರಾಣಗಳಲ್ಲಿ ಜಂಬೂದ್ವೀಪವೆಂದೇ ಕರೆಯಲಾಗಿದೆ. ಇಡಿಯ ಭೂಮಿಯಲ್ಲಿ ಸಪ್ತದ್ವೀಪಗಳಿವೆಯೆಂದೂ ಪೌರಾಣಿಕಪ್ರಸಿದ್ಧಿಯಿದೆ. ಪ್ರತಿಯೊಂದು ದ್ವೀಪದಲ್ಲಿಯೂ

ಬೇರೆಬೇರೆಯ ಹೆಸರಿನಿಂದ ಭಗವಂತನು ಆಯಾ ದ್ವೀಪವಾಸಿಗಳಿಂದ ಆರಾಧಿಸಲ್ಪಡುತ್ತಾನೆಂದು ಭಾಗವತದಲ್ಲಿ ಶುಕರು ತಿಳಿಸಿರುತ್ತಾರೆ. ಹೀಗೆ ಪರಮೇಶ್ವರನು ಎಲ್ಲೆಲ್ಲಿ ನೋಡಿದರೂ ಎಲ್ಲಾ ಸ್ಥಾವರಜಂಗಮಗಳ ರೂಪದಿಂದಲೂ ಪ್ರತಿಕ್ಷಣವೂ ನಮಗೆ ಕಣ್ಣಿಗೆ ಬೀಳುತ್ತಲೇ ಇದ್ದಾನೆ. ಆದ್ದರಿಂದ ನಾವು ಕೃತಕಜೀವನದಿಂದ ಸ್ವಲ್ಪವಾದರೂ ಹಿಂದಿರುಗಿ ಪ್ರಕೃತಿಯೊಡನೆ ಬೆರೆತ ಕೂಡಲೆ ನಾನಾರೂಪಗಳಲ್ಲಿರುವ ಪರಮೇಶ್ವರನ ದರ್ಶನವು ಆಗಿಯೇತೀರುವದು. ಈ ಅರ್ಥದಲ್ಲಿ ನಮಗಿಂತಲೂ ಋಷಿಗಳೇ ನಿಜವಾದ ನಾಗರಿಕರೆಂದರೆ ತಪ್ಪಾಗಲಾರದು.

---

## ೨೧. ನಮೋ ಜ್ಯೇಷ್ಠಾಯ ಚ ಕನಿಷ್ಠಾಯ ಚ

ರುದ್ರಾಧ್ಯಾಯದ ಆರನೆಯ ಅನುವಾಕವನ್ನು ಈಗ ನಾವು ವಿಚಾರ ಮಾಡಬೇಕಾಗಿದೆ.

**ನಮೋ ಜ್ಯೇಷ್ಠಾಯ ಚ ಕನಿಷ್ಠಾಯ ಚ ನಮಃ ಪೂರ್ವಜಾಯ ಚಾಪರಜಾಯ ಚ ನಮೋ ಮಧ್ಯಮಾಯ ಚಾಪಗಲ್ಭಾಯ ಚ ನಮೋ ಜಘನ್ಯಾಯ ಚ ಬುಧ್ನಿಯಾಯ ಚ ನಮಃ ಸೋಭ್ಯಾ-ಯ ಚ ಪ್ರತಿಸರ್ಯಾಯ ಚ ನಮೋ ಯಾಮ್ಯಾಯ ಚ ಕ್ಷೇಮ್ಯಾಯ ಚ ನಮ ಉರ್ವರ್ಯಾಯ ಚ ಖಲ್ಯಾಯ ಚ ನಮಃ ಶ್ಲೋಕ್ಯಾಯ ಚಾವಸಾನ್ಯಾಯ ಚ ನಮೋ ವನ್ಯಾಯ ಚ ಕಕ್ಷ್ಯಾಯ ಚ ನಮಃ ಶ್ರವಾಯ ಚ ಪ್ರತಿಶ್ರವಾಯ ಚ ||**

"ಜ್ಯೇಷ್ಠನಿಗೂ ಕನಿಷ್ಠನಿಗೂ ಪೂರ್ವಜನಿಗೂ ಅಪರಜನಿಗೂ ಮಧ್ಯಮನಿಗೂ ಅಪಗಲ್ಭನಿಗೂ ಜಘನ್ಯನಿಗೂ ಬುಧ್ನಿಯನಿಗೂ ಸೋಭ್ಯನಿಗೂ ಪ್ರತಿಸರ್ಯನಿಗೂ ಯಾಮ್ಯನಿಗೂ ಕ್ಷೇಮ್ಯನಿಗೂ ನಮಸ್ಕಾರವು. ಮತ್ತು ಉರ್ವರ್ಯನಿಗೂ ಖಲ್ಯನಿಗೂ ಶ್ಲೋಕ್ಯನಿಗೂ ಅವಸಾನ್ಯನಿಗೂ ವನ್ಯನಿಗೂ ಕಕ್ಷ್ಯನಿಗೂ ಶ್ರವನಿಗೂ ಪ್ರತಿಶ್ರವನಿಗೂ ನಮಸ್ಕಾರ!"

ಮೇಲಿನ ಅನುವಾದದಲ್ಲಿರುವ ಒಂದೆರಡು ಶಬ್ದಗಳು ಹೊರತು ಉಳಿದ ಎಲ್ಲಾ ಶಬ್ದಗಳೂ ವೈದಿಕ(ವೇದಸಂಬಂಧ)ವಾದ್ದರಿಂದ ಭಾಷ್ಯಾಧಾರದಿಂದಲೇ ಇವುಗಳ ಅರ್ಥವನ್ನು ತಿಳಿದುಕೊಳ್ಳಬೇಕಾಗಿದೆ. ಎಲ್ಲವೂ ಪರಮೇಶ್ವರನ ಸ್ತುತಿಯೆಂಬುದೇನೋ ಸರಿ. ಆದರೆ ಅರ್ಥವಿಲ್ಲದ ಸ್ತುತಿಯು ಇರಲಾರದಷ್ಟೆ ! ಆದ್ದರಿಂದ ಇಲ್ಲಿರುವ ಪ್ರತಿಯೊಂದು ಪದದ ಅರ್ಥವನ್ನೂ ತಿಳಿದು ಅನುಸಂಧಾನಮಾಡುವದು ಅವಶ್ಯವಾಗಿರುತ್ತದೆ. ಮತ್ತು ಕೆಲವು ಒಂದಕ್ಕೊಂದು ವಿರುದ್ಧಪದಗಳೂ ಇವೆ. ಇವೆಲ್ಲ ಒಬ್ಬನೇ ಪರಮೇಶ್ವರನ ಸ್ತುತಿಯು ಆದೀತೆ ? ಎಂದೂ ಸಂಶಯವಾಗುತ್ತದೆ. ಉದಾಹರಣೆಗೆ : ಆರಂಭದಲ್ಲೇ ಇರುವ ಜ್ಯೇಷ್ಠ, ಕನಿಷ್ಠ-ಎಂಬ ವಿಶೇಷಣಗಳು. ಜ್ಯೇಷ್ಠನೆಂದರೆ ಹಿರಿಯುವನು; ಕನಿಷ್ಠನೆಂದರೆ ಕಿರಿಯುವನು. ಎರಡೂ ಒಬ್ಬನೇ ಹೇಗೆ ? ಎಂದು ಸಂದೇಹವುಂಟಾಗುವದು. ಆದ್ದರಿಂದ ಈಗ ಎಲ್ಲಾ ವಿಶೇಷಣಗಳ ಅಭಿಪ್ರಾಯವನ್ನೂ ಬಿಡಿಸಿ ನೋಡೋಣ.

ಜ್ಯೇಷ್ಠನೆಂದರೆ ಎಲ್ಲರಿಗಿಂತಲೂ ಹಿರಿಯನೆಂದರ್ಥ. ವಯಸ್ಸು, ವಿದ್ಯೆ, ಆಶ್ರಮ-ಇವುಗಳೆಲ್ಲದರಿಂದಲೂ ಹಿರಿಯನು ಪರಮೇಶ್ವರನು. ಕನಿಷ್ಠನೆಂದರೆ ಕಡಿಮೆಯವನು. ಈ ಎರಡೂ ರೂಪನಾಗಿ ಮಹಾದೇವನೇ ಇದ್ದುಕೊಂಡಿರುವನು ಎಂದರ್ಥ. ಲೋಕದಲ್ಲಿ ಯಾವನಾದರೊಬ್ಬನಿಗೆ ಒಬ್ಬನೇ ಮಗನಿದ್ದರೆ 'ನಿಮ್ಮ ಹಿರಿಯ ಮಗ ಯಾರು ? 'ಎಂದು ಯಾರಾದರೂ ಕೇಳಿದರೆ 'ಇವನೇ' ಎಂದು ತೋರಿಸುತ್ತಾನೆ. 'ಕಿರಿಯ ಮಗ ಯಾರು ' ಎಂದಾಗಲೂ ಅವನನ್ನೇ ತೋರಿಸುತ್ತಾನಲ್ಲವೆ ? ಏಕೆಂದರೆ ಇರುವವನೇ ಒಬ್ಬ ಮಗನಲ್ಲವೆ ? ಹಾಗೆಯೇ ಇರುವ ಒಬ್ಬನೇ ಪರಮೇಶ್ವರನೇ ಉಪಾಧಿಭೇದದಿಂದ ಹಿರಿಯನಾಗಿಯೂ ಕಿರಿಯನಾಗಿಯೂ ತೋರಿಕೊಳ್ಳುತ್ತಾನೆ. . ಜ್ಞಾನದೃಷ್ಟಿಯಿಂದ ನೋಡಿದಾಗ ಎಲ್ಲರಲ್ಲೂ ಒಬ್ಬನೇ ದೇವನಿರುವನು-ಎಂದರ್ಥ. ಕೆಲವು ಸಾಲಿಗ್ರಾಮಗಳು ದಪ್ಪನಾಗಿ ದೊಡ್ಡದಾಗಿರುತ್ತವೆ. ಕೆಲವು ಚಿಕ್ಕದಾಗಿರುತ್ತವೆ. ಆದರೂ ಎಲ್ಲವೂ ವಿಷ್ಣುವೇ ಅಲ್ಲವೆ ? ಹಾಗೆಯೇ ಜ್ಯೇಷ್ಠಕನಿಷ್ಠಗಳೆಂಬಿನೆರಡೂ ಪರಮೇಶ್ವರನೇ-ಎಂದು ತಿಳಿಯಬೇಕು.

ಪೂರ್ವಜನೆಂದರೆ ಮೊದಲು ಹುಟ್ಟಿದವನು. ಅಪರಜನೆಂದರೆ ಅನಂತರ ಹುಟ್ಟಿದವನು. ಸಾಮಾನ್ಯವಾಗಿ ಕಾರಣವು ಮೊದಲೂ ಕಾರ್ಯವು ಅನಂತರವೂ

ತೋರಿಕೊಳ್ಳುತ್ತವೆ. ಉದಾಹರಣೆಗೆ ಹಾಲು ಮೊದಲು ಇದ್ದುಕೊಂಡಿರುವದು. ಅದೇ ಅನಂತರ ಮೊಸರಾಗುವದು. ಹೀಗೆ ಕಾಲದಲ್ಲಿ ಪರಿಣಾಮವಾಗುವ, ಕಾರ್ಯಕಾರಣಗಳೆಂಬ ರೂಪದಿಂದ ಜಗತ್ತಿನಲ್ಲಿ ಕಂಡುಬರುತ್ತಿರುವ ಎಲ್ಲಾ ವಸ್ತುಗಳೂ ಪರಮೇಶ್ವರನೇ ಎಂದರ್ಥ. ತಂದೆ-ಮಕ್ಕಳನ್ನೂ ಈ ಸಂದರ್ಭದಲ್ಲಿ ಉದಾಹರಿಸಬಹುದು. ಜಗತ್ತಿಗೆಲ್ಲ ತಂದೆಯಾಗಿರುವ, ಸೃಷ್ಟಿಗಿಂತಲೂ ಮೊದಲೇ ಇರುವ ಪರಮೇಶ್ವರನು ಪೂರ್ವಜನು. ಅನಂತರ ಸೃಷ್ಟಿಕಾಲದಲ್ಲಿ ಜೀವಾತ್ಮರೂಪದಿಂದ ನಾನಾಶರೀರಗಳಲ್ಲಿ ತೋರಿಕೊಳ್ಳುವ ಅಪರಜನೂ ಅವನೇ ಎಂದರ್ಥ. ಹಾಗೆಯೇ ಜೀವನದಲ್ಲಿ ಪ್ರತಿಯೊಬ್ಬನೂ ಬಾಲ್ಯ, ಯೌವನ, ವಾರ್ಧಕ್ಯಗಳನ್ನು ಅನುಭವಿಸಬೇಕಾಗಿದೆಯಷ್ಟೆ ! ಯೌವನವೇ ಮಧ್ಯಮವಯಸ್ಸು; ಅಂಥ ವಯಸ್ಸಿನವನನ್ನು ಮಧ್ಯಮನೆಂದು ಕರೆದಿದೆ. ಅಪಗಲ್ಭನೆಂದರೆ ಬಾಲಕನು. ಇಂದ್ರಿಯಗಳು ಇನ್ನೂ ಬಲಿತುಕೊಳ್ಳದವನು-ಎಂದಭಿಪ್ರಾಯ. ಇವರೆಲ್ಲರೂ ಪರಮೇಶ್ವರನ ಸ್ವರೂಪರೇ ಆಗಿರುತ್ತಾರೆ. ಜಘನ್ಯನೆಂದರೆ ಹಿಂಭಾಗದಲ್ಲಿ (ಕೊನೆಯಲ್ಲಿ) ಹುಟ್ಟುವವನು. ಬುಧ್ನ್ಯನೆಂದರೆ ಬುಡದಲ್ಲಿ ಹುಟ್ಟುವವನು. ಕೆಲವು ಪೈರುಗಳು ಗೆಣಸು, ಕಡಲೆಕಾಯಿ, ಏಲಕ್ಕಿ-ಮುಂತಾದವುಗಳು ಗಿಡದ ಬುಡದಲ್ಲೇ ಹುಟ್ಟುವವು. ಮಾವಿನಹಣ್ಣು, ಸೀಬೆಹಣ್ಣು, ತೆಂಗಿನಕಾಯಿ- ಇವು ತುದಿಯಲ್ಲಿ ಹುಟ್ಟುವವು. ಆದರೆ ಎಲ್ಲವೂ ಪರಮೇಶ್ವರನ ಸ್ವರೂಪವೇ ಎಂದರ್ಥ.

ಸೋಭ್ಯನೆಂದರೆ ಸೋಭದಲ್ಲಿ ಹುಟ್ಟುವವನು. ಸೋಭವೆಂದರೆ ಉಭ-ಪಾಪಪುಣ್ಯಗಳೆರಡರಿಂದಲೂ ಸ-ಕೂಡಿದ್ದು ; ಮನುಷ್ಯಲೋಕವೆಂದರ್ಥ. ಈ ಮನುಷ್ಯಲೋಕದಲ್ಲಿ ಹುಟ್ಟಿರುವ ಎಲ್ಲಾ ವಸ್ತುಗಳ ಎಂದರೆ ಚೇತನಾಚೇತನಗಳ ರೂಪದಲ್ಲಿರುವವನು-ಎಂದರ್ಥ. ಪ್ರತಿಸರ್ಯನೆಂದರೆ ಪ್ರತಿಸರತಿ -ಗಚ್ಛತಿ (ಓಡಾಡುತ್ತದೆ)ಎಂಬರ್ಥದಲ್ಲಿ ಎಲ್ಲಾ ಜಂಗಮಪ್ರಾಣಿಗಳನ್ನೂ ತೆಗೆದುಕೊಳ್ಳಬೇಕು. ಆಯಾ ಪ್ರಾಣಿಗಳ ರೂಪದಲ್ಲಿರುವವನು ಎಂದರ್ಥ. ಪರಮೇಶ್ವರನ ಶರೀರಗಳನ್ನು ಸ್ಥಾವರ-ಜಂಗಮಗಳೆಂದು ವಿಂಗಡಿಸುತ್ತಾರೆ. ಅವುಗಳಲ್ಲಿ ಜಂಗಮಗಳು ಶ್ರೇಷ್ಠವೆಂದು ಬಲ್ಲವರ ಅಭಿಪ್ರಾಯ. ವೀರಶೈವರಲ್ಲಿ ಪೂಜ್ಯರಾದವರನ್ನು ಜಂಗಮರು, ಚರಮೂರ್ತಿಗಳು-ಎಂದು ಕರೆಯುತ್ತಾರೆ. ಪರಮೇಶ್ವರನೇ ಆ ರೂಪದಲ್ಲಿ

ತೋರಿಕೊಂಡಿದ್ದಾನೆ-ಎಂಬುದು ಅಭಿಪ್ರಾಯ. ಹೀಗೆ ಪ್ರತಿಸರ್ಯನೆಂದರೆ ಎಲ್ಲಾ ಜಂಗಮಪ್ರಾಣಿಗಳ ರೂಪದಲ್ಲಿರುವವನು ಎಂದು ತಾತ್ಪರ್ಯ. ಯಾಮ್ಯನೆಂದರೆ ಯಮಲೋಕದಲ್ಲಿರುವವನು. ಕ್ಷೇಮ್ಯನೆಂದರೆ ಸ್ವರ್ಗ ಲೋಕದಲ್ಲಿರುವವನು. ಯಮನಾಗಿ ಪ್ರಜೆಗಳನ್ನು ಶಿಕ್ಷಿಸುವವನೂ ದೇವೇಂದ್ರ ನಾಗಿ ತ್ರೈಲೋಕ್ಯವನ್ನೆಲ್ಲ ಆಳುತ್ತಿರುವವನೂ ಪರಮೇಶ್ವರನೇ-ಎಂದರ್ಥ.

ಉರ್ವರ್ಯನೆಂದರೆ ಭೂಮಿಯಲ್ಲಿರುವವನು. ಉರ್ವರಾ ಎಂದರೆ ಸಕಲ ವಿಧವಾದ ಸಸ್ಯಸಮೃದ್ಧಿಯಿಂದ ಕೂಡಿದ ಭೂಮಿಯು. ವ್ಯವಸಾಯದ ಭೂಮಿಯು ಪೈರಿನಿಂದ ಕಂಗೊಳಿಸುತ್ತಿರುವಾಗ ನೋಡಿದರೆ ಎಷ್ಟು ಆನಂದ ವಾಗುತ್ತದೆ ? ಮಲೆನಾಡುಪ್ರದೇಶಗಳಲ್ಲಿ ಇಂಥ ಧಾನ್ಯಸಂಯುಕ್ತವಾದ ಭೂಮಿಯನ್ನು ಪೂಜಿಸಿ 'ಧಾನ್ಯಶಂಕರನ ಹಬ್ಬ'ವೆಂಬ ಒಂದು ಉತ್ಸವವನ್ನೂ ಆಚರಿಸುತ್ತಾರೆ. ನಿಜವಾಗಿ ನೋಡಿದರೆ ಪೈರುಗಳು ಭಗವಂತನ ವಿಭೂತಿ ಗಳಾಗಿದ್ದು ಮನುಷ್ಯನನ್ನೂ ಪ್ರಾಣಿಗಳನ್ನೂ ಪೋಷಿಸುವದಾಗಿವೆ. ಇಂಥ ಪೈರುಪಚ್ಚೆಗಳನ್ನು ಕಂಡಾಗಲೆಲ್ಲ ಉರ್ವರ್ಯನಾದ ಭಗವಂತನ ನೆನಪುಮಾಡಿ ಕೊಳ್ಳಬೇಕು. ಖಲ್ಯನೆಂದರೆ ಕಣದಲ್ಲಿ ವಾಸಿಸುವವನು-ಎಂದರ್ಥ. ಧಾನ್ಯ ಗಳನ್ನು ಒಕ್ಕಣೆಮಾಡುವ ಜಾಗವನ್ನು ಖಲವೆಂದು ಕರೆಯುವರು. ಅಲ್ಲಿರು ವವನೂ ಪರಮೇಶ್ವರನೇ-ಎಂದಭಿಪ್ರಾಯ. ಶ್ಲೋಕ್ಯನೆಂದರೆ ಶ್ಲೋಕ ಗಳಿಂದ ಪ್ರತಿಪಾದ್ಯನು. ವೇದಮಂತ್ರಗಳನ್ನು ಶ್ಲೋಕಗಳೆಂದೂ ಕರೆಯು ತ್ತಾರೆ. 'ತದಪ್ಯೇಷ ಶ್ಲೋಕೋ ಭವತಿ' ಎಂಬ ವಾಕ್ಯವು ಉಪನಿಷತ್ತಿನಲ್ಲಿ ಕಂಡುಬರುತ್ತದೆ. ಇಂಥ ಶ್ಲೋಕಗಳಿಂದ ತಿಳಿಸಲ್ಪಡುವವನು ಪರಮೇಶ್ವರನೇ ಎಂದರ್ಥ. ಅವಸಾನ್ಯನೆಂದರೆ ವೇದಾಂತಪ್ರತಿಪಾದ್ಯನೆಂದೇ ಅರ್ಥ. ಅವ ಸಾನ ಎಂದರೆ ಕೊನೆ. ವೇದದ ಕೊನೆಯಭಾಗಗಳನ್ನು ವೇದಾಂತಗಳೆಂದು ಕರೆಯುವರು. ಆ ವೇದಾಂತಗಳಲ್ಲಿ ಪ್ರತಿಪಾದ್ಯನಾಗಿರುವವನು ಪರಮೇಶ್ವರನೇ ಎಂದು ಅರ್ಥ.

ಇನ್ನು ವನ್ಯನೆಂದರೆ ವನ-ಕಾಡಿನಲ್ಲಿ, ಇದ್ದುಕೊಂಡಿರುವವನಾದ್ದರಿಂದ ವನ್ಯನು. ಕಾಡಿನಲ್ಲಿ ಗಿಡಮರಗಳು, ಪಶುಪಕ್ಷಿಗಳು, ಋಷಿಗಳು, ದೇವತೆಗಳು- ಎಲ್ಲರೂ ಇರುತ್ತಾರೆ. ಇವರೆಲ್ಲರನ್ನೂ ಪರಮೇಶ್ವರನ ಸ್ವರೂಪರೆಂದೇ ತಿಳಿಯ ಬೇಕು. ಕಕ್ಷಗಳಲ್ಲಿರುವವನು ಕಕ್ಷ್ಯನು. ಕಕ್ಷವೆಂದರೆ ಮರದ ಪೊಟರೆಗಳು.

ಅವುಗಳಲ್ಲಿಯೂ ಹಕ್ಕಿ, ಹಾವು, ಹಲ್ಲಿ-ಮುಂತಾದ ಕೆಲವು ಪ್ರಾಣಿಗಳು ವಾಸವಾಗಿರುವವು. ಅವೆಲ್ಲವೂ ಪರಮೇಶ್ವರನೇ ಎಂದರ್ಥ. ಶ್ರವವೆಂದರೆ ಕೇಳಬರತಕ್ಕದ್ದು. ಧ್ವನಿ ಎಂದರ್ಥ. ಪ್ರತಿಶ್ರವವೆಂದರೆ ಪ್ರತಿಧ್ವನಿ ಎಂದರ್ಥ. ಧ್ವನಿಗಳು ನಾನಾಪ್ರಕಾರವಾಗಿರುವವು. ಅವುಗಳ ವೈಚಿತ್ರ್ಯವು ಎಂಥವರಿಗಾದರೂ ಆಶ್ಚರ್ಯವನ್ನುಂಟುಮಾಡುವದು. ಉದಾಹರಣೆಗೆ ಒಂದೊಂದು ಪ್ರಾಣಿಯ ಧ್ವನಿ ಒಂದೊಂದು ರೂಪದಲ್ಲಿದ್ದು ಸಂಗೀತದ ಸಪ್ತಸ್ವರಗಳಾಗಿವೆ. ಷಡ್ಜವೆಂಬುದು ನವಿಲಿನ ಧ್ವನಿ. ಋಷಭವೆಂಬುದು ಗೋವುಗಳದ್ದು. ಆಡು ಕುರಿ-ಮುಂತಾದವುಗಳ ಧ್ವನಿಯೇ ಗಾಂಧಾರ; ಕ್ರೌಂಚಪಕ್ಷಿಯ ಧ್ವನಿ ಮಧ್ಯಮ. ಕೋಗಿಲೆಯ ಧ್ವನಿ ಪಂಚಮ. ಕುದುರೆಯ ಧ್ವನಿ ದೈವತ; ಆನೆಯ ಧ್ವನಿ ನಿಷಾದ-ಎಂದು ಅಮರಕೋಶದಲ್ಲಿದೆ. ಇವುಗಳನ್ನು ಕೇಳಿದಾಗ ಪರಮೇಶ್ವರನನ್ನೇ ನೆನೆಸಿಕೊಳ್ಳಬೇಕು. ಇನ್ನು ಪ್ರತಿಧ್ವನಿಯಂತೂ ಅವವುಗಳನ್ನೇ ಅನುಕರಿಸುತ್ತದೆ. ಇಂಥ ವಿಚಿತ್ರವಾದ ಶಬ್ದಪ್ರಪಂಚರೂಪದಿಂದ ತೋರಿಕೊಂಡಿರುವ ಪರಮೇಶ್ವರನ ಮಹಿಮೆಯು ಅಪಾರವಾದುದು- ಎಂದು ಅಭಿಪ್ರಾಯ.

---

## ೨೨. ನಮೋ ಬಿಲ್ಮಿನೇ ಚ

ರುದ್ರಾಧ್ಯಾಯದ ಆರನೆಯ ಅನುವಾಕದ ಕೊನೆಯ ಭಾಗವನ್ನು ಈಗ ನಾವು ವಿಚಾರಮಾಡಬೇಕಾಗಿದೆ.

**ನಮ ಆಶುಷೇಣಾಯ ಚಾಶುರಥಾಯ ಚ ನಮಃ ಶೂರಾಯ ಚಾವಭಿಂದತೇ ಚ ನಮೋ ವರ್ಮಿಣೇ ಚ ವರೂಥಿನೇ ಚ ನಮೋ ನಮೋ ಬಿಲ್ಮಿನೇ ಚ ಕವಚಿನೇ ಚ ನಮಃ ಶ್ರುತಾಯ ಚ ಶ್ರುತಸೇನಾಯ ಚ ॥**

"ಆಶುಷೇಣನಿಗೂ ಆಶುರಥನಿಗೂ, ಶೂರನಿಗೂ ಅವಭಿಂದನಿಗೂ, ವರ್ಮಿಗೂ ವರೂಥಿಗೂ, ಬಿಲ್ಮಿಗೂ ಕವಚಿಗೂ ಶ್ರುತನಿಗೂ ಶ್ರುತಸೇನನಿಗೂ ನಮಸ್ಕಾರ!"

ಆಶುಷೇಣನೆಂದರೆ ಅಶು-ಶೀಘ್ರವಾಗಿ ಸೇನ-ಸೇನೆಯನ್ನು ಒಯ್ಯುವವನು. ಜಾಗ್ರತೆಯಾಗಿ ಚಲಿಸುವಂಥ ಸೈನ್ಯವುಳ್ಳವನು ಎಂದಭಿಪ್ರಾಯ. ಪರಮೇಶ್ವರನ ಸೈನ್ಯವು ಯಾವಾಗಲೂ ತುಂಬ ಚುರುಕಾಗಿರುತ್ತದೆ. ಆತನ ದೃಷ್ಟಿಪಾತಮಾತ್ರದಿಂದ ಅದು ತನ್ನ ಕಾರ್ಯವನ್ನು ನೆರವೇರಿಸಿಬಿಡುವದು. ದಕ್ಷಯಜ್ಞಕಾಲದಲ್ಲಿ ಕಾರ್ಯಾಚರಣೆಯನ್ನು ನಡೆಯಿಸಿದ ಭಗವಂತನ ಸೇನೆಯು ಅಪರಾಧಿಗಳೆಲ್ಲರನ್ನೂ ಶಿಕ್ಷಿಸಿತು-ಎಂಬ ಕಥೆಯನ್ನು ಕೇಳಿದ್ದೀರಷ್ಟೆ! ಸೈನ್ಯಕ್ಕೆ ಯಾವಾಗಲೂ ಶೀಘ್ರಚಲನೆಯೇ ಸ್ವಭಾವವಾಗಿರಬೇಕು. ಹಾಗಾದರೇ ಜಯವನ್ನು ಪಡೆಯಲು ಸಾಧ್ಯವಾದೀತು. ಇಂಥ ಆಶುಷೇಣನು ಪರಮೇಶ್ವರನು ; ಮತ್ತು ಆಶುರಥನೂ ಆಗಿದ್ದಾನೆ. ತನ್ನ ರಥವನ್ನು ಅತ್ಯಂತ ಚುರುಕಾಗಿ ಬೇಕಾದಲ್ಲಿಗೆ ನಡೆಯಿಸಬಲ್ಲ ಸಾಮರ್ಥ್ಯವುಳ್ಳವನು ಮಹಾದೇವನು. ಹಾಗೂ ಶೂರನೂ ಆಗಿರುತ್ತಾನೆ. ಶೌರ್ಯವೆಂಬುದು ಯುದ್ಧಕ್ಕೆ ಅಗತ್ಯವಾದ ಗುಣವು. ರಾಕ್ಷಸರೊಡನೆ ಕಾದಾಡುವಾಗ ಶೌರ್ಯದ ಪ್ರದರ್ಶನವು ಪರಮೇಶ್ವರನಲ್ಲಿ ಕಂಡುಬರುತ್ತದೆ. ಅಂಥ ಸಂದರ್ಭದಲ್ಲಿ ಆತನು ಅವಭಿಂದನಾಗಿಯೂ ವರ್ತಿಸುತ್ತಾನೆ. ಅವಭಿಂದನು ಎಂದರೆ ಬ್ರಹ್ಮದ್ವೇಷಿಗಳಾದ ರಾಕ್ಷಸರುಗಳ ತಲೆಗಳನ್ನು ಸೀಳುವವನು ಎಂದರ್ಥ. ಇಂಥ ಸಂದರ್ಭಗಳಲ್ಲಿ ಮಹಾದೇವನು ಸ್ವಲ್ಪವೂ ಹಿಂತೆಗೆಯುವದಿಲ್ಲ. ಸಂಹಾರಮೂರ್ತಿಯಾದ ಆತನು ಧರ್ಮದ್ವೇಷಿಗಳ ವಿಚಾರದಲ್ಲಿ ಎಂದೆಂದೂ ದಯೆತೋರುವದಿಲ್ಲ. ಅದ್ದರಿಂದ ನಾವು ಧರ್ಮದ್ವೇಷಿಗಳಾದರೆ ಆತನ ಕೋಪಕ್ಕೆ ಪಾತ್ರರಾಗಿ ಹಾಳಾಗುವದು ನಿಶ್ಚಿತ-ಎಂದೂ ತಿಳಿಸಿದಂತಾಯಿತು.

ಭಗವಂತನು ವರ್ಮಿಯೂ ವರೂಥಿಯೂ ಆಗಿರುವನು. ವರ್ಮವೆಂದರೆ ಯುದ್ಧಕಾಲದಲ್ಲಿ ರಕ್ಷಣೆಗಾಗಿ ತೊಡಗುವ ಕಂಚುಕವು; ಕವಚವು. ಹಿಂದಿನ ಕಾಲಕ್ಕೆ ರಾಜರುಗಳು ಯುದ್ಧದಲ್ಲಿ ಗಾಯವಾಗದಿರುವಂತೆ ತೆಳುವಾದ ಉಕ್ಕಿನ ಕವಚಗಳನ್ನು ತೊಡುತ್ತಿದ್ದರು. ಕವಚಧಾರಿಯಾದವನೇ ವರ್ಮಿಯು-ಎಂದರ್ಥ. ಪರಮೇಶ್ವರನ ಕವಚಕ್ಕೆ ಶಿವಕವಚವೆಂಬ ಪ್ರಸಿದ್ಧವಾದ ಹೆಸರೂ ಇವೆ. ಅದನ್ನು ನಾವು ಸಂಪಾದಿಸಿಕೊಂಡಲ್ಲಿ ಮೃತ್ಯುಭಯವೇ ಇರಲಾರದು. ಇರಲಿ; ಇನ್ನು ವರೂಥವೆಂದರೆ ಸಾರಥಿಯು ಗುಪ್ತವಾಗಿ ಕುಳಿತುಕೊಳ್ಳುವ ಜಾಗವು. ಅಲ್ಲಿದ್ದುಕೊಂಡು ರಥವನ್ನು ಸುರಕ್ಷಿತವಾಗಿ ಸಾಗಿ

ಸುವವನೂ ಪರಮೇಶ್ವರನೇ ಎಂದರ್ಥ. ಅಧ್ಯಾತ್ಮವಾಗಿ ನೋಡಿದರೆ ಶರೀರ ವೆಂಬ ರಥದಲ್ಲಿ ಹೃದಯವೆಂಬ ವರೂಥದಲ್ಲಿ ವಾಸಿಯಾಗಿರುವ ಭಗವಂತನು ನಮ್ಮ ಜೀವನರಥವನ್ನು ನಡೆಯಿಸುತ್ತಲೇ ಇರುವನು. ಇಂಥ ವರೂಥಿಯಾದ ಮಹಾದೇವನಿಗೆ ನಮಸ್ಕಾರವನ್ನು ಶ್ರುತಿಯು ಅರ್ಪಿಸುತ್ತಿದೆ. ಬಿಲ್ಮಿಯೆಂದರೆ ಬಿಲದಂತಿರುವ ಶಿರಸ್ತ್ರಾಣ (ತಲೆಯ ಕವಚ)ವನ್ನು ಧರಿಸಿರುವವನು. ಈಗಿನ ಕಾಲಕ್ಕೆ 'ಹೆಲ್ಮೆಟ್' ಎಂಬ ಶಿರಸ್ತ್ರಾಣವು ಬಳಕೆಗೆ ಬಂದಿದೆಯಷ್ಟೆ! ದ್ವಿಚಕ್ರ ವಾಹನಚಾಲಕರು ಅದನ್ನು ಕಡ್ಡಾಯವಾಗಿ ಧರಿಸಲೇಬೇಕೆಂಬ ಕಾನೂನು ಇದೆಯೆಂದೂ ಕೇಳಿದ್ದೇನೆ. ಪರಮೇಶ್ವರನೂ ಹೀಗೆಯೇ ಶಿರಸ್ತ್ರಾಣವನ್ನು ಧರಿಸಿ ಬಿಲ್ಮಿಯೆನಿಸಿರುವನು. ಆದ್ದರಿಂದ ಹೆಲ್ಮೆಟ್‌ಧಾರಿಗಳನ್ನು ಕಂಡಾಗಲೆಲ್ಲ ನಾವು ಶಿವನ ಈ ಸ್ವರೂಪವನ್ನು ಅನುಸಂಧಾನಮಾಡಬಹುದಾಗಿದೆ. ವೇದ ದಲ್ಲಿರುವ ಈ ವಿಶೇಷಣವು ಈಗಿನಕಾಲಕ್ಕೂ ಅನ್ವಯಿಸುವಂತಿದೆ-ಎಂಬುದನ್ನು ಗಮನಿಸಿರಿ. ಹಾಗೆಯೇ ಪರಮೇಶ್ವರನು ಕವಚಿಯು. ಅಂಗಿಕೋಟುಗಳುಳ್ಳ ವನು. ಅಂತೂ ನಾವು ಈಗಿನಕಾಲದಲ್ಲಿಯೂ ಬಹುಬೇಗ ಪರಮೇಶ್ವರನನ್ನು ನೆನೆಯಿಸಿಕೊಳ್ಳಲು ಈ ಬಿಲ್ಮಿ-ಕವಚಿಗಳು ಸಹಾಯಕರಾಗುತ್ತಾರೆಂದಾ ಯಿತು. ನಾನಾರೂಪಧರನಾದ ಆ ಮಹಾಮಹಿಮನ ವೇಷಭೂಷಣಗಳನ್ನು ಏನೆಂದುತಾನೆ ವರ್ಣಿಸಲಾದೀತು ? ಸುಪ್ರಸಿದ್ಧನಾಗಿರುವದರಿಂದ ಶ್ರುತ ನೆಂದೂ ಪ್ರಖ್ಯಾತವಾದ ಸೈನ್ಯವುಳ್ಳವನಾದ್ದರಿಂದ ಶ್ರುತಸೇನನೆಂದೂ ಆತನು ಮತ್ತೊಮ್ಮೆ ಸ್ತುತಿಸಲ್ಪಟ್ಟಿರುವನು.

ನಮೋ ದುಂದುಭ್ಯಾಯ ಚಾಹನನ್ಯಾಯ ಚ ನಮೋ ಧೃಷ್ಣವೇ ಚ ಪ್ರಮೃಶಾಯ ಚ ನಮೋ ದೂತಾಯ ಚ ಪ್ರಹಿತಾಯ ಚ ನಮೋ ನಿಷಂಗಿಣೇ ಚೇಷುಧಿಮತೇ ಚ ನಮಸ್ತೀಕ್ಷ್ಣೇಷವೇ ಚಾಯುಧಿನೇ ಚ ನಮಃ ಸ್ವಾಯುಧಾಯ ಚ ಸುಧನ್ವನೇ ಚ ||

"ದುಂದುಭ್ಯನೂ ಆಹನನ್ಯನೂ ಧೃಷ್ಣುವೂ ಪ್ರಮೃಶನೂ ದೂತನೂ ಪ್ರಹಿತನೂ ನಿಷಂಗಿಯೂ ಇಷುಧಿಮಂತನೂ ತೀಕ್ಷ್ಣೇಷುವೂ ಆಯುಧಿಯೂ ಸ್ವಾಯುಧನೂ ಸುಧನ್ವನೂ ಆದ ಭಗವಂತನಿಗೆ ನಮಸ್ಕಾರ!"

ಈಗ ಏಳನೆಯ ಅನುವಾಕವು ಪ್ರಾರಂಭವಾಗುತ್ತಿದೆ. ಹಿಂದಿನಂತೆ ಇಲ್ಲಿಯೂ ಪರಮೇಶ್ವರನ ಸರ್ವಾಂತರ್ಯಾಮಿತ್ವವನ್ನೂ ಸರ್ವಾತ್ಮತ್ವವನ್ನೂ ಕುರಿತು ಸ್ತುತಿಸಲಾಗಿದೆ. ದುಂದುಭಿ-ಎಂದರೆ ನಗಾರಿಯಲ್ಲಿದ್ದುಕೊಂಡಿರುವ ನಾದ್ದರಿಂದ ದುಂದುಭ್ಯನು. ನಗಾರಿಯನ್ನು ಹೊಡೆಯುವ ಕೋಲಿನಲ್ಲಿಯೂ ಆತನೇ ಇರುವದರಿಂದ ಆಹನನ್ಯನು. ನಗಾರಿಯು ಹಿಂದೆ ಜಯಸೂಚಕ ವಾಗಿಯೂ ಕೆಲವು ಸಂದರ್ಭಗಳಲ್ಲಿ ಉತ್ಸಾಹಸೂಚಕವಾಗಿಯೂ ಉಪಯೋ ಗಿಸಲ್ಪಡುತ್ತಿತ್ತು. ಈಗ ಅದರ ಉಪಯೋಗವು ಕಡಿಮೆಯಾಗಿದೆ. ಆದರೂ ರಥೋತ್ಸವಾದಿಗಳಲ್ಲಿ ತೇರಿನ ಹಿಂಭಾಗದಲ್ಲಿ ನಗಾರಿಯನ್ನಿಟ್ಟು ತೇರನ್ನು ಎಳೆ ಯುವಾಗಲೆಲ್ಲ ಈಗಲೂ ಅದನ್ನು ಬಾರಿಸುತ್ತಾರೆ. ಯಕ್ಷಗಾನದಂಥ ಕೆಲವು ಆಟಗಳಲ್ಲಿಯೂ ಇದೇರೀತಿಯ ವಾದ್ಯವನ್ನು ಬಳಸುತ್ತಾರೆ. ಇವುಗಳೆಲ್ಲ ಪರ ಮೇಶ್ವರನ ಸ್ವರೂಪವೇ ಎಂದರ್ಥ. ಹಾಗೆಯೇ ಭಗವಂತನು ಧೃಷ್ಣುವು ಎಂದರೆ ಯುದ್ಧದಲ್ಲಿ ಹೆದರಿ ಓಡಿಹೋಗದೆಇರುವವನು. ಹೆಚ್ಚಿನ ಧೈರ್ಯ ಶಾಲಿಯು ಎಂದರ್ಥ. ಪ್ರಮೃಶನೆಂದರೆ ಶತ್ರುಸೈನ್ಯದ ವೃತ್ತಾಂತಗಳನ್ನೆಲ್ಲ ಬಲ್ಲವನು-ಎಂದರ್ಥ. ಇದೂ ಸಹ ಯುದ್ಧಕಾಲದಲ್ಲಿ ಅಗತ್ಯವಾದ ವಿಷಯವು. ಈ ಎಲ್ಲಾ ರೂಪದಲ್ಲಿಯೂ ಮಹಾದೇವನೇ ತೋರಿಕೊಳ್ಳುತ್ತಿರುವನು.

ಇನ್ನು ದೂತನೆಂದರೆ ಸಂದೇಶಗಳನ್ನು ಒಯ್ಯುವವನು. ರಾಯಭಾರಿ- ಎಂದೂ ಕರೆಯಬಹುದು. ಶ್ರೀಕೃಷ್ಣಭಗವಂತನೇ ದೌತ್ಯವನ್ನು ಪಾಂಡವರ ಪರವಾಗಿ ವಹಿಸಿದನೆಂತ ಮಹಾಭಾರತದಲ್ಲಿದೆ. ಹನುಮಂತನೆಂಬ ದೂತ ಶ್ರೇಷ್ಠನು ರಾಮಾಯಣಪ್ರಸಿದ್ಧನು. ಆದ್ದರಿಂದ ದೌತ್ಯವನ್ನು ಕೀಳಾದ ಕೆಲಸ ವೆಂದು ಭಾವಿಸುವಂತಿಲ್ಲ. ನಿಜವಾಗಿ ನೋಡಿದರೆ ಕೃಷ್ಣಭಗವಂತನಂತೆ ದೌತ್ಯವನ್ನು ನಿರ್ವಹಿಸಲು ಯಾರಿಗೆ ತಾನೆ ಸಾಧ್ಯ ? ಎಷ್ಟೇ ಜಾಣತನದಿಂದ ಹಾಗೂ ಬುದ್ಧಿವಂತಿಕೆಯಿಂದಲೇ ಭಗವಂತನು ವರ್ತಿಸಿದನಾದರೂ ಆಸುರೀ ಸಂಪತ್ತಿನಿಂದ ಕೊಬ್ಬಿದ್ದ ದುರ್ಯೋಧನಾದಿಗಳ ಹಠಮಾರಿತನದಿಂದ ಅತನ ದೌತ್ಯವು ವ್ಯರ್ಥವಾಯಿತು, ಅಥವಾ ದುಷ್ಟರ ವಿನಾಶಕ್ಕೆ ನಾಂದಿಯಾಯಿತು ಎನ್ನಬಹುದು. ಹಾಗೆಯೇ ಹನುಮಂತನ ಚಾಣಾಕ್ಷತನದ ದೌತ್ಯದಿಂದಲೇ ಶ್ರೀರಾಮನಿಗೆ ದಿಗ್ವಿಜಯವೂ ರಾವಣಾದಿಗಳ ವಧೆಯೂ ಆಯಿತು. ಈಗಿನ ಕಾಲಕ್ಕೂ ದೂತರನ್ನು (ರಾಯಭಾರಿಗಳನ್ನು) ಆಯಾ ದೇಶದ ಪರವಾಗಿ ವಿದೇಶಗಳಲ್ಲಿ ನೇಮಿಸುವ ಪದ್ಧತಿಯಿದೆಯಷ್ಟೆ! ಇದೊಂದು ಕಷ್ಟವಾದ

ಕೆಲಸವು. ತನ್ನ ದೇಶದ ಗೌರವವನ್ನೂ ಪ್ರತಿಷ್ಠೆಯನ್ನೂ ಕಾಪಾಡಿಕೊಂಡು ಇತರರಿಗೂ ಗೌರವವುಂಟಾಗುವಂತೆ ನಡೆದುಕೊಳ್ಳುವದು, ಸಮಯಾನುಸಾರ ಸಹಾಯುಗಳನ್ನು ಹೊಂದುವದು, ಶಾಂತಿಯನ್ನು ಕುದುರಿಸುವದು–ಇವೆಲ್ಲ ರಾಯಭಾರಿಗಳ ಪಾಲಿಗೆ ಸೇರಿದ್ದು. ಇದಕ್ಕೆಲ್ಲ ಅಗತ್ಯವಾದ ಅರ್ಹತೆಯು ದೊರಕಬೇಕಾದರೆ ಪರಮೇಶ್ವರನ ಅನುಗ್ರಹವು ಬೇಕು. ಇಂಥ ಕಾರ್ಯ ದಕ್ಷರಾದ ದೂತರುಗಳ ರೂಪದಲ್ಲಿರುವವನು ಪರಮೇಶ್ವರನೇ–ಎಂದರ್ಥ. ಪ್ರಹಿತನೆಂದರೆ ಯಜಮಾನನಿಂದ ಪ್ರೇರಿತನಾಗಿ ಹೊರಟು ಆ ಯಜಮಾನ ನಿಗೆ ಹಿತವಾದಂಥ ಕಾರ್ಯಗಳನ್ನೇ ಮಾಡುವವನು. ಇಂಥ ದೂತಶ್ರೇಷ್ಠರು ಈಗ ದುರ್ಲಭರೇ ಸರಿ. ನಿಷಂಗಿಯೂ ಇಷುಧಿಮಂತನೂ ಆಗಿರುವ ಪರ ಮೇಶ್ವರನನ್ನು ಹಿಂದೊಮ್ಮೆ ವರ್ಣಿಸಲಾಗಿದೆ. ಬಾಣ, ಬತ್ತಳಿಕೆಗಳಿಂದ ಕೂಡಿರುವವನು–ಎಂಬುದನ್ನು ಜ್ಞಾಪಿಸಿಕೊಳ್ಳಿರಿ.

ತೀಕ್ಷ್ಣೇಷುವೂ ಆಯುಧಿಯೂ ಆಗಿರವ ಪರಮೇಶ್ವರನನ್ನು ಈಗ ಸ್ಮರಿಸೋಣ. ಹರಿತವಾದ ಬಾಣಗಳನ್ನು ಹೊಂದಿರುವವನು ತೀಕ್ಷ್ಣೇಷುವು. ಒಂದೇ ಬಾಣದಿಂದ ತ್ರಿಪುರಾಸುರರನ್ನು ಸಂಹಾರಮಾಡಿದ ಭಗವಂತನ ಬಾಣ ಗಳ ಚುರುಕು ಎಷ್ಟೆಂಬುದನ್ನು ವರ್ಣಿಸಲು ಸಾಧ್ಯವಾಗುವದಿಲ್ಲ. ಬಹಳ ಜಾತಿಯ ಆಯುಧಗಳನ್ನು ಹಿಡಿದಿರುವನಾದ್ದರಿಂದ ಆಯುಧಿಯು. ಸುಂದರ ವೂ ಶೋಭನವೂ ಆದ ಆಯುಧಗಳುಳ್ಳವನಾದ್ದರಿಂದ ಸ್ವಾಯುಧನು. ಸು–ಆಯುಧ–ಎಂದು ಬಿಡಿಸಿ ಅರ್ಥಮಾಡಿಕೊಳ್ಳಬೇಕು. ಹಾಗೆಯೇ ಸುಧನ್ವನೂ ಆಗಿರುವನು. ವಿಷ್ಣುಸಹಸ್ರನಾಮದ ೫೬೭ನೆಯ ನಾಮವೂ ಸುಧನ್ವನೆಂದಿರುವದನ್ನು ನೆನೆಯಿಸಿಕೊಳ್ಳಿರಿ.

---

## ೨೩. ನಮಃ ಸ್ರುತ್ಯಾಯ ಚ ಪಥ್ಯಾಯ ಚ

ರುದ್ರಾಧ್ಯಾಯದ ಏಳನೆಯ ಅನುವಾಕದ ಉತ್ತರಭಾಗವನ್ನು ಈಗ ವಿಚಾರಮಾಡಬೇಕಾಗಿದೆ.

**ನಮಃ ಸ್ರುತ್ಯಾಯ ಚ ಪಥ್ಯಾಯ ಚ ನಮಃ ಕಾಟ್ಯಾಯ ಚ ನೀಪ್ಯಾಯ ಚ ನಮಃ ಸೂದ್ಯಾಯ ಚ ಸರಸ್ಯಾಯ ಚ ನಮೋ ನಾದ್ಯಾಯ ಚ ವೈಶಂತಾಯ ಚ ॥**

"ಸ್ರುತ್ಯನೂ ಪಥ್ಯನೂ ಕಾಟ್ಯನೂ ನೀಪ್ಯನೂ ಸೂದ್ಯನೂ ಸರಸ್ಯನೂ ನಾದ್ಯನೂ ವೈಶಂತನೂ ಆಗಿರುವವನಿಗೆ ನಮಸ್ಕಾರ!"

ಭಗವಂತನನ್ನು ಎಲ್ಲೆಲ್ಲಿಯೂ ಕಾಣುವ ದಿವ್ಯದೃಷ್ಟಿಯುಳ್ಳವರಿಗೆ ಇಡಿಯ ಬ್ರಹ್ಮಾಂಡದಲ್ಲಿ ಎಲ್ಲಾ ವಸ್ತುಗಳೂ ಆತನ ವಿಭೂತಿಗಳಾಗಿಯೇ ತೋರುವವು. ಈ ದೃಷ್ಟಿಯಿಂದ ಇಲ್ಲಿ ಈಶ್ವರನನ್ನು ಸ್ತುತಿಸಲಾಗಿದೆ. **ಸ್ರುತ್ಯ**ನೆಂದು ಹೊಗಳಿರುವದೂ ಒಂದು ವಿಭೂತಿಯೇ. ಹೀಗೆಯೇ ಮುಂದಿನ ಎಲ್ಲವನ್ನೂ ತಿಳಿಯಬೇಕು. ಸ್ರುತಿ-ಎಂದರೆ ದಾರಿ ಎಂದರ್ಥ. ಹೆಜ್ಜೆಯಿಂದ ಮಾತ್ರ ನಡೆಯಲು ಸಾಧ್ಯವಾದ ಕಾಲುದಾರಿ(Foot-Path)ಯನ್ನು ಸ್ರುತಿಯೆನ್ನುವರು. ಅದರಲ್ಲಿರುವವನೂ ಪರಮೇಶ್ವರನೇ-ಎಂದರ್ಥ. ಈಗಿನ ಕಾಲಕ್ಕೆ ದೊಡ್ಡದೊಡ್ಡ ನಗರಗಳಲ್ಲಿ ವಾಸಕ್ಕೆ ಸ್ಥಳವೇ ಸಿಗದೆ ಎಷ್ಟೋಜನ ದರಿದ್ರರು ಫುಟ್‌ಪಾತ್‌ಗಳಲ್ಲಿಯೇ ವಾಸಮಾಡುತ್ತಾರೆ. ಹಾಗೆಂದಮಾತ್ರಕ್ಕೆ ಅವರೇನೂ ಭಗವಂತನಿಗಿಂತ ಬೇರೆಯಲ್ಲ. ಅಂಥ ಜನರಲ್ಲಿಯೂ ಭಗವಂತನೇ ಇದ್ದಾನೆ- ಎಂದು ಭಾವಿಸಬೇಕು. ಇನ್ನೂ ಎಷ್ಟೋ ಹಳ್ಳಿಗಳಿಗೆ ರಸ್ತೆಯೇ ಇರುವದಿಲ್ಲ. ನಡೆದೇ ಹೋಗಬೇಕು. ಇಂಥ ದುರ್ಗಮವಾದ ಕಡಿದಾದ ಚಿಕ್ಕ ಹಾದಿಗಳಲ್ಲಿಯೂ ಪರಮೇಶ್ವರನೇ ಇದ್ದಾನೆ. ಕಾಡಿನಲ್ಲಿ ದಾರಿತಪ್ಪಿದವನಿಗೆ ಒಂದು ಸಣ್ಣ ದಾರಿ ಕಣ್ಣಿಗೆ ಬಿದ್ದರೂ ಎಷ್ಟು ಸಂತೋಷವಾಗುತ್ತದೆ! ನೋಡಿರಿ. ಅದು ಪರಮೇಶ್ವರನ ವಿಭೂತಿಯಾದ್ದರಿಂದಲೇ ಆನಂದಕ್ಕೆ ಕಾರಣವಾಗಿದೆ. ಹಾಗೆಯೇ **ಪಥ**ವೆಂದರೆ ರಾಜಮಾರ್ಗಗಳು. ಅವುಗಳಲ್ಲಿಯೂ ಭಗವಂತನೇ ಇದ್ದಾನೆ. ಅವನೇ **ಪಥ್ಯನು.** ರಾಜಮಾರ್ಗಗಳಲ್ಲಿ ಸಂಚರಿಸುವವರನ್ನೆಲ್ಲ ಭಗವಂತನೆಂದೇ ಭಾವಿಸಲು ಇದರಿಂದ ಅನುಕೂಲವಾಗುವದು.

**ಕಾಟ್ಯ**ವೆಂದರೆ ಸ್ವಲ್ಪವೇ ನೀರು ಇರುವ ಕಾಲುವೆ. **ನೀಪ**ವೆಂದರೆ ನೀರು ಧುಮುಕುವ ಪ್ರದೇಶ. **ಸೂದ್ಯ**ವೆಂದರೆ ಕೆಸರಿನ ಪ್ರದೇಶವು. (ಕೆರೆಯ ಅಂಗಳ ಇತ್ಯಾದಿ.) **ಸರಸ್ಸೆಂ**ದರೆ ಸರೋವರವು. ಇವುಗಳಲ್ಲೆಲ್ಲ ಇರುವವನು ಪರಮೇಶ್ವರನು-ಎಂದು ಸ್ತುತಿಸಿದೆ. ನೀರಿನ ಪ್ರದೇಶಗಳನ್ನು ನೋಡಿದಾಗಲೆಲ್ಲ ಅವು ಚಿಕ್ಕವೇ ಇರಲಿ ದೊಡ್ಡವಾಗಿರಲಿ-ಭಗವಂತನ ಭಾವನೆಯು ಬರುವಂತೆ ತಿಳಿಸುವದಕ್ಕಾಗಿ ಹೀಗೆ ಸ್ತುತಿಸಿದೆ. ಸ್ವಲ್ಪ ನೀರು ಇರುವ ಜಾಗದಲ್ಲಿ

ಯೂ ಜನರು, ಪ್ರಾಣಿಗಳು-ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಳ್ಳುವರು; ಮೀನು, ಕಪ್ಪೆ- ಮುಂತಾದ ಕ್ಷುದ್ರಜಲಚರಗಳು ಅಲ್ಲಿಯೂ ಇರುವವು. ದೊಡ್ಡದೊಡ್ಡ ನದಿ, ಸರೋವರಾದಿಗಳಲ್ಲಿ ಜನರು ಸ್ನಾನ, ತರ್ಪಣಾದಿಗಳನ್ನು ಮಾಡುವರು. ಅಡ್ಡಗಟ್ಟೆಗಳನ್ನು ಹಾಕಿ ಕಾಲುವೆಗಳನ್ನು ಹರಿಯಿಸಿ ಪೈರು ಬೆಳೆಯುವರು. ಇವೆಲ್ಲ ಭಗವಂತನ ಅನುಗ್ರಹದಿಂದಲೇ ಸಾಧ್ಯವಾಗಿದೆ. ಆದ್ದರಿಂದ ಜಲಾನಯನಪ್ರದೇಶಗಳನ್ನು ಕಂಡಾಗ ಪರಮೇಶ್ವರನನ್ನು ನೆನೆಯಿಸಿಕೊಳ್ಳಲು ಈ ವರ್ಣನೆಯು ಸಹಕಾರಿಯಾಗಿದೆ. ನದಿಯಲ್ಲಿ ಅಭಿಮಾನಿದೇವತೆಯಾಗಿರುವವನು ನಾದ್ಯನು. ಚಿಕ್ಕಕೆರೆಯನ್ನು ವೇಶಂತವೆನ್ನುವರು. ಅದರಲ್ಲಿರುವವನು ವೈಶಂತನು. ನದಿಗಳಲ್ಲಿ ನೇರಾಗಿ ಸಮುದ್ರಕ್ಕೇ ಸೇರುವವುಗಳನ್ನು ಮಹಾನದಿಗಳೆನ್ನುವರು. ಗಂಗಾ, ಯಮುನಾ, ಗೋದಾವರಿ, ಕಾವೇರಿ- ಮುಂತಾದ ಪ್ರಸಿದ್ಧನದಿಗಳು ಸ್ಥಾವರರೂಪದಿಂದ ನಮ್ಮ ಕಣ್ಣಿಗೆ ಗೋಚರವಾಗಿಯೇ ಇವೆ- ಭಾವನೆಯಿಂದ ನೋಡಿದರೆ ಗಂಗೆಯೇ ಮುಂತಾದ ದೇವಿಯರು ಸ್ನಾನ, ಪಾನ, ಸ್ಮರಣಾದಿಗಳಿಂದ ನಮ್ಮ ಅಂತಃಕರಣವನ್ನು ಶುದ್ಧಿಗೊಳಿಸಿ ಭಕ್ತಿಮುಕ್ತಿಗಳನ್ನು ನೀಡುವವರಾಗಿದ್ದಾರೆ. ಇಂಥ ಗಂಗೆಯನ್ನು ತಲೆಯಲ್ಲೇ ಧರಿಸಿರುವ ಪರಮೇಶ್ವರನ ವಿಭೂತಿಗಳೇ ಸಕಲನದೀದೇವತೆಗಳು- ಎಂದರ್ಥ. ಹೀಗೆ ನಾದ್ಯನಾಗಿರುವ ಭಗವಂತನ ಅನುಗ್ರಹವನ್ನು ಎಷ್ಟು ಸ್ತುತಿಸಿದರೂ ಕಡಿಮೆಯೇ- ಎನ್ನಬಹುದು.

**ನಮಃ ಕೂಪ್ಯಾಯ ಚಾವಟ್ಯಾಯ ಚ ನಮೋ ವರ್ಷ್ಯಾಯ ಚಾವರ್ಷ್ಯಾಯ ಚ ನಮೋ ಮೇಘ್ಯಾಯ ಚ ವಿದ್ಯುತ್ಯಾಯ ಚ ನಮ ಈಧ್ರಿಯಾಯ ಚಾತಪ್ಯಾಯ ಚ ॥**

"ಕೂಪ್ಯನೂ ಅವಟ್ಯನೂ ವರ್ಷ್ಯನೂ ಅವರ್ಷ್ಯನೂ ಮೇಘ್ಯನೂ ವಿದ್ಯುತ್ಯನೂ ಈಧ್ರಿಯನೂ ಆತಪ್ಯನೂ ಆದವನಿಗೆ ನಮಸ್ಕಾರ!"

ಈ ಭಾಗದಲ್ಲಿಯೂ ಜಲಸಂಬಂಧವಾದ ಪರಮೇಶ್ವರನ ವಿಭೂತಿಗಳನ್ನೇ ಹೊಗಳಿದೆ. ಇದರಿಂದ ತಿಳಿಯಬರುವದೇನೆಂದರೆ: ಜಗತ್ತಿನ ಪ್ರಾಣಿಗಳ ಪ್ರಾಣಧಾರಣೆಗೆ ನೆರವಾಗಿರುವ ನೀರೆಂಬುದನ್ನು ನಾವು ಎಷ್ಟು ಗೌರವದಿಂದಲೂ ಶ್ರದ್ಧೆಯಿಂದಲೂ ಕಾಣಬೇಕೆಂದು ಗೊತ್ತಾಗುತ್ತದೆ. ನೀರಿಲ್ಲದೆ ಸಸ್ಯಗಳಾಗಲಿ, ಪ್ರಾಣಿಗಳಾಗಲಿ ಬದುಕುವದು ಸಾಧ್ಯವೇ ಇಲ್ಲ. ಆದ್ದರಿಂದ ಜಲರೂಪಿಯಾದ

ರುದ್ರನ ನಾನಾ ಅವತಾರಗಳನ್ನು ಇಲ್ಲಿ ಸ್ತುತಿಸಲಾಗಿದೆ. ಕೂಪವೆಂದರೆ ಭಾವಿ. ಅದರಲ್ಲಿರುವವನು ಕೂಪ್ಯನು. ಭಾವಿ ತೆಗೆಯುವದು ನಮ್ಮ ಕೆಲಸ ವಾದರೂ ನೀರು ಇರುವದು ಈಶ್ವರನ ದಯೆ. ಅಲ್ಲವೆ ? ಆದ್ದರಿಂದ ಕೂಪ್ಯ ನೆಂದು ಸ್ತುತಿಸಿದೆ. ಅವಟವೆಂದರೆ ಗುಂಡಿ. ಅದರಲ್ಲಿಯೂ ನೀರಿನ ರೂಪ ದಿಂದಿರುವವನು ಅವಟ್ಯನು. ಹಾಗೆಯೇ ವರ್ಷವೆಂದರೆ ಮಳೆ. ಅವರ್ಷ ವೆಂದರೆ ಮಳೆಯ ಅಭಾವ. ಇವುಗಳನ್ನು ಪ್ರೇರಿಸುವವನು ಪರಮೇಶ್ವರನು-ಎಂದರ್ಥ. ಮಳೆಯು ಬಾರದಿರುವಾಗ ನಾವೇನೂ ಮಾಡಲಾರೆವು. ಆದರೆ 'ಅದು ಪರಮೇಶ್ವರನ ಅಧೀನ; ಆದ್ದರಿಂದ ಅವನನ್ನು ಸಂತೋಷಗೊಳಿಸಿ ಮಳೆಯನ್ನು ಬರಮಾಡಿಕೊಳ್ಳಬೇಕು'-ಎಂದು ನಂಬಿರುವವರು ಮಾತ್ರ ವಿರಳ. ಭಗವಂತನ ಕೃಪೆಯಿಲ್ಲದೆ ಮಳೆಯು ಬರಲಾರದು-ಎಂದು ತಿಳಿಯಬೇಕು. ಮೇಘದಲ್ಲಿ, ಮೋಡಗಳಲ್ಲಿ ಇರುವವನು ಮೇಘ್ಯನು. ವಿದ್ಯುತ್ತಿನಲ್ಲಿರುವವನು ವಿದ್ಯುತ್ಯನು. ಮಳೆಯು ಮೋಡಗಳಿಂದಾಗುವದು. ಮೋಡಗಳ ಘರ್ಷಣೆ ಯಿಂದಲೇ ಮಿಂಚುಗುಡುಗುಗಳಾಗುವವು. ಇವೆಲ್ಲ ಪ್ರಕೃತಿಯ ಧರ್ಮಗಳೇ ಆದರೂ ಒಂದೊಂದರಲ್ಲಿಯೂ ಪರಮೇಶ್ವರನ ವ್ಯಾಪ್ತಿಯಿದೆ. ಆತನೇ ಈ ಎಲ್ಲಾ ರೂಪಗಳಿಂದಲೂ ಜಗತ್ತನ್ನು ಕಾಪಾಡುತ್ತಿರುವನು. ಈಗಿನ ಕಾಲದಲ್ಲಿ ವಿದ್ಯುತ್ತಿನ ಉಪಯೋಗವು ಸಾರ್ವತ್ರಿಕವಾಗಿದೆ. ಅದರ ಉತ್ಪತ್ತಿಯನ್ನೇ ಅವಲಂಬಿಸಿ ದೇಶವು ಮುಂದೆ ಸಾಗುತ್ತಿದೆ. ಆದರೆ ಅದೇಕೊ, ಜನರಿಗೆ ಈ ಮೋಡ, ಮಳೆ, ವಿದ್ಯುತ್‌ಗಳು ಪರಮೇಶ್ವರನ ಮಹಿಮೆಯೆಂಬ ಭಾವನೆ ಬರು ತ್ತಿಲ್ಲ. ಕೊರತೆಯನ್ನು ಅನುಭವಿಸುತ್ತೇವಾದರೂ ಭಗವಂತನ ಚಿಂತನೆಯಿಂದ ಅದನ್ನು ಸರಿಪಡಿಸಿಕೊಳ್ಳಬೇಕೆಂಬುದು ನಮಗೆ ಇನ್ನೂ ಒಗ್ಗಿರುವದಿಲ್ಲ. ಇದಕ್ಕೆ ಅಹಂಕಾರವೇ ಕಾರಣ. ಆದರೂ ಭಗವಂತನು ದಯೆಯಿಂದ ಈವರೆಗೂ ಇವು ಗಳನ್ನು ನೀಡುತ್ತಲೇಬಂದಿದ್ದಾನೆ-ಎಂಬುದು ಆಶ್ಚರ್ಯಕರವಾದ ಸಂಗತಿ ಯಾಗಿದೆ. ಈಧ್ರವೆಂದರೆ ಶರತ್ಕಾಲದ ಬಿಳಿಯ ಮೋಡವು. ಆತಪವೆಂದರೆ ಬಿಸಿಲು. ಇವುಗಳಲ್ಲಿಯೂ ಇರುವ ಈಧ್ರಿಯನೂ ಆತಪ್ಯನೂ ಆದ ಭಗ ವಂತನಿಗೆ ನಮಸ್ಕಾರವು.

ನಮೋ ವಾತ್ಯಾಯ ಚ ರೇಷ್ಮಿಯಾಯ ಚ ನಮೋ ವಾಸ್ತ-
ವ್ಯಾಯ ಚ ವಾಸ್ತುಪಾಯ ಚ ॥

"ವಾತ್ಯನೂ ರೇಷ್ಮಿಯನೂ ವಾಸ್ತವ್ಯನೂ ವಾಸ್ತುಪನೂ ಆದವನಿಗೆ ನಮಸ್ಕಾರ!"

ವಾತ್ಯವೆಂದರೆ ಗಾಳಿಯಲ್ಲಿರುವವನು. ಗಾಳಿಯೆಂಬುದು ಪಂಚಮಹಾ ಭೂತಗಳಲ್ಲಿ ಒಂದು. ವಾಯುವೆಂಬ ದೇವತೆಯೂ ಆಗಿದೆ. ಈ ವಾಯುವು ತುಂಬ ಬಲಶಾಲಿಯೂ ಹೌದು. ರೇಷ್ಮವೆಂದರೆ ಪ್ರಲಯಕಾಲವು. ಎಲ್ಲಾ ಪ್ರಾಣಿಗಳೂ ನಾಶವಾಗುವ ಕಾಲವು ಪ್ರಲಯವೇ ಆಗಿದೆಯಷ್ಟೆ. ಅದರಲ್ಲಿ ಅಭಿಮಾನಿಯಾಗಿದ್ದುಕೊಂಡಿರುವವನು ರೇಷ್ಮಿಯನು. ಎಲ್ಲಾ ಭೂತಗಳ ನ್ನೂ ಸಂಹಾರಕಾಲದಲ್ಲಿ ನುಂಗಿಬಿಡುವ ಹರನೆಂಬ ದೇವನು ಪರಮೇಶ್ವರನು. ಪ್ರಲಯವು ಭಯಂಕರವಾದರೂ ಅವಶ್ಯವಾಗಿದೆ. ಸಂಹಾರಮೂರ್ತಿಯಾಗಿ ಪ್ರಲಯವನ್ನು ನಿರ್ವಹಿಸುತ್ತಿರುವ ರೇಷ್ಮಿಯನು ಭಗವಂತನೇ-ಎಂದರ್ಥ. ವಾಸ್ತವವೆಂದರೆ ಗೋವು ಮುಂತಾದ ಪ್ರಾಣಿಗಳು. ಪ್ರಾಣಿಗಳ ಉಪಯೋಗ ವೂ ಮನುಷ್ಯನಿಗೆ ಬಹಳವಾಗಿದೆ, ಉದಾಹರಣೆಗೆ ಗೋವುಗಳಿಲ್ಲದೆ ಬೇಸಾಯ ವಿಲ್ಲ; ಹಾಲುಮೊಸರುಗಳಿಲ್ಲ. ಆದ್ದರಿಂದ ಅವುಗಳ ರೂಪದಿಂದ ಇರುವ ಭಗವಂತನನ್ನು ನಾವು ಸ್ಮರಿಸಬೇಕು. ಉಳಿದ ಕುರಿ, ಆಡು- ಮುಂತಾದ ಪ್ರಾಣಿಗಳೂ ಮನುಷ್ಯನ ಜೀವನಕ್ಕೆ ಅವಶ್ಯವೇ ಆಗಿವೆ. ಅವೆಲ್ಲ ವಾಸ್ತವ್ಯ ನಾದ ಭಗವಂತನ ಸ್ವರೂಪವಾಗಿವೆ. ವಾಸ್ತುವೆಂದರೆ ಮನೆಯನ್ನು ನಿರ್ಮಿ ಸುವ ಜಾಗ. ಅದನ್ನು ಪಾಲನೆಮಾಡುವವನು ವಾಸ್ತುಪನು. ಮನೆಯು ಮನುಷ್ಯನ ಅಗತ್ಯಗಳಲ್ಲೊಂದಾಗಿದೆ. ಅದರಲ್ಲಿ ವಾಸಮಾಡುವವನು ರೋಗ ವಿಲ್ಲದೆ, ದುಃಖವಿಲ್ಲದೆ, ನಷ್ಟವಿಲ್ಲದೆ, ಅಭಿವೃದ್ಧಿಯನ್ನು ಹೊಂದುತ್ತಾ ಬಾಳ ಬೇಕು. ಇದಕ್ಕೆ ವಾಸ್ತುಪುರುಷನಾದ ಮಹಾದೇವನ ಅನುಗ್ರಹವು ಬೇಕು. ವಾಸ್ತುವಿದ್ಯೆಯೆಂಬುದು ದೊಡ್ಡ ಶಾಸ್ತ್ರವು. ಅದೂ ಭಗವಂತನ ವಿಭೂತಿಯೇ ಎಂದು ಇಲ್ಲಿ ತಿಳಿಸಿದೆ.

---

## ೨೪. ನಮಃ ಸೋಮಾಯ ಚ ರುದ್ರಾಯ ಚ

ರುದ್ರಾಧ್ಯಾಯದ ಎಂಟನೆಯ ಅನುವಾಕವನ್ನು ಈಗ ವಿಚಾರಮಾಡ ಬೇಕಾಗಿದೆ. ಹಿಂದಿನ ಅನುವಾಕದಲ್ಲಿ ಸರ್ವಾತ್ಮಕನೂ ಸರ್ವಾಂತರ್ಯಾಮಿ ಯೂ ಆದ ಭಗವಂತನನ್ನು ಸ್ತುತಿಸಲಾಯಿತು. ಈಗ ಎಲ್ಲಾ ಲೋಕದ

ಜನರಿಂದಲೂ ಉಪಾಸ್ಯನಾದವನೂ ಸಂಸಾರಬಂಧವನ್ನು ಕಳೆಯುವ ಬ್ರಹ್ಮ ವಿದ್ಯೆಯನ್ನು ಕೊಡುವವನೂ ಆದ ಭಗವಂತನನ್ನು ಸ್ತುತಿಸಲಾಗುವದು.

ನಮಃ ಸೋಮಾಯ ಚ ರುದ್ರಾಯ ಚ ನಮಸ್ತಾಮ್ರಾಯ ಚಾರುಣಾಯ ಚ ॥

“ ಸೋಮನಿಗೂ ರುದ್ರನಿಗೂ ತಾಮ್ರನಿಗೂ ಅರುಣನಿಗೂ ನಮಸ್ಕಾರ! ”

ಇಲ್ಲಿ ರುದ್ರನಾದ ಸೋಮನಿಗೆ ನಮಸ್ಕಾರ-ಎಂದು ಅನ್ವಯಮಾಡಿಕೊಳ್ಳಬೇಕು. ರುದ್ರನೆಂದರೆ ಸಂಸಾರದುಃಖ(ರೋದನ)ವನ್ನು ಹೋಗಲಾಡಿಸುವವನು ಎಂದಭಿಪ್ರಾಯ. ಭಗವಂತನನ್ನು ಅರಿತುಕೊಳ್ಳದೆ ದುಃಖವನ್ನು ದಾಟುವದು ಸಾಧ್ಯವೇ ಇಲ್ಲ. ಆದರೆ ಆ ದೇವನನ್ನು ಅರಿತುಕೊಳ್ಳುವದಾದರೂ ಹೇಗೆ ? ಎಂದರೆ ಉಮೆಯ ಕೃಪೆಯಿಂದ-ಎಂದಭಿಪ್ರಾಯ. ಉಮೆಯನ್ನು ನಿತ್ಯವೂ ಹೊಂದಿರುವವನೇ – ಉಮಾಸಹಿತನಾದವನೇ - ಸೋಮನು. ಉಮಾ-ಎಂಬುದು ಓಮ್ ಎಂಬ ಪ್ರಣವಮಂತ್ರದ ಭಾಗವು. ಅ-ಉ-ಮ-ಸೇರಿ ಓಂ ಆಗಿರುವದು. ಆದರಲ್ಲಿ ಉಮಾ ಎಂಬಿದೇ ದೇವಿಯ ತತ್ತ್ವವು. ಆದ್ದರಿಂದಲೇ ದೇವಿಯನ್ನು ‘ಓಂಕಾರರೂಪಿಣೀ’ ಎಂದು ಕರೆಯುತ್ತಾರೆ. ಈ ದೇವಿಯೇ ಬ್ರಹ್ಮವಿದ್ಯೋಪದೇಶಕಳು. ಈಕೆಯ ಪ್ರಸಾದದಿಂದಲೇ ಸೋಮನಾದ ಪರಮೇಶ್ವರನ ಜ್ಞಾನವು ನಮಗೆ ಪ್ರಾಪ್ತವಾಗುವದು. ಅಂತೂ ಬ್ರಹ್ಮವಿದ್ಯಾರೂಪಿಣಿಯಾದ ಉಮಾದೇವೀಸಹಿತನಾದ ಸೋಮನಿಗೆ ನಮಸ್ಕಾರ- ಎಂಬಿದು ಮಂತ್ರಾರ್ಥವು.

ಉಮಾದೇವಿಯು ಬ್ರಹ್ಮವಿದ್ಯಾಪ್ರದಾಯಿನಿಯು ಎಂಬ ಬಗ್ಗೆ ಉಪನಿಷತ್ತುಗಳಲ್ಲಿ ವಿವರಣೆಯಿದೆ. ಶ್ವೇತಾಶ್ವತರೋಪನಿಷತ್ತಿನಲ್ಲಿ ಪ್ರಾರಂಭದಲ್ಲಿ ಋಷಿಗಳೆಲ್ಲರೂ ಒಟ್ಟಾಗಿ ಸೇರಿ ಜಗತ್ಕಾರಣವು ಯಾವದು? ಬ್ರಹ್ಮವು ಯಾವದು? ನಾವು ಎಲ್ಲಿಂದ ಹುಟ್ಟಿದೆವು ? ಎಂದು ವಿಚಾರಮಾಡಿದರು. ಕೊನೆಗೆ ಅವರು ಧ್ಯಾನಯೋಗನಿಷ್ಠರಾದ ಕಾಲಕ್ಕೆ ಆ ಬ್ರಹ್ಮದ ಶಕ್ತಿಯನ್ನು ಕಂಡರು. ಆಕೆಯೇ ಉಮೆಯು. ಅವಳು ತತ್ತ್ವವನ್ನು ತಿಳಿಸಿದಳು-ಎಂದು ಉಪಾಖ್ಯಾನವಿದೆ. ಕೇನೋಪನಿಷತ್ತಿನಲ್ಲಿಯೂ ದೇವೇಂದ್ರನು ಯಕ್ಷನು ಯಾರೆಂದು ವಿಚಾರಿಸಹೊರಟಾಗ ಯಕ್ಷನು ಅಂತರ್ಧಾನನಾಗಲಾಗಿ ನಾಚಿಕೆಯಿಂದ ತಲೆ

ತಗ್ಗಿಸಿ ನಿಂತನು. ಆಗ ಆಕಾಶದಲ್ಲಿ ಹೈಮವತಿಯಾದ ಉಮೆಯು ತೋರಿಕೊಂಡು ಇಂದ್ರನ ಸಂಶಯವನ್ನು ಪರಿಹರಿಸಿ ಬ್ರಹ್ಮದ ತತ್ತ್ವವನ್ನು ತಿಳಿಸಿಕೊಟ್ಟಳು-ಎಂದಿದೆ. ಶೈವಪುರಾಣಗಳಲ್ಲಿಯೂ ಈ ವಿಚಾರದ ಕಥೆಗಳಿವೆ. ಆದ್ದರಿಂದ ಬ್ರಹ್ಮವಿದ್ಯಾರೂಪಿಣಿಯಾದ ಉಮೆಯು ಸರ್ವಜ್ಞನಾದ ಈಶ್ವರನೊಡನೆ ಯಾವಾಗಲೂ ಇದ್ದುಕೊಂಡಿರುವಳು. ಉಮಾಸಹಿತನಾದ ಪರಮೇಶ್ವರನೇ ಧ್ಯೇಯನು; ಅವನನ್ನೇ ಕಂಡುಕೊಳ್ಳುವ ಯೋಗಿಯು ಮೋಕ್ಷವನ್ನು ಪಡೆಯುವನು-ಎಂದಭಿಪ್ರಾಯ.

ಸೋಮನೆಂಬ ದೇವನು ಕೇವಲ ಮೋಕ್ಷಪ್ರದನಷ್ಟೇ ಅಲ್ಲ. ಸರ್ವಜ್ಞನೂ ಸರ್ವೇಶ್ವರನೂ ಸರ್ವಜಗತ್ಕಾರಣನೂ ಆಗಿದ್ದಾನೆ. ವಿವಿಧಚರಾಚರ ಜೀವರುಗಳಿಂದ ತುಂಬಿ ತುಳುಕಾಡುತ್ತಿರುವ, ಅನೇಕಕರ್ತೃಭೋಕ್ತೃಗಳಿಂದ ಕೂಡಿರುವ, ಮತ್ತು ಇಂಥ ದೇಶದಲ್ಲಿ ಇಂಥ ಕಾಲದಲ್ಲಿ ಮಾಡಿದ ಇಂಥ ಕರ್ಮಕ್ಕೆ ಇಂಥ ಫಲವೆಂಬ ನಿಯಮಬದ್ಧವಾಗಿರುವ, ಹಾಗೂ ಮನಸ್ಸಿನಿಂದ ಕೂಡ ಎಂಥ ಜಾಣನಾದವನೂ ಚಿಂತಿಸುವದಕ್ಕೂ ಆಗದಂಥ ರಚನಾಕೌಶಲಗಳಿಂದ ಕೂಡಿದ-ಈ ಪ್ರಪಂಚವೆಲ್ಲವೂ ಆ ಪರಾಶಕ್ತಿಯ ವಿಲಾಸವೇ. ಆಕೆಯೇ ಇದಕ್ಕೆಲ್ಲ ಮೂಲವು. ಅಂಥ ಪರಾಶಕ್ತಿಯನ್ನು ತನ್ನ ಶರೀರಾರ್ಧವಾಗಿ ಹೊಂದಿರುವ ಸೋಮನು ಎಂಥವನಿರಬೇಕು ? ಎಂಬುದನ್ನೀಗ ಊಹಿಸಬಹುದಾಗಿದೆ. ಹೀಗೆ ಆಕೆಯ ಬಲವಿಲ್ಲದೆ ಪರಮೇಶ್ವರನು ಏನೂ ಮಾಡಲಾರನು. ಆದರೂ ಆ ಶಕ್ತಿಯು ಪರಮೇಶ್ವರನ ಅಧೀನವೇ ಆಗಿರುವದು. ಶಕ್ತಿ, ಶಕ್ತಿಮಾನ್ ಎಂಬ ಭೇದವೂ ಇಲ್ಲಿ ಇರುವದಿಲ್ಲ. ಬೆಂಕಿಯ ಬಿಸಿ-ಎಂದಂತೆ ಶಿವ ಶಿವೆಯರು ಒಂದೇ ತತ್ತ್ವವಾಗಿರುತ್ತಾರೆ. ವ್ಯವಹಾರದೃಷ್ಟಿಯಿಂದ ಶಿವನ ಶಕ್ತಿ ಎಂದು ವಿಂಗಡಿಸಿ ಕರೆಯಲಾಗಿದೆ. ಏಕೆಂದರೆ ಕಾರಣಶಕ್ತಿರೂಪಳಾದ ಅಕೆಯು ಇಲ್ಲದಾಗ ಜಗತ್ತೆಂಬ ಕಾರ್ಯವೂ ಇರಲಾರದು. ಇದನ್ನೇ ಸೌಂದರ್ಯಲಹರೀ- ಎಂಬ ಸ್ತೋತ್ರದಲ್ಲಿ "ಶಕ್ತಿಯ ಬಲವಿಲ್ಲದೆ ಇದ್ದರೆ ಆತನು ಅಲುಗಾಡಲು ಕೂಡ ಸಮರ್ಥನಾಗಲಾರನು" ಎಂದು ತಿಳಿಸಿದೆ. ಇದು ನಿಜವೇ. ಪರಮಾರ್ಥಸ್ವರೂಪನಾದ ಶಿವನಿಗೆ ಚಲನವಿಲ್ಲ. ಅವನು ಅಚಲನು; ಸ್ಥಾಣುವು, ಧ್ರುವನು. ಅವನಲ್ಲಿ ವಿಕಾರವನ್ನು ಕಾಣಬೇಕಾದರೆ ಶಕ್ತಿಯನ್ನು ಆತನಿಗಿಂತ ಬೇರೆಯಾಗಿ ಕಲ್ಪಿಸಬೇಕು- ಎಂದರ್ಥ. ಹೀಗೆ ಉಮಾಸಹಿತನಾಗಿ ಸಕಲಜಗತ್ತನ್ನೂ ಉಂಟುಮಾಡಿ ಕಾಪಾಡುತ್ತಿರುವ

ಸೋಮನೊಬ್ಬನೇ ಮಹಾದೇವನಾಗಿರುತ್ತಾನೆ. ಅಂಬಿಕಾಪತಿ, ಉಮಾಪತಿ-ಎಂದು ತೈತ್ತಿರೀಯೋಪನಿಷತ್ತಿನಲ್ಲಿ ಎರಡುಬಾರಿ ಸ್ತುತಿಸಿರುವದು ಆದರಾತಿಶಯವನ್ನು ತೋರಿಸುತ್ತದೆ. ಉಮಾಮಹೇಶ್ವರ ಎಂಬ ಹೆಸರೂ ಸೋಮನಿಗೆ ಇದೆ. ಇಲ್ಲಿಯೂ ಉಮೆಗೇ ಪ್ರಾಥಮ್ಯವಿದೆ. ಉಮಾಶಂಕರ, ಗೌರೀಶಂಕರ-ಮುಂತಾದ ಹೆಸರುಗಳಂತೂ ಸುಪ್ರಸಿದ್ಧವಾದವುಗಳು. ಆದ್ದರಿಂದ ಸೃಷ್ಟಿ ಕಾಲದಲ್ಲಿ ಗೌರಿಗೇ ಪ್ರಾಥಮ್ಯವು. ಮೋಕ್ಷಕ್ಕೂ ಗೌರಿಯೇ ದ್ವಾರಳು. ಇದೇ ಸೋಮತತ್ತ್ವ ಎಂದು ತಿಳಿಯಬೇಕು.

ಈಗ ತಾಮ್ರ-ಅರುಣ ಎಂಬ ನಾಮಗಳನ್ನು ವಿಚಾರಮಾಡೋಣ. ಆಯಾಸವಿಲ್ಲದೆ ಪ್ರತ್ಯಕ್ಷನಾಗಿ ಎಲ್ಲರಿಗೂ ಕಂಡುಬರುತ್ತಿರುವ ಆದಿತ್ಯರೂಪಿಯಾದ ರುದ್ರನನ್ನು ಇಲ್ಲಿ ತಾಮ್ರನೆಂದೂ ಅರುಣನೆಂದೂ ಹೆಸರಿಸಲಾಗಿದೆ. ಹುಟ್ಟುವ ಕಾಲದಲ್ಲಿ ಬಹಳವಾದ ಕೆಂಪುಬಣ್ಣವುಳ್ಳವನು ತಾಮ್ರನು. ಅನಂತರ ಹೊತ್ತು ಏರಿದಂತೆಲ್ಲ ಕೆಂಪು ಕಡಿಮೆಯಾಗುತ್ತಾ ಸ್ವಲ್ಪವೇ ಕೆಂಪುಳ್ಳವನಾಗುವ ಸೂರ್ಯನೇ ಅರುಣನು. ಅನಂತರ ನೆತ್ತಿಗೇರಿರುವಾಗ ಬಭ್ರುವರ್ಣನು. ಇರಲಿ. ಹೀಗೆ ಅಷ್ಟಮೂರ್ತಿಯಾಗಿರುವ ಭಗವಂತನ ಒಂದು ವಿಭೂತಿಯಾಗಿರುವ ಸೂರ್ಯನೆಂಬ ಮೂರ್ತಿವಿಶೇಷವನ್ನು ಇಲ್ಲಿ ಸ್ತುತಿಸಲಾಗಿದೆ. ಲೋಕದಲ್ಲಿ ಉಪಾಸಕರು ಆಯಾ ದೇವತೆಯನ್ನು ಬಹಳವಾದ ಪ್ರಯತ್ನವಿಶೇಷಗಳಿಂದ ಧ್ಯಾನಿಸಿ ಒಲಿಸಿಕೊಂಡು ಅನಂತರ ದರ್ಶನವನ್ನು ಪಡೆಯುತ್ತಾರೆ. ಸೂರ್ಯನಾದರೋ ತಾನಾಗಿಯೇ ಎಲ್ಲಾ ಪ್ರಾಣಿಗಳಿಗೂ ಪ್ರತಿದಿನವೂ ಪ್ರಾತಃಕಾಲದಲ್ಲಿ ತನ್ನ ದರ್ಶನವನ್ನು ಬಿಟ್ಟಿಯಾಗಿ ಕೊಡುತ್ತಾನೆ. ಇದಕ್ಕಾಗಿ ನಾವೇನೂ ತಪಸ್ಸುಮಾಡಿರುವದಿಲ್ಲ. ದನಕಾಯುವವರಿಂದ ಹಿಡಿದು ರಾಷ್ಟ್ರಾಧ್ಯಕ್ಷರವರೆಗೂ ಎಲ್ಲರೂ ಸೂರ್ಯನನ್ನು ಬಲ್ಲರು. ಹೀಗೆ ಹೊರತೋರಿಕೊಳ್ಳುವ ಸೂರ್ಯನನ್ನು ನಮಗೆ ಇದಿರಾಗಿ ಮಾಡಿಕೊಳ್ಳಲು ಸಹ ಏನೂ ಕಷ್ಟವಿಲ್ಲ. ಏಕೆಂದರೆ ಪೂರ್ವಕ್ಕೆ ತಿರುಗಿರುವ ಪ್ರತಿಯೊಬ್ಬನಿಗೂ ಅವನು ತಾನೇ ಇದಿರಾಗಿರುತಾನೆ. 'ಸೂರ್ಯನು ನಮ್ಮ ಮನೆಯ ಬಾಗಿಲಿಗೆ ಇದಿರಾಗಿ ಹುಟ್ಟಿದ್ದಾನೆ. ನನಗೆ ಎದುರಿಗೇ ಕಂಡುಬರುತ್ತಾನೆ' ಎಂದು ಪ್ರತಿಯೊಬ್ಬನೂ ಹೇಳಿಕೊಳ್ಳಬಹುದು.

ಹೀಗೆ ತಾನಾಗಿಯೇ ಎದುರಿಗೆ ತೋರಿಕೊಂಡು ವರವನ್ನು ಕೊಡಲು ಸಿದ್ಧನಾಗಿರುವ ಸೂರ್ಯನಿಗೆ ನಾವು ಮಾಡಬೇಕಾದದ್ದಾದರೂ ಏನು ?

ಇವನು ಪರಮೇಶ್ವರನೇ- ಎಂದು ಭಾವಿಸಿದರೆ ಸಾಕು. ವೇದವು "ಉದಯಿಸುತ್ತಿರುವ ಹಾಗೂ ಅಸ್ತಮಾನನಾಗುತ್ತಿರುವ ಸೂರ್ಯನನ್ನು ಧ್ಯಾನಮಾಡುವ ಪಂಡಿತನು ಎಲ್ಲಾ ಶ್ರೇಯಃಪರಂಪರೆಗಳನ್ನೂ ಪಡೆದುಕೊಳ್ಳುವನು" ಎಂದು ತಿಳಿಸುತ್ತಿದೆ. ಆದ್ದರಿಂದ ಸಕಲಪುರುಷಾರ್ಥಪ್ರದನಾದ ಪರಮೇಶ್ವರನು ಆಯಾಸವಿಲ್ಲದೆ ಎಲ್ಲರಿಗೂ ಉಪಾಸ್ಯನಾಗಿರುತ್ತಾನೆ-ಎಂದಾಯಿತು. ತಾಮ್ರವರ್ಣನಾದ ಬೆಳಗಿನ ಸೂರ್ಯನ ಉಪಾಸನೆಯು ಕೆಲವರಿಗೆ ದಕ್ಕದೆ ಇರಬಹುದು. ಏಕೆಂದರೆ ಎಷ್ಟೋ ಜನರು ಸೂರ್ಯೋದಯವಾದರೂ ಸೋಮಾರಿತನದಿಂದ ಹಾಸಿಗೆಯಿಂದ ಎದ್ದೇ ಇರುವದಿಲ್ಲ. ಅಂಥವರಿಗೂ ಅನುಕೂಲವಾಗಲೆಂದು ಅರುಣವರ್ಣನಾಗಿ ತೋರುವ ಕಾಲಕ್ಕಾದರೂ ಧ್ಯಾನಮಾಡಬಹುದೆಂತ ತಿಳಿಸುವದಕ್ಕಾಗಿ 'ಅರುಣಾಯ ಚ' ಎಂದು ತಿಳಿಸಲಾಗಿದೆ. ಕೊನೆಗೆ ಅದೂ ಸಾಧ್ಯವಾಗದೆ ಇದ್ದರೆ ಬಭ್ರುವರ್ಣನಾದ ಸೂರ್ಯನನ್ನಾದರೂ ಉಪಾಸನೆಮಾಡಬೇಕು-ಎಂದು ಹಿಂದೆ ತಿಳಿಸಲಾಗಿದೆ. ಭಗವಂತನ ದಯೆಗೆ ಕೊನೆಯುಂಟೆ ? ಇಂಥ ಕರುಣಾಸಾಗರನಾದ ದೇವನು ಶಿವನಲ್ಲದೆ ಮತ್ತಾವನಾದಾನು ?

---

## ೨೫. ನಮಃ ಶಂಗಾಯ ಚ ಪಶುಪತಯೇ ಚ

ರುದ್ರಾಧ್ಯಾಯದ ಎಂಟನೆಯ ಅನುವಾಕದ ಮಂತ್ರಭಾಗದ ವಿಚಾರವನ್ನು ಆರಂಭಿಸಿ ನಾಲ್ಕು ನಾಮಗಳ ವಿವರವನ್ನು ಈಗಾಗಲೇ ತಿಳಿಸಲಾಗಿದೆ. ಮುಂದಿನ ಮಂತ್ರಭಾಗದ ವಿವರವನ್ನು ತಿಳಿಯೋಣ.

**ನಮಃ ಶಂಗಾಯ ಚ ಪಶುಪತಯೇ ಚ ನಮ ಉಗ್ರಾಯ ಚ ಭೀಮಾಯ ಚ ನಮೋ ಅಗ್ರೇವಧಾಯ ಚ ದೂರೇವಧಾಯ ಚ ನಮೋ ಹಂತ್ರೇ ಚ ಹನೀಯಸೇ ಚ ನಮೋ ವೃಕ್ಷೇಭ್ಯೋ ಹರಿಕೇಶೇಭ್ಯಃ ||**

"ಶಂಗನಿಗೂ ಪಶುಪತಿಗೂ ನಮಸ್ಕಾರವು. ಉಗ್ರನಿಗೂ ಭೀಮನಿಗೂ ಅಗ್ರೇವಧನಿಗೂ ದೂರೇವಧನಿಗೂ ಹಂತೃವಿಗೂ ಹನೀಯಸನಿಗೂ ಹರಿಕೇಶಗಳಾದ ವೃಕ್ಷಗಳಿಗೂ ನಮಸ್ಕಾರವು."

ಶಂಗನೆಂದರೆ ಸುಖಕ್ಕೆ ನಮ್ಮನ್ನು ಒಯ್ಯುವವನು-ಎಂದರ್ಥ. ಸುಖವು ಪರಮೇಶ್ವರನ ಅಧೀನವಾಗಿರುವದರಿಂದ ಆತನೇ ಎಲ್ಲರಿಗೂ ಅದನ್ನು ಕೊಡಬೇಕಾಗಿರುತ್ತದೆ. ಇದಕ್ಕೆ ಕಾರಣವೇನೆಂದರೆ: ಆತನೇ ಪಶುಪತಿಯೂ ಆಗಿದ್ದಾನೆ. ಪಶುಗಳಾಗಿರುವ ಜೀವರುಗಳನ್ನು ಕಾಪಾಡುವವನು ಅವನೇ ಆದ್ದರಿಂದ ಪಾಲಕನ ವಶದಲ್ಲಿಯೇ ಪಾಲನೀಯರಾದವರ ಸುಖಗಳು ಇರುವವು. ಹೇಗೆ ಲೋಕದಲ್ಲಿ ಮಕ್ಕಳ ಸುಖ, ರಕ್ಷಣೆ, ಪಾಲನೆಗಳು-ತಂದೆ ತಾಯಿಗಳ ಅಧೀನವೇ ಆಗಿರುವವೋ ಹಾಗೆಯೇ ಎಲ್ಲಾ ಪ್ರಾಣಿಗಳ ತಂದೆಯೂ ತಾಯಿಯೂ ಆದ ಪರಮೇಶ್ವರನ ಅಧೀನದಲ್ಲೇ ನಾವೆಲ್ಲ ಇದ್ದುಕೊಂಡಿರುವೆವು. ಹೀಗೆ ಭಗವಂತನು ಶಂಗನೂ ಪಶುಪತಿಯೂ ಆಗಿರುವನು.

ಉಗ್ರನೆಂಬುದೂ ಪರಮೇಶ್ವರನ ಹೆಸರೇ ಆಗಿದೆ. ಇಲ್ಲಿ ಉಗ್ರ ಎಂದರೆ ಶ್ರೇಷ್ಠನೆಂದರ್ಥ. ಉದ್ ಗಚ್ಛತೀತ್ಯುಗ್ರಃ—ಎಂಬೀ ವ್ಯುತ್ಪತ್ತಿಯಂತೆ ಸರ್ವರಲ್ಲಿ ಶ್ರೇಷ್ಠನೆಂದೂ ಅರ್ಥವಾಗುತ್ತದೆ. ಇಂಥ ಸರ್ವಶ್ರೇಷ್ಠತ್ವವು ಆತನು ಭೀಮನಾಗಿರುವದರಿಂದ ಪ್ರಾಪ್ತವಾಗಿದೆ. ಭೀಮನೆಂದರೆ ಭಯಂಕರನು. ಈತನ ಭಯಕ್ಕೆ ಒಳಪಟ್ಟೇ ವಾಯು ಮುಂತಾದ ದೇವತೆಗಳೆಲ್ಲರೂ ತಮ್ಮ ತಮ್ಮ ಕರ್ತವ್ಯಗಳಲ್ಲಿ ನಿರತರಾಗಿರುವರು. ಮಹಾನುಭಾವರಾದ ಇಂದ್ರಾಗ್ನ್ಯಾದಿಗಳೂ ಕೂಡ ಯಾವನ ಆಳ್ವಿಕೆಗೆ ಒಳಪಟ್ಟು ಕೆಲಸಮಾಡುತ್ತಿರುವರೋ ಅಂಥ ಮಹಾದೇವನು ಸರ್ವಶ್ರೇಷ್ಠನೆಂದು ಹೇಳಬೇಕಾದ್ದೇ ಇಲ್ಲ.

ಈಗ ಅಗ್ರೇವಧ-ದೂರೇವಧ-ಎಂಬ ನಾಮಗಳನ್ನು ವಿಚಾರ ಮಾಡೋಣ. ಶಿವಭಕ್ತನಾದವನು ಯುದ್ಧದಲ್ಲಿ ತೊಡಗಿರುವಾಗ ಭಕ್ತನ ಮೇಲಿನ ಅಪಾರವಾದ ಕರುಣೆಯಿಂದ ಭಗವಂತನು ತಾನೇ ಮುಂದಾಗಿ ನಿಂತು ಶತ್ರುಸಂಹಾರವನ್ನು ಮಾಡುತ್ತಾನೆ. ಹಾಗೆಯೇ ಯುದ್ಧವು ಆರಂಭವಾಗುವ ಮುಂಚೆಯೂ ತನ್ನ ಭಕ್ತನಿಗೆ ವಿರೋಧಿಯಾದ, ದೂರದಲ್ಲೇ ಇದ್ದುಕೊಂಡಿ ಶತ್ರುವನ್ನುಕೂಡ-ಆತನ ಬಲ, ತೇಜಸ್ಸುಗಳನ್ನು ಅಪಹರಿಸುವದರ ಮೂಲಕ ಶಿವನು ನಾಶಗೊಳಿಸುತ್ತಾನೆ. ಆದ್ದರಿಂದ ಧೂರೇವಧನು. ಅರ್ಜುನನು ಪರಶಿವನ ಭಕ್ತನಾಗಿದ್ದುದರಿಂದ ಆತನು ಶತ್ರುಸಂಹಾರವನ್ನು ಮಾಡುವಾಗಲೆಲ್ಲ ಪರಮೇಶ್ವರನೇ ಮುಂದಾಗಿ ನಿಂತು ಶತ್ರುಗಳನ್ನು ಕೊಲ್ಲುತ್ತಿದ್ದನಂತೆ. ಈ ವಿಚಾರವನ್ನು ಮಹಾಭಾರತದಲ್ಲಿ ಅರ್ಜುನನೇ ಹೇಳಿರುತ್ತಾನೆ: ಆತನ

ವಾಕ್ಯಗಳು ಹೀಗಿವೆ: "ಯುದ್ಧದಲ್ಲಿ ಬಾಣಗಳ ಸುರಿಮಳೆಯಿಂದ ನಾನು ಶತ್ರುಸೈನ್ಯವನ್ನು ಸದೆಬಡಿಯುವವೇಳೆಗೆ ನನ್ನ ಮುಂಭಾಗದಲ್ಲಿ ಒಬ್ಬ ಪುರುಷ ನನ್ನು ಕಂಡೆನು. ಆತನು ಬೆಂಕಿಯಂತೆ ತೇಜೋಮಯನಾಗಿದ್ದನು. ಕೈಯಲ್ಲಿ ಶೂಲವನ್ನು ಹಿಡಿದು ಆತನು ಯಾವ ದಿಕ್ಕಿಗೆ ಮುನ್ನುಗ್ಗುತ್ತಿದ್ದನೋ ಆ ದಿಕ್ಕಿನಲ್ಲಿ ನನ್ನ ಶತ್ರುಗಳು ಚದುರಿಹೋಗುತ್ತಿದ್ದರು. ಹೀಗೆ ಆತನ ತೇಜಸ್ಸಿನಿಂದ ಸುಡಲ್ಪಟ್ಟವರನ್ನು ನಾನು ಯುದ್ಧದಲ್ಲಿ ಹೊಡೆದು ನಾಶಪಡಿಸುತ್ತಿದ್ದೆನು"- ಎಂದಿರುತ್ತಾನೆ. ಈ ಮಾತುಗಳಿಂದ ಸಿದ್ಧವಾಗುವದೇನೆಂದರೆ; ಭಗವಂತನೇ ಸಂಹಾರಕನು. ಅವನೇ ಮೃತ್ಯುವು. ಅವನು ಯಾರನ್ನು ಸಾಯಿಸುತ್ತಾನೋ ಅಂಥವನನ್ನು ಮಾತ್ರವೇ ಅರ್ಜುನನು ಕೊಲ್ಲುತ್ತಿದ್ದನು-ಎಂದಾಯಿತು. ಗೀತೆಯಲ್ಲಿಯೂ ಭಗವಂತನು 'ಅಯ್ಯ, ಇವರೆಲ್ಲ ಈ ಮುಂಚೆಯೇ ನನ್ನಿಂದ ಕೊಲ್ಲಲ್ಪಟ್ಟಿರುವರು. ನೀನು ಸುಮ್ಮನೆ ನೆಪಕ್ಕೆ ಯುದ್ಧಮಾಡು. ಕೀರ್ತಿಯನ್ನು ಗಳಿಸಿಕೊ' ಎಂದೇ ತಿಳಿಸಿರುತ್ತಾನೆ. ಹೀಗೆ ಅಗ್ರೇವಧನೂ ದೂರೇವಧನೂ ಆಗಿರುವ ಪರಮೇಶ್ವರನಿಗೆ ನಮಸ್ಕಾರವೆಂತ ಇಲ್ಲಿ ತಿಳಿಸಿದೆ.

ಇನ್ನು ಪರಮೇಶ್ವರನನ್ನು ಅನಾದರಮಾಡುವದು ಹೆಚ್ಚಿನ ಅನರ್ಥಕ್ಕೇ ಕಾರಣವಾಗಿರುತ್ತದೆ-ಎಂಬುದನ್ನು ತಿಳಿಸುವದಕ್ಕಾಗಿ ಹಂತ್ರೇ-ಹನೀಯಸೇ ಚ ನಮಃ ಎಂದು ಸ್ತುತಿಸಿರುತ್ತದೆ. ಹೇಗೆಂದರೆ 'ನಾನೇ ಎಲ್ಲರಿಗಿಂತ ಹೆಚ್ಚಿನವನು; ನನಗಿಂತ ದೊಡ್ಡವರಿಲ್ಲ'-ಎಂದು ಯಾರು ಅಹಂಕಾರದಿಂದ ಕೊಬ್ಬಿರುವರೋ ಹಾಗೂ ಪರಮೇಶ್ವರನನ್ನು ಅನಾದರಮಾಡುವರೋ ಅಂಥವರನ್ನು ಹಿಂಸೆಮಾಡುತ್ತಾನಾದ್ದರಿಂದ ಹಂತೃ-ಕೊಲ್ಲುವವನು ಎಂದರ್ಥ. ಇದಕ್ಕೆ ಉದಾಹರಣೆ ರಾವಣನು. ಆತನು ಗರ್ವದಿಂದ ತನ್ನ ಭುಜಬಲಗಳ ಮೇಲೆ ವಿಶ್ವಾಸವಿಟ್ಟು ಪರಮೇಶ್ವರನ ವಾಸಸ್ಥಾನವಾದ ಕೈಲಾಸವನ್ನೂ ಎತ್ತಿಬಿಡಲು ತೋಳುಗಳನ್ನು ಚಾಚಿದಾಗ ಭಗವಂತನು ಅವನ ಜಂಭವನ್ನು ನಾಶಗೊಳಿಸುವದಕ್ಕಾಗಿ ತನ್ನ ಹೆಬ್ಬೆರಳನ್ನು ಒತ್ತಲಾಗಿ ಆ ಪರ್ವತದ ಕೆಳಗಡೆಗೆ ಅವನ ತೋಳುಗಳು ಸಿಕ್ಕಿಹಾಕಿಕೊಂಡವು. ಆಗ ರಾವಣನ ಪಾಡು ಹೇಳತೀರದಾಯಿತು. ಬಹಳವಾಗಿ ಪ್ರಯತ್ನಮಾಡಿದರೂ ತೋಳುಗಳನ್ನು ಬಿಡಿಸಿಕೊಳ್ಳಲಾಗದೆ ಕಿರುಚುತ್ತಾ, ಶರಣಾಗತನಾದಾಗ ಮಹಾದೇವನು ದಯೆಯಿಂದ ಅವನನ್ನು ಕಾಪಾಡಿದನು. ಇದನ್ನು ನೋಡಿದರೆ ಭಗವಂತನು ದುಷ್ಟರನ್ನು ಹೇಗೆ ಹಿಂಸಿಸಿ ದಾರಿಗೆ ತರುತ್ತಾನೆಂಬುದು ವ್ಯಕ್ತವಾಗುವದು. ಹಾಗೆ

ಯೇ ದುಷ್ಟರನ್ನು ಕೆಲವುವೇಳೆ ಬೇರೊಬ್ಬರ ಮೂಲಕ ಕೊಲ್ಲಿಸುವವನೂ ಪರಮೇಶ್ವರನೇ ಆದ್ದರಿಂದ 'ಹನೀಯಸನು' ಎಂದು ಕರೆದಿದೆ. ಇದಕ್ಕೆ ದಕ್ಷ ಪ್ರಜಾಪತಿಯೇ ಉದಾಹರಣೆ. ಇವನಾದರೋ ಯಜ್ಞಮಾಡಲಾರಂಭಿಸಿ ಪರಮೇಶ್ವರನ ಮೇಲಿನ ದ್ವೇಷದಿಂದ ಆತನನ್ನು ಆಹ್ವಾನಿಸದೆ ಇದ್ದನು. ಅದು ಸತೀದೇವಿಯ ಅಗ್ನಿಪ್ರವೇಶದಲ್ಲಿ ಪರ್ಯವಸಾನವಾಯಿತು. ಆಗ ಭಗವಂತನು ಕೋಪದಿಂದ ವೀರಭದ್ರನ ಮೂಲಕ ಯಜ್ಞವನ್ನು ನಾಶಮಾಡಿಸಿದನು. ದಕ್ಷನ ತಲೆಯನ್ನೇ ಕತ್ತರಿಸಲಾಯಿತು. ಯೂಪಸ್ತಂಭವನ್ನು ಕಿತ್ತು ದೇವತೆಗಳನ್ನು ಸದೆಬಡಿಯಲಾಯಿತು. ಋತ್ವಿಜರಿಗೆಲ್ಲ ಚಾಟಿಯ ಏಟುಗಳು ಬಿದ್ದವು; ಭೃಗುವಿನ ಗಡ್ಡವನ್ನು ಕಿತ್ತುಹಾಕಲಾಯಿತು; ಪೂಷನ ಹಲ್ಲುಗಳನ್ನು ಮುರಿದದ್ದಾಯಿತು; ಭಗ ಎಂಬುವನ ಕಣ್ಣುಗಳನ್ನೇ ಕೀಳಲಾಯಿತು; ಇತ್ಯಾದಿ. ಹೀಗೆ ಮಹತ್ತಾದ ಹಿಂಸೆಯು ಪರಮೇಶ್ವರನನ್ನು ತಿರಸ್ಕರಿಸಿದುದರ ಫಲವಾಗಿ ಉಂಟಾಯಿತು. ಆದ್ದರಿಂದ ಎಂದೆಂದಿಗೂ ಭಗವಂತನನ್ನು ಅಪಮಾನಗೊಳಿಸಬಾರದು- ಎಂದು ತಿಳಿಸಿರುತ್ತದೆ.

ಇನ್ನು ಹರಿಕೇಶಗಳಾದ ವೃಕ್ಷಗಳಿಗೆ ನಮಸ್ಕಾರ- ಎಂಬಿದನ್ನು ವಿಚಾರಿಸೋಣ. ಹಸಿರಾದ ಎಲೆಗಳಿಂದ ಕೂಡಿದ ವೃಕ್ಷಗಳ ರೂಪದಲ್ಲಿರುವವನೂ ಪರಮೇಶ್ವರನೇ ಎಂದರ್ಥ. ಈ ವಿಶೇಷಣವನ್ನು ಈಗಾಗಲೆ ಎರಡನೆಯ ಅನುವಾಕದಲ್ಲಿ ವಿಚಾರಮಾಡಲಾಗಿದೆ. ಅದರೂ ಇಲ್ಲಿ ಮತ್ತೊಮ್ಮೆ ಸ್ತುತಿಸಿರುವದರ ಸ್ವಾರಸ್ಯವೇನೆಂದರೆ: ಯಜ್ಞಯಾಗಾದಿಗಳಿಗೆ ಉಪಯೋಗಿಸುವ ಮುತ್ತುಗ, ಅರಳಿ ಮುಂತಾದ ವೃಕ್ಷಗಳು, ಪೂಜೆಗೆ ವಿನಿಯೋಗಿಸುವ ಬಿಲ್ವಪತ್ರೆ-ಇವುಗಳು ಪರಮೇಶ್ವರನ ವಿಭೂತಿರೂಪವಾದವುಗಳು-ಎಂಬುದನ್ನು ಸ್ಪಷ್ಟಗೊಳಿಸಿದೆ. ಹಾಗೆಯೇ ಸ್ವರ್ಗಲೋಕದಲ್ಲಿರುವ ಕಲ್ಪವೃಕ್ಷ, ಮಂದಾರ, ಪಾರಿಜಾತಾದಿತರುವಿಶೇಷಗಳೂ ಪರಮೇಶ್ವರನ ವಿಭೂತಿಗಳೇ ಎಂದು ಚಿಂತಿಸಬೇಕು. ಹರಿಕೇಶ ಎಂದದ್ದರಿಂದ ಮುತ್ತುಗವೇ ಮುಂತಾದವು ಕೇವಲ ಮರವಾಗಿ ಮಾತ್ರ ವಿಭೂತಿಗಳಲ್ಲ, ಎಲೆಗಳ ರೂಪದಿಂದಲೂ ಆತನ ಮಹಿಮೆಗಳೇ ಎಂದು ವಿವರಿಸಿದಂತಾಗಿದೆ. ಹೇಗೆಂದರೆ 'ಬ್ರಹ್ಮವೇ ಪರ್ಣವು' ಎಂದು ವೇದದಲ್ಲಿ ತಿಳಿಸಿದೆ. ಮುತ್ತುಗದ ಮಧ್ಯಮಪರ್ಣವನ್ನು ಸ್ರುಕ್, ಸ್ರುವಗಳೆಂಬ ಯಜ್ಞಪಾತ್ರೆಗಳಾಗಿ ಉಪಯೋಗಿಸುತ್ತಾರೆ. ಬಿಲ್ವಪತ್ರೆಯನ್ನು ಸಹಸ್ರ

ನಾವಾರ್ಚನೆಗಳಿಗೆ ಬಳಸುತ್ತಾರೆ. ಬಿಲ್ವಪತ್ರದ ಮೂರು ಎಲೆಗಳು ಸತ್ತ್ವ ರಜಸ್ತಮೋಗುಣಗಳೆಂಬ ಮೂರು ಗುಣಗಳನ್ನು ಸೂಚಿಸುತ್ತವೆಯಾದ್ದರಿಂದ ಅದನ್ನು ಪರಮೇಶ್ವರನಿಗೆ ಅರ್ಪಿಸುವದು ನಿಸ್ತ್ರೈಗುಣ್ಯವನ್ನು ಪಡೆಯಲು ಒಂದು ಸಾಧನವೆಂದೂ ಬಲ್ಲವರು ತಿಳಿಸುತ್ತಾರೆ. ಇಷ್ಟೇ ಅಲ್ಲದೆ ಶುಭ ಕಾರ್ಯಗಳಲ್ಲೆಲ್ಲ ಹಸಿಯ ಮಾವಿನಸೊಪ್ಪು, ಬಾಳೆಯ ಕಂಬಗಳನ್ನು ಕಟ್ಟುತ್ತಾರೆ. ಕುಂಭಗಳನ್ನು ಸ್ಥಾಪಿಸುವಾಗ ಮಾವಿನ ಎಲೆಗಳನ್ನು ಸಿಕ್ಕಿಸುತ್ತಾರೆ. ಇವೆಲ್ಲ ಹರಿಕೇಶನೆಂಬ ಪರಮೇಶ್ವರನ ನೆನಪನ್ನುಂಟುಮಾಡುವ ವಿಭೂತಿಗಳಾಗಿವೆ. ಹೀಗೆ ಸರ್ವವ್ಯಾಪಕನಾದ ಶಿವನ ಮಹಿಮೆಯನ್ನು ಎಷ್ಟು ಕೊಂಡಾಡಿದರೂ ಅಲ್ಪವೇ–ಎನಿಸುತ್ತದೆಯಲ್ಲವೆ? ಇಂಥ ಮಹಾದೇವನ ಉಳಿದ ಮಹಿಮೆಗಳನ್ನು ಮುಂದೆ ವಿಮರ್ಶಿಸೋಣ.

---

## ೨೬. ನಮಃ ಶಿವಾಯ ಚ ಶಿವತರಾಯ ಚ

ರುದ್ರಾಧ್ಯಾಯದ ಎಂಟನೆಯ ಅನುವಾಕದ ಕಡೆಯ ಭಾಗವನ್ನು ಈಗ ವಿಚಾರಮಾಡೋಣ.

**ನಮಸ್ತಾರಾಯ ನಮಃ ಶಂಭವೇ ಚ ಮಯೋಭವೇ ಚ ನಮಃ ಶಂಕರಾಯ ಚ ಮಯಸ್ಕರಾಯ ಚ ನಮಃ ಶಿವಾಯ ಚ ಶಿವತರಾಯ ಚ ||**

"ತಾರನಿಗೂ ಶಂಭುವಿಗೂ ಮಯೋಭವನಿಗೂ ಶಂಕರನಿಗೂ ಮಯಸ್ಕರನಿಗೂ ಶಿವನಿಗೂ ಶಿವತರನಿಗೂ ನಮಸ್ಕಾರ"

'ತಾರ'ನೆಂದು ಪರಮೇಶ್ವರನನ್ನು ಇಲ್ಲಿ ಕರೆದಿರುವದು ಆತನು ಮೋಕ್ಷಕ್ಕೆ ಕಾರಣನು–ಎಂಬ ಅಭಿಪ್ರಾಯದಿಂದ. ಜ್ಞಾನೋಪದೇಶವನ್ನು ಮಾಡುವವನು ಶಿವನೆಂದು ಪ್ರಸಿದ್ಧಿಯಿದೆ. ಇಂಥ ಶಿವನು ತಾನೇ ಮೋಕ್ಷಸ್ವರೂಪನೂ ಆಗಿರುತ್ತಾನೆ. ಆದ್ದರಿಂದ ಶಿವನಿಗೆ ಪ್ರತೀಕವಾಗಿಯೂ ಆಲಂಬನವಾಗಿಯೂ ಇರುವ ಓಂಕಾರವನ್ನು ಇಲ್ಲಿ ಶಿವನೆಂದೇ ಭಾವಿಸಿ 'ತಾರಾಯ' ಎಂದು ಸ್ತುತಿಸಲಾಗಿದೆ. ಪ್ರಣವವನ್ನು ತಾರವೆಂದು ಕರೆಯುವ ರೂಢಿಯಿದೆ. ಪ್ರಣವವೇ ಪರಾಪರ ಬ್ರಹ್ಮಪ್ರಾಪ್ತಿಗೆ ದ್ವಾರವೆಂದು ಉಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವದು.

ಭಗವಂತನು ಪ್ರಣವಸ್ವರೂಪನು-ಎಂದರೆ ಓಂಕಾರಪ್ರತಿಪಾದ್ಯನು-ಎಂದೇ ಅರ್ಥ. ಉಪನಿಷತ್ತಿನಲ್ಲಿ ಒಂದುಕಡೆ "ವೇದದ ಆದಿಯಲ್ಲಿಯೂ ಅಂತ್ಯದಲ್ಲಿ ಯೂ ಯಾವ ಸ್ವರವು (ಓಂಕಾರವು) ಪ್ರತಿಷ್ಠಿತವಾಗಿದೆಯೋ, ಪ್ರಕೃತಿಯಲ್ಲಿ ಒಂದಾಗುವ ಆ ಸ್ವರವನ್ನೂ ಮೀರಿದವನಾವನೋ ಅವನೇ ಮಹೇಶ್ವರನು" -ಎಂದು ವರ್ಣಿಸಿರುತ್ತದೆ. ಈ ಮಂತ್ರವನ್ನು ವೈದಿಕರು ಮಂತ್ರಪುಷ್ಪಕಾಲ ದಲ್ಲಿ ಹೇಳುವ ವಾಡಿಕೆಯಿದೆ. ಅಂತೂ ಓಂಕಾರಾಭಿನ್ನನಾದ ಪರಮೇಶ್ವರನು ತಾರನು. ಅಂಥವನಿಗೆ ನಮಸ್ಕಾರ-ಎಂದಭಿಪ್ರಾಯ.

ಶಂಭು, ಮಯೋಭು-ಎಂಬ ನಾಮಗಳನ್ನು ಈಗ ವಿಚಾರಿಸೋಣ. ಶಂ- ಎಂದರೆ ಐಹಿಕಸುಖವು. ಮಯ-ಎಂದರೆ ಪರಲೋಕದ ಸುಖವು. ಈ ಎರಡೂ ಯಾವನಿಂದ ಉಂಟಾಗುವವೋ ಅವನೇ ಶಂಭುವು; ಮಯೋಭುವು -ಎಂದರ್ಥ. ಮನುಷ್ಯನು ಸುಖಕ್ಕಾಗಿಯೇ ಎಲ್ಲಾ ಪ್ರಯತ್ನಗಳನ್ನೂ ಮಾಡುತ್ತಾನೆ. ಆದರೆ ಸುಖವನ್ನು ಕೊಡುವ, ಹಾಗೂ ಎಲ್ಲಿಂದ ಸುಖವು ಉತ್ಪತ್ತಿಯಾಗುವದೋ ಆ ದೇವನನ್ನು ಮಾತ್ರ ಮರೆತಿರುತ್ತಾನೆ. ಆದ್ದರಿಂದ ಮಾನವನ ಪ್ರಯತ್ನಗಳಿಗೆ ನಿಜವಾದ ಸುಖವು ದೊರೆಯದೆ ಇದೆ. ಇದನ್ನು ತಿಳಿದು ಬಲ್ಲವರು ಸುಖದ ಸಮುದ್ರನೇ ಆದ, ಆನಂದದ ಗನಿಯಾದ ಶಂಭು ವನ್ನು ತಮ್ಮ ನಿಜಸುಖಕ್ಕಾಗಿ ಭಜಿಸುವರು. 'ಈ ಪರಮಾನಂದರೂಪನಾದ ಶಿವನೆಂಬ ಸುಖಸಮುದ್ರದ ಒಂದೊಂದು ತುಣುಕನ್ನೇ ಆಶ್ರಯಿಸಿಕೊಂಡು ಎಲ್ಲಾ ಪ್ರಾಣಿಗಳೂ ಸುಖದ ಸವಿಯನ್ನು ಕಾಣುತ್ತಿರುವವು' ಎಂದು ಉಪ ನಿಷತ್ತುಗಳಲ್ಲಿ ವರ್ಣಿಸಿದೆ. ಹೀಗೆ ಐಹಿಕಾಮುಷ್ಮಿಕಸುಖಗಳನ್ನುಂಟು ಮಾಡುವ ಆನಂದರೂಪನೇ ಶಂಭುವು-ಮಯೋಭುವು ಆಗಿದ್ದಾನೆಂದು ಇಲ್ಲಿ ಸ್ತುತಿಸಿದೆ.

ಶಂಕರನೆಂಬ ನಾಮವನ್ನು ಈಗ ವಿಚಾರಮಾಡೋಣ. ಶಂ ಎಂದರೆ ಸುಖವನ್ನು, ಕರೋತಿ ಉಂಟುಮಾಡುವವನಾದ್ದರಿಂದ ಶಂಕರನು. ಶಂಭು ಎಂಬ ಹಿಂದಿನ ನಾಮದಿಂದಲೇ ಈ ಅರ್ಥವು ಬರುತ್ತದೆಯಾದರೂ ಇಲ್ಲಿ ಒಂದು ಅರ್ಥವಿಶೇಷದಿಂದ ಶಂಕರನೆಂದಿದ್ದಾರೆ. ಹೇಗೆಂದರೆ: ಶಂಭು ಎಂದು ಕರೆದಾಗ 'ಸುಖಕ್ಕೆ ನೇರಾಗಿ ಪರಮೇಶ್ವರನೇ ಕಾರಣನು. ಅವನಿಂದಲೇ ಎಲ್ಲರಿಗೂ ಸುಖವು ದೊರಕುತ್ತದೆ'- ಎಂದು ಹೇಳಲಾಗಿತ್ತು. ಇಲ್ಲಿ ಪರಂಪರೆಯಿಂದಲೂ

ಆ ಪರಮೇಶ್ವರನೇ ಸುಖಹೇತುವೆಂಬುದನ್ನು ತಿಳಿಸಿದಂತಾಗಿದೆ. ಉದಾಹರಣೆಗೆ: ಲೋಕದಲ್ಲಿ ಒಬ್ಬ ಮನುಷ್ಯನಿಗೆ ಮಕ್ಕಳಿಲ್ಲವೆಂದು ಇಟ್ಟುಕೊಳ್ಳೋಣ. ಆತನಿಗೆ ಮಕ್ಕಳಾಗಬೇಕೆಂಬ ಹಂಬಲಿಕೆಯೇನೋ ತುಂಬ ಇದೆಯೆಂದೂ ಭಾವಿಸೋಣ. ಆಗ ಅವನು ಗುರುಹಿರಿಯರ ಸೂಚನೆಯಂತೆ ಪರಮೇಶ್ವರನನ್ನು ಪೂಜಿಸುತ್ತಾನೆ, ಅದರ ಫಲವಾಗಿಯೋ ಎಂಬಂತೆ ಒಂದು ಗಂಡುಮಗುವಾಗುತ್ತದೆ-ಎಂದು ಇಟ್ಟುಕೊಳ್ಳೋಣ. ಈಗ ಆ ಯಜಮಾನನಿಗೆ ಎಷ್ಟು ಸಂತೋಷವೋ ಹೇಳತೀರದು. 'ಪರಮೇಶ್ವರನೇ ತನಗೆ ಮಗನನ್ನು ಕರುಣಿಸಿದ್ದಾನೆ' ಎಂದು ತಿಳಿದು ಪುತ್ರನ ಮುಖವನ್ನು ನೋಡಿ ಮುದ್ದಾಡಿ ಆನಂದಪಡುತ್ತಾನೆ. ಹೀಗೆಯೇ ಆಯಾ ಭಕ್ತರುಗಳು ಬಯಸಿದ ಇಷ್ಟಾರ್ಥಗಳನ್ನು ಪರಮೇಶ್ವರನು ಅನುಗ್ರಹಿಸಿದಾಗ ಭಾವುಕರಾದವರಿಗೆ ಪರಮೇಶ್ವರನ ನಿಜಸ್ವರೂಪವು ಕಾಣದೆಹೋದರೂ ಪರಂಪರೆಯಿಂದ ಆಯಾ ಇಷ್ಟವಸ್ತುಗಳ ರೂಪದಲ್ಲಿ ಲಭಿಸಿದಾಗ ಭಗವಂತನನ್ನು ಪಡೆದಷ್ಟೇ ಆನಂದವಾಗುತ್ತದೆಯಲ್ಲವೆ ? ಹೀಗೆ ಪರಮೇಶ್ವರನು ಆಯಾ ಜೀವರುಗಳಿಗೆ ಅವರವರು ಬಯಸಿದ ಸುಖಗಳನ್ನು ಕೊಡುವದರ ಮೂಲಕ ಶಂಕರನಾಗಿರುತ್ತಾನೆ-ಎಂದು ತಿಳಿಯಬೇಕು.

ಮಯಸ್ಕರನೆಂಬುದಕ್ಕೆ ಹಿಂದೆ ತಿಳಿಸಿದ ಮಯೋಭು ಎಂಬಿದರ ವಿವರಣೆಯನ್ನೇ ಅನುಸಂಧಾನಮಾಡಿಕೊಳ್ಳಬೇಕು. ಮೋಕ್ಷಸುಖವನ್ನು ಪರಂಪರೆಯಿಂದ ಉಂಟುಮಾಡುವವನು-ಎಂದರ್ಥ. ಮಾನವನಿಗೆ ತಾನುತಾನೇ ಜ್ಞಾನವನ್ನು ಸಂಪಾದಿಸಿಕೊಳ್ಳುವದು ಸಾಧ್ಯವಿಲ್ಲ. ಏಕೆಂದರೆ ಅಜ್ಞಾನವು ಸಹಜವಾಗಿಯೇ ಇದ್ದುಕೊಂಡುಬಿಟ್ಟಿರುತ್ತದೆ. ಅಜ್ಞಾನವನ್ನು ಕಳೆದುಕೊಂಡ ಮಹನೀಯರು ಈತನಿಗೆ ಉಪದೇಶಮಾಡಿ ಜ್ಞಾನವನ್ನು ತಿಳಿಸಿಕೊಡಬೇಕು. ಇವರೇ ಆಚಾರ್ಯರು. ಮತ್ತು ಆಚಾರ್ಯರ ಉಪದೇಶವಾದರೋ ವೇದಶಾಸ್ತ್ರಾನುಗುಣವಾಗಿರುತ್ತದೆ. ಹೀಗೆ ವೇದಗಳ ರೂಪದಿಂದಲೂ ಪರಮೇಶ್ವರನು ತಾನೇ ತೋರಿಕೊಂಡು ಲೋಕಾನುಗ್ರಹಕ್ಕಾಗಿ ಗುರುಮೂರ್ತಿಯಾಗಿ ಎಲ್ಲರಿಗೂ ದರ್ಶನವನ್ನು ಕೊಡುತ್ತಾನೆ. ಈ ಗುರುದೇವನೇ ಮಯಸ್ಕರನು. ಆಚಾರ್ಯನಿಗೂ ಶಿವನಿಗೂ ಭೇದವಿಲ್ಲವೆಂದೇ ತಿಳಿಯಬೇಕು.

ಈಗ 'ನಮಃ ಶಿವಾಯ' ಎಂಬಿದರ ಅರ್ಥವನ್ನು ವಿಚಾರಮಾಡೋಣ. ಇದು ಪಂಚಾಕ್ಷರೀಮಂತ್ರವೆಂದು ಸುಪ್ರಸಿದ್ಧವಾಗಿರುವದು. ವೇದೋಕ್ತವಾದ ಮಂತ್ರವಿದೆಂದು ತಿಳಿಯಬೇಕು. 'ವಶ ಕಾನ್ತೌ' ಎಂಬ ಧಾತುವಿನಿಂದ ಶಿವ ಎಂಬ ರೂಪವಾಗಿದೆ- ಎಂದು ಬಲ್ಲವರು ಹೇಳುತ್ತಾರೆ. ಕಾನ್ತಿ ಎಂದರೆ ಇಚ್ಛೆ. 'ಎಲ್ಲಾ ಪ್ರಾಣಿಗಳಿಗೂ ಒಳ್ಳೆಯದನ್ನು ಮಾಡಬೇಕೆಂಬ ಇಚ್ಛೆಯಿಂದ ದೇವನು ಶಿವನೆಂದೇ ಪ್ರಸಿದ್ಧನಾದನು' ಎಂದು ಮಹಾಭಾರತದಲ್ಲಿದೆ. ಇಚ್ಛೆ ಎಂದರೆ ಸಂಕಲ್ಪಮಾತ್ರದಿಂದಲೇ ಸಮಸ್ತಜಗತ್ತನ್ನೂ ಉಂಟುಮಾಡಿ, ಕಾಪಾಡಿ, ಲಯಮಾಡುವಂಥ ಸಾಮರ್ಥ್ಯವಿರುವಿಕೆ. ಈಶ್ವರನ ಇಚ್ಛೆಯಿಲ್ಲದೆ ಏನೊಂದೂ ನಡೆಯಲಾರದು-ಎಂಬ ಅಭಿಪ್ರಾಯವು ಇಲ್ಲಿದೆ. ಇದರಿಂದ ಪರಮೇಶ್ವರನು ಸರ್ವಜ್ಞನೂ ಸರ್ವಶಕ್ತನೂ ಸರ್ವಸ್ವತಂತ್ರನೂ ಸರ್ವೈಶ್ವರ್ಯಸಂಪನ್ನನೂ ಆಗಿರುತಾನೆಂದು ಸಿದ್ಧವಾಗುತ್ತದೆ. ಶಿವನೆಂಬ ನಾಮಧೇಯವು ಪರಮೇಶ್ವರನಿಗೆ ತುಂಬ ಹೊಂದಾಣಿಕೆಯಾದ ನಾಮವಾಗಿದೆ. ಏಕೆಂದರೆ ಆತನ ಹೆಸರು ಹೇಳಿದಮಾತ್ರದಿಂದಲೇ ಎಲ್ಲವೂ ಶುಭವಾಗುವದು. ಶಿವ, ಮಂಗಳ, ಭದ್ರ, ಕಲ್ಯಾಣ-ಎಂಬಿವು ಪರ್ಯಾಯವಾಚಕಗಳು.

ಪರಮೇಶ್ವರನಿಗೆ ಮತ್ತೊಂದು ಕಾರಣದಿಂದಲೂ ಈ ಹೆಸರು ಬಂದಿದೆ. ಶಿವನೆಂಬವನು ಎಲ್ಲರಿಗೂ ಮಂಗಳಕರನೇ ಆಗಿರಬೇಕಾದದ್ದು ಅವಶ್ಯವಷ್ಟೆ! ಈ ಭಗವಂತನಾದರೋ ದೇವತೆಗಳು, ರಾಕ್ಷಸರು, ಯಕ್ಷರು, ದಾನವರು, ಗಂಧರ್ವರು, ಕಿನ್ನರರು, ಮನುಷ್ಯರು, ನಾಗಗಳು-ಇತ್ಯಾದಿ ಹದಿನಾಲ್ಕು ಲೋಕನಿವಾಸಿವಾಸಿಗಳಾದ ಎಲ್ಲ ಜೀವರಿಗೂ ಸಮನಾಗಿರುತ್ತಾನೆ. ಶಿವನನ್ನು ಆರಾಧಿಸದೆ ಇರುವ ಜೀವರುಗಳೇ ಇಲ್ಲ-ಎನ್ನಬಹುದು. ಹೀಗೆ ದೇವತೆಗಳಿಗೂ ದೇವನಾದ ಈ ಮಹಾದೇವನು ಪರಮಮಂಗಳರೂಪನಾಗಿರುತ್ತಾನೆ. ಶೈವಪುರಾಣಗಳಲ್ಲಿ ಎಲ್ಲಾ ಲೋಕನಿವಾಸಿಗಳೂ ತಮ್ಮತಮ್ಮ ಲೋಕಗಳಲ್ಲಿ ಬೇರೆಬೇರೆಯ ನಾಮಧೇಯಗಳಿಂದ ಒಬ್ಬ ಶಿವನನ್ನೇ ಆರಾಧಿಸುತ್ತಾರೆಂದು ವಿಸ್ತಾರವಾಗಿ ವರ್ಣಿಸಿರುತ್ತದೆ. ಅವುಗಳ ಮೂಲಕ ಶಿವಮಹಿಮೆಯನ್ನು ನಾವು ಅನುಸಂಧಾನಮಾಡಬೇಕು. ಆಗಮಗಳಲ್ಲಿ ಶಿವಶಬ್ದವನ್ನು 'ಜೀವರತ್ನ'ವೆಂದು ಕರೆಯುವರು. ಇಂಥ ಮಂತ್ರಾಧಿದೈವನಾದ ಶಿವನು ಶಿವತರನೂ ಆಗಿರುತ್ತಾನೆ. ಶಿವತರನೆಂದರೆ ಇನ್ನೂ ಹೆಚ್ಚಿನ ಶಿವನು ಎಂದರ್ಥ.

ಶಿವತಮನೂ ಶಿವನೇ. ಒಟ್ಟಿನಲ್ಲಿ ಶಿವನಿಗಿಂತ ಉತ್ಕೃಷ್ಟರಾದವರು ಯಾರೂ ಇರುವದಿಲ್ಲ. ಶಿವನ ಶಕ್ತಿಯನ್ನು ಶಿವೆ–ಎನ್ನುತ್ತಾರೆ. ಆಕೆಯೂ ಸರ್ವಮಂಗಳೆಯು. ಹೀಗೆ ಶಿವಶಿವೆಯರೇ ಇಡಿಯ ಜಗತ್ತನ್ನೆಲ್ಲ ವ್ಯಾಪಿಸಿಕೊಂಡಿರುತ್ತಾರೆ. ಪರಮಾರ್ಥದೃಷ್ಟಿಯಿಂದ ನೋಡಿದಾಗ ಈ ತತ್ತ್ವವು ಶಾಂತವೂ ಶಿವವೂ ಅದ್ವೈತವೂ ಆಗಿರುತ್ತದೆ. ಇಂಥ ಶಿವನ ಮಹಿಮೆಯನ್ನು ಪೂರ್ಣವಾಗಿ ಬಲ್ಲವರಾರು ? ಶಿವನು ಸರ್ವರಿಗೂ ಶಿವವನ್ನುಂಟುಮಾಡಲೆಂದು ಪ್ರಾರ್ಥಿಸೋಣ.

---

## ೨೭. ನಮಸ್ತೀರ್ಥ್ಯಾಯ ಚ

ರುದ್ರಾಧ್ಯಾಯದ ಎಂಟನೆಯ ಅನುವಾಕದ ಕೊನೆಯಭಾಗದ ಮತ್ತೊಂದು ಪ್ರವಿಭಾಗವನ್ನು ಈಗ ವಿಚಾರಮಾಡಬೇಕಾಗಿದೆ.

**ನಮಸ್ತೀರ್ಥ್ಯಾಯ ಚ ಕೂಲ್ಯಾಯ ಚ ನಮಃ ಪಾರ್ಯಾಯ ಚಾವಾರ್ಯಾಯ ಚ ನಮಃ ಪ್ರತರಣಾಯ ಚೋತ್ತರಣಾಯ ಚ ನಮ ಆತಾರ್ಯಾಯ ಚಾಲಾದ್ಯಾಯ ಚ ನಮಃ ಶಷ್ಪ್ಯಾಯ ಚ ಫೇನ್ಯಾಯ ಚ ನಮಸ್ಸಿಕತ್ಯಾಯ ಚ ಪ್ರವಾಹ್ಯಾಯ ಚ ||**

"ತೀರ್ಥ್ಯನಿಗೂ ಕೂಲ್ಯನಿಗೂ ಪಾರ್ಯನಿಗೂ, ಅವಾರ್ಯನಿಗೂ, ಪ್ರತರಣನಿಗೂ ಉತ್ತರಣನಿಗೂ ಆತಾರ್ಯನಿಗೂ ಆಲಾದ್ಯನಿಗೂ ಶಷ್ಪ್ಯನಿಗೂ ಫೇನ್ಯನಿಗೂ ಸಿಕತ್ಯನಿಗೂ ಪ್ರವಾಹ್ಯನಿಗೂ ನಮಸ್ಕಾರವು."

ಈ ಭಾಗದಲ್ಲಿಯೂ ಭಗವಂತನು ಅಂತರ್ಯಾಮಿರೂಪದಿಂದ ಎಲ್ಲಾ ಸ್ಥಾವರಪ್ರಾಣಿಗಳಲ್ಲಿಯೂ ಅಡಗಿದ್ದಾನೆಂದು ತಿಳಿಸಿ ಆತನಿಗೆ ನಮಸ್ಕಾರವನ್ನು ಸಮರ್ಪಿಸಿದೆ. ಹೇಗೆಂದರೆ; ತೀರ್ಥ್ಯನು–ಎಂದರೆ ತೀರ್ಥದಲ್ಲಿರುವವನು ಎಂದರ್ಥ. ತೀರ್ಥಗಳಲ್ಲೆಲ್ಲ ಗಂಗೆಯು ಪ್ರಸಿದ್ಧವಾದುದು. ಎಲ್ಲಾ ನೀರುಗಳನ್ನೂ ಗಂಗೋದಕವೆಂದೇ ಗೌರವಕ್ಕಾಗಿ ಕರೆಯುತ್ತಾರೆ. ಸಮಸ್ತವಿಧವಾದ ಪಾಪಗಳ ಪರಿಹಾರಕ್ಕೂ ಗಂಗಾಸ್ನಾನವು ಉಪಾಯವಾಗಿದೆ. ಗಂಗೆಗೆ

ಇಂಥ ಪವಿತ್ರತೆಯು ಪರಮೇಶ್ವರನಿಂದಲೇ ಬಂದಿದೆ. ಆತನು ಗಂಗೆಯಂತೆ ಯೇ ಎಲ್ಲಾ ತೀರ್ಥಗಳಲ್ಲಿಯೂ ತನ್ನ ಮಹಿಮೆಯನ್ನು ಇಟ್ಟಿರುತ್ತಾನೆ. ಆದ್ದ ರಿಂದಲೇ ತೀರ್ಥ್ಯನು ಎಂದು ಹೊಗಳಿದೆ. ಹಾಗೆಯೇ ನದಿಗಳ ದಂಡೆಯನ್ನು ಕೂಲವೆನ್ನುವರು. ನದಿಗಳ ತೀರಗಳಲ್ಲಿಯೇ ದೇವಾಲಯಗಳು, ತಪೋವನ ಗಳು, ಕ್ಷೇತ್ರಗಳು, ಇದ್ದುಕೊಂಡಿರುವವು. ಅವುಗಳೂ ಭಗವಂತನಿಂದಲೇ ವ್ಯಾಪ್ತವಾಗಿರುವವಾದ್ದರಿಂದ ಕೂಲ್ಯನೆಂದು ಸ್ತುತಿಸಿದೆ. ಪಾರ ಎಂದರೆ ದಡ. ದಡದಲ್ಲಿರುವವನು ಪಾರ್ಯನು. ಆಚೆಯ ದಡದಲ್ಲಿರುವವನೂ ಅವನೇ ಎಂಬರ್ಥದಲ್ಲಿ ಆವಾರ್ಯನು-ಎಂದಿದೆ. ನೀರಿನ ಮಧ್ಯೆ ಇರುವಾಗ ನಮಗೆ ತುಂಬ ಹೆದರಿಕೆಯಿರುತ್ತದೆ. ದಡವನ್ನು ಕಂಡರೂ ಸಾಕು, ಧೈರ್ಯವುಂಟಾ ಗುವದು. ಇನ್ನು ದಡವನ್ನು ಸೇರಿಯೇಬಿಟ್ಟರೆ ಬಹಳ ಆನಂದವಾಗುವದು. ಅದು ಪರಮೇಶ್ವರನ ಕೃಪೆಯಿಂದಲೇ- ಎಂದು ಭಾವಿಸಿದಲ್ಲಿ ಮೇಲಿನ ಸ್ತುತಿಯು ಅರ್ಥವತ್ತಾಗುವದು.

ಈಗ ಪ್ರತರಣ, ಉತ್ತರಣ-ಎಂಬ ಸ್ತುತಿಗಳನ್ನು ನೋಡೋಣ. ಉತ್ತಮವಾದ ಹಾದಿಯಿಂದ ದಾಟುವದು ಪ್ರತರಣವೆಂದೂ ಅತ್ಯುತ್ತಮವಾದ ಮಾರ್ಗದಿಂದ ದಾಟುವದು ಉತ್ತರಣವೆಂದೂ ಪ್ರಸಿದ್ಧಿಯಿದೆ. ಮಾನವನು ಮೋಕ್ಷವನ್ನು ಪಡೆಯಲು ಮೊದಲು ಪಾಪಗಳನ್ನು ದಾಟಬೇಕಾಗಿದೆ. ಅನಂತರ ಮೋಕ್ಷಸಾಧನವಾದ ಜ್ಞಾನವೆಂಬ ಮಾರ್ಗದಲ್ಲಿ ನಡೆಯಬೇಕಾಗಿದೆ. ಪರಮೇಶ್ವರನ ಸ್ಮರಣ, ಕೀರ್ತನ, ಪೂಜಾದಿಗಳೇ ಪಾಪಪರಿಹಾರಕ್ಕೆ ಮಾರ್ಗ ಗಳು. ಈ ಸಾಧನಗಳ ರೂಪದಿಂದ ಭಗವಂತನು ಪ್ರತರಣನಾಗಿರುವನು. ಪಾಪಗಳಿಂದ ನಿರ್ಮುಕ್ತನಾಗಲು ಭಗವದಾರಾಧನೆಗಿಂತ ಮತ್ತೇನುತಾನೆ ಸಾಧನವಿದ್ದೀತು ? ಆದ್ದರಿಂದ ಭಗವಂತನ ಮಹಿಮಾರೂಪವಾದ ಆರಾಧ ನಾದಿಗಳೇ ಪ್ರತರಣಗಳು. ಹಾಗೆಯೇ ಅವಿದ್ಯೆಯನ್ನು ದಾಟಲು ಸಾಧನ ವಾಗಿರುವ ಜ್ಞಾನವೇ ಉತ್ತರಣವು. ಹೀಗೆ ಪರಮೇಶ್ವರನು ಪ್ರತರಣನೂ ಉತ್ತರಣನೂ ಆಗಿದ್ದುಕೊಂಡು ಸಾಧಕರನ್ನು ಅನುಗ್ರಹಿಸುತ್ತಿರುವನು- ಎಂದು ಭಾವ. ಆತಾರವೆಂದರೆ ಹಿಂದಿರುಗುವಿಕೆ. ಅದರ ರೂಪದಲ್ಲಿರುವವನು ಆತಾರ್ಯನು-ಎಂದರ್ಥ. ದೀರ್ಘಪ್ರವಾಸದಿಂದ ಸುಖವಾಗಿ ಹಿಂತಿರುಗಿ ಬಂದಾಗ, ಕಳೆದುಹೋದ ಪದಾರ್ಥವು ಹಿಂತಿರುಗಿ ಕೈಸೇರಿದಾಗ-ಇಂಥ ಸಂದರ್ಭಗಳಲ್ಲಿ ಆತಾರ್ಯನೆಂಬ ಭಗವಂತನನ್ನು ನೆನೆಸಿಕೊಳ್ಳಬಹುದು.

ಆಲಾದ್ಯನೆಂಬ ಸ್ತುತಿಯನ್ನು ಈಗ ವಿಚಾರಮಾಡೋಣ. 'ಅಲಂ ಯಥಾ ಭವತಿ ತಥಾ ಕರ್ಮಫಲಮತ್ತಿ ಇತ್ಯಲಾದಃ'-ಎಂಬ ವ್ಯುತ್ಪತ್ತಿಯಂತೆ ತಾನು ಮಾಡಿದ ಕರ್ಮಕ್ಕೆ ಪೂರ್ಣವಾದ ಫಲವನ್ನು ಪಡೆದು ಅನುಭವಿಸುವವನು ಅಲಾದನು ಎಂದರೆ ಜೀವನೆಂದರ್ಥ. ಈ ಜೀವನಿಗೂ ಅಂತರ್ಯಾಮಿಯಾಗಿದ್ದುಕೊಂಡಿರುವವನು-ಆಲಾದ್ಯನು. ಜೀವನು ಕರ್ಮವನ್ನು ಮಾಡುವಂತೆಯೂ ಫಲವನ್ನು ಅನುಭವಿಸುವಂತೆಯೂ ಪ್ರೇರಿಸುವವನು ಪರಮೇಶ್ವರನೇ ಆಗಿರುತ್ತಾನೆ. ಆದ್ದರಿಂದ ಭಗವಂತನನ್ನು ಆಲಾದ್ಯನು ಎಂದು ಸ್ತುತಿಸಲಾಗಿದೆ. ಶಷ್ಪವೆಂದರೆ ಎಳೆಯದಾದ ಗರಿಕೆಹುಲ್ಲು. ಅದರಲ್ಲಿರವವನು ಶಷ್ಪ್ಯನು. ಫೇನವೆಂದರೆ ನೊರೆಯು. ಅದರಲ್ಲಿರುವವನು ಫೇನ್ಯನು. ಸಿಕತಾ ಎಂದರೆ ಮರಳು. ಅದರಲ್ಲಿರುವವನು ಸಿಕತ್ಯನು. ಗೌರಿಪೂಜೆಯನ್ನು ಮಾಡುವಾಗ ನದಿಯ ಮರಳನ್ನು ಸಂಗ್ರಹಿಸಿ ಒಂದು ಪಾತ್ರೆಯಲ್ಲಿಟ್ಟು ಪೂಜಿಸುತ್ತಾರೆ. 'ಸಿಕತಾಗೌರಿ'ಯೆಂದೇ ಅದನ್ನು ಕರೆಯುತ್ತಾರೆ. ಇದು ಪರಮೇಶ್ವರನ ಸಾಂನಿಧ್ಯದ ಫಲವು. ನೀರಿನ ಹರಿಯುವಿಕೆಯೇ ಪ್ರವಾಹವು. ಅದರಲ್ಲಿರುವವನು ಪ್ರವಾಹ್ಯನು. ಹೀಗೆ ಪರಮೇಶ್ವರನು ನಾವೆಲ್ಲರೂ ಸುಲಭವಾಗಿ ನೋಡುತ್ತಿರುವ ಪದಾರ್ಥಗಳಲ್ಲೆಲ್ಲ ವ್ಯಾಪಿಯಾಗಿ ದ್ದುಕೊಂಡಿರುತ್ತಾನೆ- ಎಂದಭಿಪ್ರಾಯ.

ಈಗ ಒಂಭತ್ತಯ ಅನುವಾಕದ ಅಭಿಪ್ರಾಯವನ್ನು ಮನನ ಮಾಡೋಣ.

**ನಮ ಇರಿಣ್ಯಾಯ ಚ ಪ್ರಪಥ್ಯಾಯ ಚ ನಮಃ ಕಿಗ್ಂಶಿಲಾಯ ಚ ಕ್ಷಯಣಾಯ ಚ ನಮಃ ಕಪರ್ದಿನೇ ಚ ಪುಲಸ್ತಯೇ ಚ ನಮೋ ಗೋಷ್ಠ್ಯಾಯ ಚ ಗೃಹ್ಯಾಯ ಚ ನಮಸ್ತಲ್ಪ್ಯಾಯ ಚ ಗೇಹ್ಯಾಯ ಚ ನಮಃ ಕಾಟ್ಯಾಯ ಚ ಗಹ್ವರೇಷ್ಠಾಯ ಚ ನಮೋ ಹ್ರದಯ್ಯಾಯ ಚ ನಿವೇಷ್ಪ್ಯಾಯ ಚ ನಮಃ ಪಾಗ್ಂಸವ್ಯಾಯ ಚ ರಜಸ್ಯಾಯ ಚ ನಮಃ ಶುಷ್ಕ್ಯಾಯ ಚ ಹರಿತ್ಯಾಯ ಚ ನಮೋ ಲೋಪ್ಯಾಯ ಚೋಲಪ್ಯಾಯ ಚ ||**

"ಇರಿಣ್ಯನೂ ಪ್ರಪಥ್ಯನೂ ಕಿಂಶಿಲನೂ, ಕ್ಷಯಣನೂ, ಕಪರ್ದಿಯೂ, ಪುಲಸ್ತಿಯೂ, ಗೋಷ್ಠ್ಯನೂ, ಗೃಹ್ಯನೂ, ತಲ್ಪ್ಯನೂ, ಗೇಹ್ಯನೂ, ಕಾಟ್ಯ

ನೂ, ಗಹ್ವರೇಷ್ಠನೂ, ಹ್ರದಯ್ಯನೂ, ನಿವೇಷ್ಪ್ಯನೂ, ಪಾಂಸವ್ಯನೂ, ರಜಸ್ಯನೂ, ಶುಷ್ಕ್ಯನೂ, ಹರಿತ್ಯನೂ, ಲೋಪ್ಯನೂ, ಉಲಪ್ಯನೂ, ಆದವನಿಗೆ ನಮಸ್ಕಾರವು".

ಇರಿಣವೆಂದರೆ ಬಂಜರುಭೂಮಿಯು. ಅದರಲ್ಲಿ ನೆಲಸಿರುವವನು ಇರಿಣ್ಯನು. ಪ್ರಪಥವೆಂದರೆ ಕಣಿವೆಯ ಮಾರ್ಗವು. ಅದರಲ್ಲಿರುವವನು ಪ್ರಪಥ್ಯನು. ಚಿಕ್ಕಚಿಕ್ಕ ಕಲ್ಲುಗಳು ಕಿಂಶಿಲೆಗಳು. ವಾಸಕ್ಕೆ ಯೋಗ್ಯವಾದ ದೇಶವು ಕ್ಷಯಣವು. ಹೀಗೆ ಶಿಲೆಗಳ ರೂಪದಲ್ಲಿಯೂ ವಾಸಸ್ಥಾನಗಳ ರೂಪದಲ್ಲಿಯೂ ಇರುವವನು ಎಂದು ಸ್ತುತಿಸಿದೆ. ಕಪರ್ದವೆಂಬ ಹೆಸರಿನ ಜಟಾಜೂಟವುಳ್ಳವನು ಕಪರ್ದಿಯು. ಪುರಃ ಎಂದರೆ ಮುಂಭಾಗದಲ್ಲಿ ತಿಷ್ಠತಿ–ಇದ್ದುಕೊಂಡಿರುವವನು ಪುರಸ್ತಿಯು. ಪುರಸ್ತಿಯನ್ನೇ ರ-ಲಗಳ ಅಭೇದದಿಂದ ಪುಲಸ್ತಿಯೆಂದು ಕರೆಯಲಾಗಿದೆ. ಗೋವುಗಳನ್ನು ಕಟ್ಟುವ ಕೊಟ್ಟಿಗೆಯು ಗೋಷ್ಠವು. ಅದರಲ್ಲಿಯೂ ಇರುವವನಾದ್ದರಿಂದ ಗೋಷ್ಠ್ಯನೆಂದು ಕರೆದಿದೆ. ಗೃಹವೆಂದರೆ ಮನೆ. ಅಲ್ಲಿರುವವನು ಗೃಹ್ಯನು. ಬ್ರಾಹ್ಮಣರು-ಅದರಲ್ಲಿಯೂ ಗೃಹಸ್ಥರು ತಮ್ಮ ಮನೆಯಲ್ಲಿ ಅಗ್ನಿಯನ್ನು ಇಟ್ಟಿರಬೇಕೆಂತ ಶಾಸ್ತ್ರವಿಧಿಯಿದೆ. ಗೃಹದಲ್ಲಿರುವ ಅಗ್ನಿಯನ್ನು ಗೃಹ್ಯನೆಂದೂ ಗೃಹಪತಿಯೆಂದೂ ಕರೆಯುತ್ತಾರೆ. ಅಂಥ ಅಗ್ನಿರೂಪದಲ್ಲಿರುವವನು–ಎಂದೂ ಅರ್ಥಮಾಡಬಹುದು. ತಲ್ಪವೆಂದರೆ ಹಾಸಿಗೆ. ಅದರಲ್ಲಿರುವವನು ತಲ್ಪ್ಯನು. ಗೇಹವೆಂದರೆ ಉಪ್ಪರಿಗೆ. ಅದರಲ್ಲಿರುವವನು ಗೇಹ್ಯನು. ಕಾಟವೆಂದರೆ ಬಹಳ ಶ್ರಮದಿಂದ ತಿರುಗಬೇಕಾದ ಭೂಮಿ–ಎಂದರೆ ಕಾಡು. ಅದರಲ್ಲಿಯೂ ಇರುವವನು ಕಾಟ್ಯನು. ಗಹ್ವರವೆಂದರೆ ಗಹನವಾದ, ವಿಷಮವಾದ ಬೆಟ್ಟದ ತಪ್ಪಲು, ಗುಹೆ–ಮುಂತಾದವು. ಅವುಗಳಲ್ಲಿರುವವನು ಗಹ್ವರೇಷ್ಠನು. ಅನೇಕ ಅನರ್ಥರೂಪವಾದ, ಸಂಕಟಗಳಿಂದ ಕೂಡಿದ ಸಂಸಾರದಲ್ಲಿಯೂ ಇದ್ದುಕೊಂಡಿರುವವನು–ಎಂದೂ ಅಭಿಪ್ರಾಯ. ಪರಮೇಶ್ವರನೇ ಸಂಸಾರಿಯಾಗಿಯೂ ತೋರಿಕೊಳ್ಳುವನು–ಎಂದು ಉಪನಿಷತ್ತಿನಲ್ಲಿದೆ. ಅದನ್ನು ಇಲ್ಲಿ ಅನುಸಂಧಾನಮಾಡಿಕೊಳ್ಳಬೇಕು.

ಹ್ರದಯ್ಯನು ಎಂದರೆ ಅಗಾಧವಾದ ಆಳವಾದ ನೀರಿನಲ್ಲಿರುವವನು. ನಿವೇಷ್ಪವೆಂದರೆ ಮಂಜಿನ ನೀರು. ಅದರಲ್ಲಿರುವವನಾದ್ದರಿಂದ ನಿವೇಷ್ಪ್ಯನು. ಪಾಂಸುಗಳೆಂದರೆ ಪರಮಾಣುಗಳು. ಅವುಗಳಲ್ಲಿರುವವನು ಪಾಂಸವ್ಯನು.

ಪರಮಾಣುಶಕ್ತಿ (Atomic Energy)ಯ ರೂಪದಿಂದ ಇರುವವನು ಪರಮೇಶ್ವರನೇ. ರಜಸ್ಸೆಂದರೆ ಧೂಳು. ಅದರಲ್ಲಿರುವವನು ರಜಸ್ಯನು. ಶುಷ್ಕವೆಂದರೆ ಒಣಗಿದ ಪದಾರ್ಥವು. ಒಣಗಿದ ಕಟ್ಟಿಗೆ ಮುಂತಾದವುಗಳಲ್ಲಿರುವವನು ಶುಷ್ಕ್ಯನು. ಹರಿತವೆಂದರೆ ಹಸಿರಾದದ್ದು ಅಥವಾ ಹಸಿಯಾಗಿರುವದು. ಅದರಲ್ಲಿರುವವನು ಹರಿತ್ಯನು. ಲೋಪ ಎಂದರೆ ಇಲ್ಲವಾಗುವದು. ಒಣಗಿದ ಹಾಗೂ ಕಠಿನವಾದ ಭೂಮಿಯಲ್ಲಿ ಹುಲ್ಲು ಮುಂತಾದದ್ದು ಕೂಡ ಬೆಳೆಯಲಾರದು. ಹೀಗಿರುವ ಭೂಮಿಯಲ್ಲಿರುವವನು ಲೋಪ್ಯನು. ಉಲಪವೆಂದರೆ ಹಗುರವಾದ ಹುಲ್ಲು, ಬೀಜ-ಮುಂತಾದವುಗಳು. ಅವುಗಳಲ್ಲಿಯೂ ಇರುವವನಾದ್ದರಿಂದ ಉಲಪ್ಯನು- ಎಂದು ಪರಮೇಶ್ವರನನ್ನು ಸ್ತುತಿಸಿದೆ. ಹೀಗೆ ಸರ್ವಾಂತರ್ಯಾಮಿಯಾಗಿರುವ ಭಗವಂತನು ಉಚ್ಚನೀಚಗಳೆಂದೂ, ಪೂಜ್ಯಾಪೂಜ್ಯಗಳೆಂದೂ, ತುಚ್ಛ, ಅಮೂಲ್ಯಗಳೆಂದೂ ನಾವು ಭೇದದಿಂದ ತಿಳಿದಿರುವ ಎಲ್ಲಾ ಪದಾರ್ಥಗಳಲ್ಲಿಯೂ ಸಮನಾಗಿದ್ದುಕೊಂಡು ಸ್ವತಃ ಯಾವ ಉಪಾಧಿಯ ಗುಣದೋಷಗಳ ಸೋಂಕೂ ಇಲ್ಲದ ನಿತ್ಯಶುದ್ಧಬುದ್ಧಮುಕ್ತಸ್ವರೂಪನಾಗಿರುತ್ತಾನೆ-ಎಂದು ಅಧ್ಯಾರೋಪಾಪವಾದನ್ಯಾಯದಿಂದ ಇಲ್ಲಿ ತಿಳಿಸಿದೆ.

---

## ೨೮. ನಮ ಊರ್ವ್ಯಾಯ ಚ

ರುದ್ರಾಧ್ಯಾಯದ ಒಂಬತ್ತನೆಯ ಅನುವಾಕದ ಕೊನೆಯ ಭಾಗವನ್ನು ಈಗ ವಿಚಾರಮಾಡೋಣ.

ನಮ ಊರ್ವ್ಯಾಯ ಚ ಸೂರ್ಮ್ಯಾಯ ಚ ನಮಃ ಪರ್ಣ್ಯಾಯ ಚ ಪರ್ಣಶದ್ಯಾಯ ಚ ನಮೋಽಪಗುರಮಾಣಾಯ ಚಾಭಿಘ್ನತೇ ಚ ನಮ ಆಖ್ಖಿದತೇ ಚ ಪ್ರಖ್ಖಿದತೇ ಚ ನಮೋ ವಃ ಕಿರಿಕೇಭ್ಯೋ ದೇವಾನಾಗ್ಂ ಹೃದಯೇಭ್ಯೋ ನಮೋ ವಿಕ್ಷೀಣಕೇಭ್ಯೋ ನಮೋ ವಿಚಿನ್ವತ್ಕೇಭ್ಯೋ ನಮ ಆನಿರ್ಹತೇಭ್ಯೋ ನಮ ಆಮೀವತ್ಕೇಭ್ಯಃ ॥

"ಉರ್ವ್ಯನಿಗೂ ಸೂರ್ವ್ಯನಿಗೂ ಪರ್ಣ್ಯನಿಗೂ ಪರ್ಣಶದ್ಯನಿಗೂ ಅಪಗುರಮಾಣನಿಗೂ ಅಭಿಘ್ನನಿಗೂ ಅಖ್ಖಿದನಿಗೂ ಪ್ರಖ್ಖಿದನಿಗೂ ನಮಸ್ಕಾರ! ದೇವತೆಗಳ ಹೃದಯದಲ್ಲಿರುವ ಕಿರಿಕರಿಗೂ ವಿಕ್ಷೀಣಕರಿಗೂ ವಿಚಿನ್ವತ್ಕರಿಗೂ ಆನಿರ್ಹತರಿಗೂ ಆಮೀವತ್ಕರಿಗೂ ನಮಸ್ಕಾರ!"

ಊರ್ವ್ಯನೆಂದರೆ ಉರ್ವಿಯಲ್ಲಿರುವವನು. ಉರ್ವಿ ಎಂದರೆ ಭೂಮಿಯು. ಊರ್ವ್ಯನೆಂಬಲ್ಲಿ ದೀರ್ಘವು ವೈದಿಕಪ್ರಯೋಗನಿಮಿತ್ತವಾಗಿ ಬಂದಿದೆ. ಇರಲಿ. ಈಗ ಭೂಮಿಯಲ್ಲಿರುವವನೆಂದರೆ: ಭೂಮಿಯಮೇಲೆ ವಾಸವಾಗಿರುವ ಎಲ್ಲಾ ಪ್ರಾಣಿಗಳನ್ನೂ ಹಾಗೂ ಭೂಗರ್ಭದೊಳಗಿರಬಹುದಾವ ಮಣ್ಣಿನೊಳಗೇ ಬೆರೆತು ಜೀವಿಸುವ ಕೆಲವು ಪ್ರಾಣಿಗಳನ್ನೂ ತೆಗೆದುಕೊಳ್ಳಬಹುದು. ಇನ್ನೂ ಒಳಹೊಕ್ಕು ನೋಡಿದರೆ ಭೂಮಿಗೆ ಅಂತರ್ಯಾಮಿಯಾಗಿದ್ದುಕೊಂಡು ನಿಯಮನಮಾಡುತ್ತಿರುವ ಪರಬ್ರಹ್ಮವನ್ನೇ ಊರ್ವ್ಯನೆಂದೂ ತಿಳಿಯಬಹುದಾಗಿದೆ. ಹೀಗೆ ರುದ್ರನು ಊರ್ವ್ಯನಾಗಿ ಎಲ್ಲ ಭೂಮಂಡಲವನ್ನೂ ವ್ಯಾಪಿಸಿಕೊಂಡಿರುವನು. ಸೂರ್ವ್ಯನೆಂದರೆ ಶೋಭನವಾದ ಊರ್ಮಿಗಳುಳ್ಳವನು. ಎಂದರೆ ತೆರೆಗಳು ಉಳ್ಳವನು ಎಂದರ್ಥ. ಕೆರೆ, ಸರೋವರ, ನದಿಗಳಲ್ಲಿ ನೀವು ಚಿಕ್ಕಚಿಕ್ಕ ತೆರೆಗಳನ್ನೂ ಸಮುದ್ರದಲ್ಲಿ ಹೆದ್ದೆರೆಗಳನ್ನೂ ನೋಡಿದ್ದೀರಷ್ಟೆ. ಆ ತೆರೆಗಳು ಎಷ್ಟು ಸುಂದರವಾಗಿರುತ್ತವೆ ? ಅವುಗಳ ಚಲನವಲನಗಳನ್ನೇ ನೋಡುತ್ತಾ ಕುಳಿತಿದ್ದರೆ ನಮಗೆ ಕಾಲವನ್ನು ಕಳೆದುದೇ ತಿಳಿಯುವದಿಲ್ಲ. ಇದೇಕೆ ? ಎಂದರೆ ಭಗವಂತನು ಅವುಗಳ ರೂಪದಿಂದ ನಮ್ಮನ್ನು ಸಂತೋಷಗೊಳಿಸುತ್ತಿರುವನು. ಹೀಗೆ ಸೂರ್ವ್ಯನಾಗಿ ಭಗವಂತನು ಭಾವುಕರಿಗೆ ದರ್ಶನವನ್ನು ಕೊಡುತ್ತಿರುವನು. ಪರ್ಣ್ಯನೆಂದರೆ ಪರ್ಣಗಳಲ್ಲಿರುವವನು. ಪರ್ಣ ಎಂದರೆ ಎಲೆಗಳು. ನಾವು ಯಾವುದಾದರೂ ವ್ರತವನ್ನು ಆಚರಿಸುವಾಗ 'ಪತ್ರಪೂಜೆ'ಯೆಂತ ಮಾಡುವದು ನಿಮಗೆ ಗೊತ್ತಿರಬಹುದು. ನಾನಾ ಜಾತಿಯ ಎಲೆಗಳನ್ನು ಭಗವಂತನಿಗೆ ಬೇರೆಬೇರೆಯ ನಾಮಗಳನ್ನು ಹೇಳಿ ಸಮರ್ಪಿಸುವೆವು. ಶಿವನಿಗೆ ಬಿಲ್ವಪತ್ರಾರ್ಪಣವೂ ವಿಷ್ಣುವಿಗೆ ತುಳಸೀಪತ್ರಾರ್ಪಣವೂ ಗಣೇಶನಿಗೆ ದೂರ್ವಾಪತ್ರದ ಪೂಜೆಯೂ ಸುಪ್ರಸಿದ್ಧವಾಗಿರುವವು. ಆದ್ದರಿಂದ ಪರ್ಣಗಳಲ್ಲೆಲ್ಲ ನೆಲಸಿರುವ ಶಿವನು ಪರ್ಣ್ಯನೆಂದು ಪ್ರಸಿದ್ಧನಾಗಿರುವದು ಯುಕ್ತವೇ ಆಗಿದೆ. ಹಾಗೆಯೇ ಪರ್ಣಶದ್ಯನೆಂದೂ ಇಲ್ಲಿ ಭಗವಂತ

ನು ಸ್ತುತಿಸಲ್ಪಟ್ಟಿರುವನು. ಒಣಗಿದ ಎಲೆಗಳ ಗುಂಪನ್ನು ಪರ್ಣಶದಗಳೆಂದು ಕರೆಯುವರು. ಋಷಿಗಳು ತಾವು ಹಿಂದೆ ತಪಸ್ಸುಮಾಡುತ್ತಿದ್ದ ಕಾಲಕ್ಕೆ ಒಣಗಿದ ಎಲೆಗಳನ್ನೇ ಆಹಾರಕ್ಕೆ ಉಪಯೋಗಿಸುತ್ತಿದ್ದರಂತೆ. ಪಾರ್ವತಿಯು ತಾನು ತಪಸ್ಸುಮಾಡುವ ಕಾಲಕ್ಕೆ ಎಲೆಗಳ ಆಹಾರವನ್ನೂ ತ್ಯಾಗಮಾಡಿದ್ದ ಳಾದ್ದರಿಂದ 'ಅಪರ್ಣೆ'ಯೆಂದೇ ಆಕೆಗೆ ಹೆಸರಾಯಿತು. ಇರಲಿ. ಹೀಗೆ ಒಣಗಿದ ಎಲೆಗಳ ಸಮೂಹದಲ್ಲಿಯೂ ಭಗವಂತನೇ ನೆಲಸಿರುತ್ತಾನೆಂದದ್ದರಿಂದ ಆತನ ವಿಭೂತಿದರ್ಶನವು ಸುಲಭಸಾಧ್ಯವೆಂತ ತಿಳಿಸಿದಂತಾಗಿರುತ್ತದೆ.

ಈಗ ಅಪಗುರಮಾಣ, ಅಭಿಘ್ನನ್, ಆಖ್ಖಿದನ್, ಪ್ರಖ್ಖಿದನ್–ಎಂಬ ಭಗವದಂಶರಾದ ರುದ್ರರನ್ನು ಸ್ತುತಿಸಲಾಗುವದು. ಪಾಪಿಗಳನ್ನು ಶಿಕ್ಷಿಸುವದಕ್ಕಾಗಿಯೇ ಶಸ್ತ್ರಗಳನ್ನು ಎತ್ತಿಹಿಡಿದಿರುವವನು ಅಪಗುರಮಾಣನು. ಪಾಪಿಗಳನ್ನು ಹೊಡೆಯುತ್ತಿರುವವನು ಅಭಿಘ್ನನು. ಆ–ಈಷತ್ ಎಂದರೆ ಸ್ವಲ್ಪಮಟ್ಟಿಗೆ ಎಂದರ್ಥ. ಕೆಲವು ದುಷ್ಟರನ್ನು ಅವರ ಕರ್ಮಕ್ಕೆ ತಕ್ಕಷ್ಟು ಖೇದವನ್ನುಂಟುಮಾಡುತ್ತಾ ಹಿಂಸಿಸುವನು ಆಖ್ಖಿದನು. ಪ್ರಖ್ಖಿದನು ಎಂದರೆ ಪ್ರಕರ್ಷ–ಹೆಚ್ಚಾಗಿ ಹಿಂಸಿಸುವವನು–ಎಂದರ್ಥ. ಯಾರಾದರೂ ನಮ್ಮನ್ನು ಹಿಂಸಿಸಿದಾಗ ಅವರ ಮೇಲೆ ನಾವು ದ್ವೇಷವನ್ನು ಮಾಡುವೆವು. ಆದರೆ ನಮ್ಮ ಪಾಪದ ಫಲವಾಗಿಯೇ ಪರಮೇಶ್ವರನು ಆ ರೂಪದಿಂದ ಹಿಂಸೆಯನ್ನು ಕೊಟ್ಟ ನೆಂದು ಭಾವಿಸಿದಾಗ ನಮಗೆ ಅದು ಪ್ರಾಯಶ್ಚಿತ್ತವಾಗಿ ಪರಿಣಮಿಸಿ ಮುಂದೆ ಚಿತ್ತಶುದ್ಧಿಗೆ ಅವಕಾಶವಾಗುವದು. ಇದರಿಂದ ತಿಳಿಯಬರುವದೇನೆಂದರೆ: ಭಗವಂತನ ವಿಷಯದಲ್ಲಿ ನಾವು ಹಿಂದೆ ಅಪರಾಧಿಗಳಾಗಿದ್ದುದು ನಿಜ; ಈಗ ಶಿಕ್ಷೆಯಿಂದ ಶುದ್ಧರಾಗಿರುವ ನಮಗೆ ಅದೇ ಭಗವಂತನು ಮಂಗಳಪ್ರದನಾಗುವ ಅವಕಾಶವು ಒದಗಿರುತ್ತದೆ–ಎಂತ ಭಾವಿಸಬಹುದಾಗಿದೆ. ಹೀಗೆ ಶಿಕ್ಷಾರ್ಹರಿಗೆ ಮಾತ್ರ ಶಿಕ್ಷೆಯನ್ನು ವಿಧಿಸುವ ಭಗವಂತನ ವಿಷಯದಲ್ಲಿ ಯಾರೂ ದ್ವೇಷವನ್ನು ಸಾಧಿಸಬಾರದೆಂಬುದು ಈ ನಾಮಗಳ ಸ್ತುತಿಯಿಂದ ಹೊರಪಡುತ್ತದೆ.

ಈಗ ದೇವತೆಗಳ ಹೃದಯಕ್ಕೆ ಮಾತ್ರವೇ ಗೋಚರರಾಗಿರುವ ಕಿರಿಕರೇ ಮುಂತಾದ ಐದು ವಿಧರಾದ ರುದ್ರಗಣರನ್ನು ಸ್ತುತಿಸುವ ಭಾಗವನ್ನು ವಿಚಾರ ಮಾಡೋಣ. ದೇವತೆಗಳ ಹೃದಯಕ್ಕೇ ಗೋಚರರು ಎಂದದ್ದರಿಂದ ಸಾಮಾನ್ಯ ಮನುಷ್ಯರ ದೃಷ್ಟಿಗೆ ಈ ರುದ್ರರು ಕಾಣಿಸುವದಿಲ್ಲ–ಎಂದರ್ಥ. ಹೀಗೆ ಗುಪ್ತ

ರಾಗಿದ್ದುಕೊಂಡು ಜಗತ್ತನ್ನು ನಿಗ್ರಹಿಸುತ್ತಿರುವ ಪಂಚರುದ್ರರುಗಳು ಸರ್ವ ಶಕ್ತರೆಂದು ಹೇಳಬೇಕಾಗಿದೆ. ಅವರು ನಿಗ್ರಹಕಾರ್ಯವನ್ನು ಯಾವ ದಾಕ್ಷಿಣ್ಯಕ್ಕೂ ಒಳಪಡದೆ ಮಾಡುವರು. ಇದರಿಂದ ಪಾಪಿಗಳನ್ನು ಕಟ್ಟು ಪಾಡಿನಲ್ಲಿಡುವದು ಸಾಧ್ಯವಾಗುತ್ತದೆ. ಪ್ರಪಂಚವ್ಯಾಪಾರವೂ ತೊಡಕಿಲ್ಲದೆ ಮುಂದುವರೆಯುತ್ತದೆ. ಇಂಥ ಕಾರ್ಯದಕ್ಷರಾದ ರುದ್ರರಲ್ಲಿ, ಕಿರಿಕರು ವಿಕ್ಷೀಣಕರು, ವಿಚಿನ್ವತ್ಕರು, ಆನಿರ್ಹತರು, ಆಮೀವತ್ಕರು–ಎಂದು ಐದು ಗುಂಪುಗಳಿವೆ. ಇವರುಗಳ ಮಹಿಮೆಯನ್ನು ತಿಳಿಯೋಣ.

ಕಿರನ್ತಿ-ನಾಶಯನ್ತಿ ಎಂದರೆ ನಾಶಮಾಡುತ್ತಾರಾದ್ದರಿಂದ ಕಿರಿಕರು ; ಇವರು ತಮ್ಮ ಇಷ್ಟಾನುಸಾರವಾಗಿ ವರ್ತಿಸುತ್ತಾರೆ. ಆದರೂ ಯಾರನ್ನೂ ಅನ್ಯಾಯವಾಗಿ ಹಿಂಸಿಸುವದಿಲ್ಲ. ವಿಕ್ಷೀಣಕರೆಂಬುವರು ಪಾಪಿಗಳಿಗೆ ನಾನಾ ವಿಧವಾದ ಹಿಂಸೆಯನ್ನು ಕೊಡತಕ್ಕವರು. ರೋಗಗಳು, ಮನಸ್ತಾಪ, ಭಯ, ಸಾಲ, ಅಪಮೃತ್ಯುವೇ ಮುಂತಾದ ರೀತಿಯಿಂದ ಪಾಪಿಜನರನ್ನು ಶಿಕ್ಷಿಸುವವರು ಇವರೇ ಆಗಿರುತ್ತಾರೆ. ವಿಚಿನ್ವತ್ಕರು ಪಾಪಿಗಳು ಯಾರು ? ಪುಣ್ಯವಂತರು ಯಾರು ? ಎಂಬಿದನ್ನು ಹುಡುಕುತ್ತಿರುತ್ತಾರೆ. ಪರಮೇಶ್ವರನು ಪುಣ್ಯ ವಂತರಿಗೆ ಅನುಗ್ರಹಮಾಡುವದಕ್ಕೂ ಪಾಪಿಗಳನ್ನು ನಿಗ್ರಹಿಸುವದಕ್ಕೂ ಇವರನ್ನು ಉಪಯೋಗಿಸಿಕೊಳ್ಳುತ್ತಾನೆ. ಆನಿರ್ಹತರು ಎಂದರೆ ಪಾಪಿ ಗಳೆಂದು ನಿಶ್ಚಯಿಸಲ್ಪಟ್ಟವರನ್ನು ಮಾತ್ರವೇ ಶಿಕ್ಷೆಗೆ ಒಳಪಡಿಸುವವರು. ಪಾಪಿಗಳಲ್ಲದವರು ಯಾರಿಗೂ ವಿನಾಕಾರಣವಾಗಿ ಶಿಕ್ಷೆಯಾಗಬಾರದಷ್ಟೆ. ಹಾಗೆಯೇ ಶಿಕ್ಷಾರ್ಹರಾದವರಿಗೆ ಶಿಕ್ಷೆಯು ತಪ್ಪಿಹೋಗಲೂಬಾರದು. ಇದ ಕ್ಕಾಗಿ ಈ ರುದ್ರಗಣಗಳು ತಮ್ಮ ವ್ಯಾಪಾರವನ್ನು ಬಹು ಎಚ್ಚರಿಕೆಯಿಂದ ನಿರ್ವಹಿಸುತ್ತಿರುವರು. ಆಮೀವತ್ಕರೆಂಬುವರು ಪಾಪಿಗಳನ್ನು ಅತ್ತಿತ್ತ ಓಡಾಡಿಸುತ್ತಾ ಅವರುಗಳು ತಪ್ಪಿಸಿಕೊಂಡು ಹೋಗದಂತೆ ಎಲ್ಲೆಲ್ಲಿಯೂ ಕಾವಲಿರುವರು. ಇವರ ದೃಷ್ಟಿಗೆ ಕಾಣದಂತೆ ಹೋಗಲು ಯಾವನಿಗೂ ಸಾಧ್ಯವಾಗಲಾರದು. ಹೀಗೆ ನಾನಾ ವಿಧವಾದ ರೂಪದಿಂದ ಪ್ರಪಂಚವನ್ನೆಲ್ಲ ಸುತ್ತಿಕೊಂಡಿರುವ ರುದ್ರಗಣಗಳು ಪಾಪಿಗಳಿಗೆ ಭಯಂಕರರಾಗಿದ್ದುಕೊಂಡು ಸಮಯಾನುಸಾರ ಜಗತ್ಸಂಹಾರಕಾರ್ಯವನ್ನು ನಿರ್ವಹಿಸುತ್ತಾ ಭಕ್ತರ ರಕ್ಷಣೆಯನ್ನೂ ಮಾಡುತ್ತಿರುವರು.

ಮೇಲಿನ ವಿವರಣೆಗಳನ್ನು ಸರಿಯಾದ ರೀತಿಯಿಂದ ನಾವು ಅರ್ಥಮಾಡಿಕೊಂಡಲ್ಲಿ ಪಾಪವನ್ನು ಮಾಡುವದಕ್ಕೆ ಮನಸ್ಸೇ ಬರಲಾರದು. ಒಂದು ವೇಳೆ ಬಂದರೂ ರುದ್ರರ ಸ್ಮರಣೆಯಿಂದ ಭಯವುಂಟಾಗಿ ಪಾಪಬುದ್ಧಿಯು ನಾಶವಾಗಿಯೇ ತೀರುವದು. ಪಾಪದಿಂದ ಹಿಮ್ಮೆಟ್ಟಿದಂತೆಲ್ಲ ನಮಗೆ ಸಾತ್ವಿಕಬುದ್ಧಿವೃತ್ತಿಗಳುಂಟಾಗುವವು. ಆಗ ಭಕ್ತಿಜ್ಞಾನಾದಿಸಾಧನಗಳಿಗೆ ನಾವು ಏರಲು ಸುಲಭವಾಗುವದು. ರುದ್ರರು ಇಂಥ ಪುಣ್ಯವಂತರಿಗೆ ಅನುಗ್ರಹವನ್ನೇ ಮಾಡುವವರಾಗಿದ್ದು ಸಂಸಾರದಿಂದ ಮೇಲಕ್ಕೆತ್ತಿ ಉದ್ಧರಿಸುವರು. ಹೀಗೆ ನಾವು ಈ ರುದ್ರರ ಸ್ಮರಣೆಯಿಂದ ಶ್ರೇಯೋವಂತರಾಗಬಹುದಾಗಿದೆ.

---

## ೨೯. ಯಾ ತೇ ರುದ್ರ ಶಿವಾ ತನೂಃ

ರುದ್ರಾಧ್ಯಾಯದ ಹತ್ತನೆಯ ಅನುವಾಕವನ್ನು ಈಗ ವಿಚಾರಮಾಡಬೇಕಾಗಿದೆ. ಈವರೆಗಿನ ಮಂತ್ರಭಾಗಗಳಲ್ಲಿ ಪರಮೇಶ್ವರನ ಸರ್ವಾತ್ಮಕತ್ವ, ಸರ್ವೈಶ್ವರ್ಯ, ಸರ್ವೋತ್ಕೃಷ್ಟತ್ವಾದಿಗಳನ್ನು ಕುರಿತು ವರ್ಣಿಸಲಾಯಿತು. ಈಗ ಪ್ರಾರ್ಥನಾರೂಪವಾದ ಹನ್ನೆರಡು ಮಂತ್ರಗಳನ್ನೊಳಗೊಂಡ ಈ ಹತ್ತನೆಯ ಅನುವಾಕವು ಪ್ರಾರಂಭವಾಗಲಿದೆ. ಅದರ ಮೊದಲನೆಯ ಮಂತ್ರವು ಹೀಗಿದೆ:

ದ್ರಾಪೇ ಅಂಧಸಸ್ಪತೇ ದರಿದ್ರನ್ನೀಲಲೋಹಿತ । ಏಷಾಂ ಪುರುಷಾಣಾಮೇಷಾಂ ಪಶೂನಾಂ ಮಾ ಭೇರ್ಮಾಽರೋ ಮೋ ಏಷಾಂ ಕಿಂಚನಾಮಮತ್ ॥

"ದ್ರಾಪಿಯೆ, ಅಂಧಸಸ್ಪತಿಯೆ, ದರಿದ್ರನೆ, ನೀಲಲೋಹಿತನೆ, (ನಮ್ಮವರಾದ) ಈ ಪುರುಷರನ್ನು ಹಾಗೂ ಪಶುಗಳನ್ನು ಹೆದರಿಸಬೇಡ. (ಇವುಗಳಲ್ಲಿ) ಏನೊಂದೂ ನಾಶವಾಗದೆ ಇರಲಿ; ಮತ್ತು ವ್ಯಾಧಿಗ್ರಸ್ತವಾಗದಿರಲಿ."

ದ್ರಾ-ಎಂದರೆ ಕುತ್ಸಿತವಾದ ಗತಿ ಎಂದರ್ಥ. ಭಗವಂತನು ಕೋಪಗೊಂಡರೆ ನಮ್ಮನ್ನು ಕೆಟ್ಟಗತಿಗಳಿಗೆ ಒಯ್ಯುವದು ಖಂಡಿತ. ಆತನಿಗೆ ಕೋಪವಾದರೊ, ನಾವು ಮಾಡುವ ಅಪರಾಧಗಳಿಂದಲೇ ಉಂಟಾಗುವದು. ಹೀಗೆ

ಪಾಪಿಗಳನ್ನು ಕೆಟ್ಟಗತಿಗಳಿಗೆ ಒಯ್ಯುವವನೇ ದ್ರಾಪಿಯು. ಅಂಧಸ್-ಎಂದರೆ ಅನ್ನವೆಂದರ್ಥ: ಅನ್ನಕ್ಕೆ ಒಡೆಯನಾದುದರಿಂದ ಭಗವಂತನು ಅಂಧಸಸ್ಪತಿಯು. ನಿಷ್ಕಿಂಚನನಾದ್ದರಿಂದ ದರಿದ್ರನು. ಉಮಾದೇವಿಯನ್ನು ವಾಮಾರ್ಧದಲ್ಲಿ ಧರಿಸಿರುವದರಿಂದ ಅರ್ಧ ನೀಲನೂ ಅರ್ಧ ಲೋಹಿತ(ಕೆಂಪ)ನೂ ಆಗಿರುವನು. ಆದ್ದರಿಂದ ನೀಲಲೋಹಿತನು. ಹೀಗೆ ನಾಲ್ಕು ಸಂಬೋಧನೆಗಳಿಂದ ಭಗವಂತನನ್ನು ಇಲ್ಲಿ ಕರೆಯಲಾಗಿದೆ. ಇಂಥ ರುದ್ರನೆ, ನೀನು ನಮ್ಮವರಾದ ಬಂಧುಜ್ಞಾತಿವರ್ಗದವರನ್ನಾಗಲೀ ನಮ್ಮ ದನಕರುಗಳೇ ಮುಂತಾದ ಪಶುವರ್ಗಗಳನ್ನಾಗಲೀ ಹೆದರಿಸಬೇಡ-ಎಂದರೆ ಅವುಗಳಿಗೆ ಭಯವನ್ನುಂಟುಮಾಡಬೇಡ. ಮತ್ತು ಯಾರನ್ನೂ ಅಕಾಲದಲ್ಲಿ ಸಂಹಾರಮಾಡಬೇಡ. ರೋಗರುಜಿನಾದಿಗಳಿಂದ ಬಳಲುವಂತೆಯೂ ಮಾಡಬೇಡ-ಎಂದು ಇಲ್ಲಿ ಪ್ರಾರ್ಥಿಸಲಾಗಿದೆ.

ಈ ಪ್ರಾರ್ಥನೆಯು ತುಂಬ ಯೋಗ್ಯವಾದುದಾಗಿದೆ. ಏಕೆಂದರೆ ಎಲ್ಲಾ ಭೂತಗಳಿಗೂ ಪರಮೇಶ್ವರನೇ ಗತಿಯಾದ್ದರಿಂದ ನಮ್ಮನ್ನು ಆತನು ಕೆಟ್ಟಗತಿಗಳಿಂದ ಎತ್ತಿ ಉದ್ಧಾರಮಾಡಲು ಸಮರ್ಥನೂ ಆಗಿದ್ದಾನೆ. ಪಾಪಕರ್ಮಗಳಿಂದ ಕುತ್ಸಿತಗತಿಯು ಬರಬಹುದಾದರೂ ಕರ್ಮಾಧಿಪತಿಯಾದ ಈಶ್ವರನು ತನ್ನನ್ನು ಶರಣುಹೊಂದಿದವರನ್ನು ಅಂಥ ದುರ್ಗತಿಯಿಂದ ಪಾರುಮಾಡಲು ಸರ್ವಸ್ವತಂತ್ರನೇ ಆಗಿದ್ದಾನಷ್ಟೆ ? ಹಾಗೆಯೇ ಅನ್ನಕ್ಕೂ ಪತಿಯಾದ್ದರಿಂದ ಅನ್ನವನ್ನೂ ಕೊಟ್ಟು ಕಾಪಾಡಲು ಸಹ ಸಮರ್ಥನಾಗಿರುವನು. ಮನುಷ್ಯನು ಅನ್ನಕ್ಕಾಗಿ ಎಂದರೆ ಹೊಟ್ಟೆಯಪಾಡಿಗಾಗಿಯೇ ಪಾಪಕರ್ಮಗಳನ್ನು ಬಹಳ ಮಟ್ಟಿಗೆ ಮಾಡುವನು. ಆದರೆ ಪರಮೇಶ್ವರನನ್ನು ಭಜಿಸಿದಾಗ ಅವನು ಸತ್ಕರ್ಮಗಳ ಮೂಲಕವೇ ಅನ್ನದ ಪ್ರಾಪ್ತಿಯಾಗುವಂತೆ ಅನುಗ್ರಹಿಸುವದರಿಂದ ಪಾಪಗಳ ಸಂಘಟನೆಯೂ ದುರ್ಗತಿಯೂ ಇಲ್ಲವಾಗುವವು. ಹೀಗೆ ದ್ರಾಪೇ, ಅಂಧಸಸ್ಪತೇ-ಎಂಬ ಸಂಬೋಧನೆಗಳು ಅರ್ಥಗರ್ಭಿತವಾಗಿವೆ. ಇನ್ನು ದರಿದ್ರತ್-ಎಂದರೆ ನಿಷ್ಕಿಂಚನನು. ಭಗವಂತನು ಭಕ್ತರಿಗೆ ಕೇಳಿದ್ದನ್ನೆಲ್ಲ ಕೊಟ್ಟು ತಾನು ದರಿದ್ರನಾಗಿಯೇ ಉಳಿದಿದ್ದಾನೆ. ಅಥವಾ ಪ್ರಪಂಚದಲ್ಲಿ ಏನಿದ್ದರೂ ಭಯಕ್ಕೇ ಕಾರಣವಾಗಿರುವದರಿಂದ ವೈರಾಗ್ಯವೊಂದೇ ಅಭಯವಾದದ್ದೆಂತ ಜನರಿಗೆ ತಿಳಿಯಪಡಿಸುವದಕ್ಕಾಗಿ ತಾನು ನಿಷ್ಕಿಂಚನನೇ ಆಗಿದ್ದಾನೆ-ಎಂದೂ ಹೇಳಬಹುದು. ಆದರೆ ಸರ್ವಮಂಗಳೆಯೂ ಸರ್ವಶಕ್ತಳೂ

ಆದ ದೇವಿಯೇ ಆತನ ಶರೀರಾರ್ಧವನ್ನು ಪಡೆದುಕೊಂಡಿರುತ್ತಾಳಾದ್ದರಿಂದ ನೀಲಲೋಹಿತನಾದ ರುದ್ರನು ಎಂದಿಗೂ ದರಿದ್ರನಲ್ಲ. ದಾರಿದ್ರ್ಯವನ್ನು ಸಂಹಾರಮಾಡುವ ಮಹಾದೇವನು-ಎಂದು ತಿಳಿಯಬೇಕು. ಇಂಥ ದೇವನು ನಮ್ಮವರಾದ ಮಕ್ಕಳುಮರಿಗಳನ್ನೂ ಪಶುಗಳನ್ನೂ ಕಾಪಾಡಲಿ; ಆತನ ಪ್ರಸಾದದಿಂದ ಎಲ್ಲರೂ ಆರೋಗ್ಯಂತರಾಗಿ, ಆಯುಷ್ಯವಂತರಾಗಿ, ಅನ್ನವುಳ್ಳವರಾಗಿ ಹಾಗೂ ಭಯರಹಿತರಾಗಿ ಬಾಳಲಿ ಎಂದು ಈ ಮಂತ್ರದ ಅಭಿಪ್ರಾಯ. ಇದರಿಂದ ಭಗವಂತನು ಪಕ್ಷಪಾತರಹಿತನೆಂದೂ ನಿಗ್ರಹಾನುಗ್ರಹಗಳನ್ನು ಅವರವರ ಭಾವನೆಗೂ ಭಜನೆಗೂ ತಕ್ಕಂತೆ ಮಾಡುತ್ತಾ ತಾನು ದರಿದ್ರನಾಗಿಯೇ (ನಿರ್ಲಿಪ್ತನಾಗಿಯೇ) ಇರುವನೆಂದೂ ಗೊತ್ತಾಗುತ್ತದೆ. 'ಮನಸ್ಸಿನಂತೆ ಮಹಾದೇವ' ಎಂಬ ಗಾದೆಯನ್ನು ಕೇಳಿದ್ದೀರಷ್ಟೆ ?

ಈಗ ಎರಡನೆಯ ಮಂತ್ರದ ಅರ್ಥವನ್ನು ವಿಚಾರಮಾಡೋಣ.

ಯಾ ತೇ ರುದ್ರ ಶಿವಾ ತನೂಃ ಶಿವಾ ವಿಶ್ವಾಹಭೇಷಜೀ । ಶಿವಾ ರುದ್ರಸ್ಯ ಭೇಷಜೀ ತಯಾ ನೋ ಮೃಡ ಜೀವಸೇ ॥

"ಎಲೈ ರುದ್ರನೆ, ನಿನ್ನ ಶಿವವಾದ ಯಾವ ಶರೀರವುಂಟೋ, ಎಂದರೆ ಯಾವದು ಎಲ್ಲಾ ದಿನಗಳಲ್ಲಿಯೂ ಔಷಧಿಯಂತಿರುವದೋ ಅದು, ಮತ್ತು ರುದ್ರನಾದ ನಿನ್ನ ಆ ಔಷಧರೂಪವಾದ ತನುವು ನಾವು ಬದುಕಲು ಅನುಕೂಲವಾಗುವಂತೆ ಆಗಲಿ ; ಹಾಗೆ ಸುಖವನ್ನುಂಟುಮಾಡು"

ಈ ಮಂತ್ರವೂ ಪ್ರಾರ್ಥನಾರೂಪವೇ ಆಗಿರುತ್ತದೆ. ಭಗವಂತನಿಗೆ ಮಂಗಳಕರವಾದ ಶರೀರವೂ ಭಯಂಕರವಾದ ಶರೀರವೂ ಎರಡೂ ಇರುವವು. 'ಶಿವಃ ಶಿವಾನಾಮಶಿವೋಽಶಿವಾನಾಮ್' ಎಂದಂತೆ ಪುಣ್ಯವಂತರಿಗೆ ಶಿವನೂ ಪಾಪಿಗಳಿಗೆ ಅಶಿವನೂ ಆಗಿ ಭಗವಂತನು ತೋರಿಕೊಳ್ಳುವನು. ಇವುಗಳಲ್ಲಿ ಶಿವವಾದ ಆತನ ಶರೀರವು ಭಕ್ತರಿಗೆ ಇಷ್ಟವಾಗಿರುವದು. ಅಂಥ ಶಿವವಾದ ಶರೀರದಿಂದ ನಮ್ಮನ್ನು ಸುಖಗೊಳಿಸು–ಎಂದು ಇಲ್ಲಿ ಕೇಳಿಕೊಳ್ಳಲಾಗಿದೆ. ಸೌಮ್ಯವಾದ ಶರೀರವಿದ್ದಲ್ಲಿ ಧ್ಯಾನಕ್ಕೂ ಬಹಳ ಅನುಕೂಲವಾಗಿರುವದು. ಶಾಂತವಾದ ಆಕಾರವು ಮನಶ್ಶಾಂತಿಗೆ ಸಾಧನವಾಗುವದು. ಆದ್ದರಿಂದ 'ಶಿವಾ ತನೂಃ' ಎಂದು ಇಲ್ಲಿ ವಿಶೇಷಣಸಹಿತವಾಗಿ ತಿಳಿಸಲಾಗಿದೆ. ಶರೀರವು ಶಿವವಾಗಿರುವದು ಹೇಗೆ ? ಎಂದರೆ ವಿಶ್ವಾಹಭೇಷಜೀ ಎಂಬ ವಿಶೇಷಣವನ್ನು

ನೋಡಿರಿ. ವಿಶ್ವೇಷು-ಎಂದರೆ ಎಲ್ಲಾ, ಅಹಸ್ಸು-ಎಂದರೆ ಹಗಲುಗಳಲ್ಲಿ ಎಂದರ್ಥ. ಯಾವಾಗಲೂ ಎಲ್ಲಾ ಕಾಲಗಳಲ್ಲಿಯೂ ರೋಗ, ದಾರಿದ್ರ್ಯ, ದುಃಖ-ಮುಂತಾದ ಸಮಸ್ತದೋಷಗಳಿಗೂ ಔಷಧಿಯಂತಿರುವ ಶಾಂತವಾದ ಶರೀರವು ನಮಗೆ ಸುಖವುಂಟುಮಾಡಲಿ-ಎಂದಭಿಪ್ರಾಯ. ಈ ದಿವ್ಯರೂಪವು ಕೇವಲ ಶಾರೀರಕಮಾನಸಿಕರೋಗಾದಿಗಳನ್ನು ಮಾತ್ರ ಕಳೆಯುವದಷ್ಟೇ ಅಲ್ಲ; ಮತ್ತೇನೆಂದರೆ ರುದ್ರನ ಶರೀರವಾದ್ದರಿಂದ ಸಂಸಾರವೆಂಬ ಮಹಾ ರೋಗವನ್ನೂ ಪರಿಹರಿಸತಕ್ಕದ್ದು. ಆದ್ದರಿಂದಲೇ ರುದ್ರಸ್ಯ ಭೇಷಜೀ ಶಿವಾ-ಎಂದು ಸ್ತುತಿಸಲಾಗಿದೆ.

ಹೀಗೆ ಭಗವಂತನ ದಿವ್ಯವಾದ ಹಾಗೂ ಶಾಂತವಾದ ಶರೀರವನ್ನು ಸ್ಮರಿಸುತ್ತಾ ಆ ಭಗವಂತನನ್ನು 'ಎಲೈ ಮೃಡನೆ, ನಮ್ಮನ್ನು ಜೀವಿಸುವದಕ್ಕೆ ದಯೆಮಾಡು' ಎಂದೂ ಕೇಳಲಾಗಿದೆ. ಜೀವಸೇ ಎಂಬಲ್ಲಿ ಸೇ-ಎಂಬುದು ತುಮ್-ಎಂಬುದಕ್ಕೆ ಬದಲಾಗಿ ಬಂದಿದೆಯೆಂದು ತಿಳಿಯಬೇಕು. ಜೀವಿತುಮ್-ಜೀವಿಸುವದಕ್ಕೆ ಎಂದೇ ಅಭಿಪ್ರಾಯ. ಭಗವಂತನೇ ನಮಗೆ ಶಾಂತಿಯನ್ನೂ ಆನಂದವನ್ನೂ ಕೊಡಬೇಕೇ ಹೊರತು ಪ್ರಾಪಂಚಿಕವಾದ ಯಾವ ವಸ್ತುಗಳೂ ಅವುಗಳನ್ನು ಕೊಡಲಾರವು. ಆದರೂ ನಾವು ಶಿವನನ್ನು ಬಿಟ್ಟು ಉಳಿದ ಅಶಿವವಾದ ವಸ್ತುಗಳನ್ನೇ ನಂಬಿ ಅವುಗಳನ್ನೇ ಸುಖಸಾಧನಗಳೆಂತ ಬಯಸಿ ಬೇಡುತ್ತಿರುವೆವು. ಇದು ಸರಿಯಲ್ಲ. ಆದ್ದರಿಂದ ಈಗಲಾದರೂ ಶಿವನನ್ನು ಮೊರೆಹೊಕ್ಕು ನಮ್ಮ ಸುಖಶಾಂತಿಗಳನ್ನು ಸಂಪಾದಿಸಿಕೊಳ್ಳಬೇಕು.

ಭಗವಂತನ ಈ ದಿವ್ಯಶರೀರವು ನಿಜವಾಗಿಯೂ ನಮಗೆ ಗೋಚರವಾದೀತೆ? ಆತನು ಅಂಥ ಶರೀರದಿಂದ ನಮ್ಮನ್ನು ಅನುಗ್ರಹಿಸಿಯಾನೆ? ಎಂದು ಸಂಶಯವು ಉಂಟಾಗಬಹುದು. ಆದರೆ ಹಾಗೆ ಸಂದೇಹಪಡಬಾರದು. ಭಗವಂತನ ಸೃಷ್ಟಿಯಲ್ಲಿ ಶಾಂತವಾದ ಶರೀರಗಳು ಎಷ್ಟೊಂದು ಇವೆ? ಕಣ್ಣಿಟ್ಟು ನೋಡಿದರೆ ತಿಳಿದೀತು. ಅಷ್ಟಮೂರ್ತಿಯಾದ ಪರಮೇಶ್ವರನ ಶರೀರಗಳಲ್ಲಿ ಪೃಥಿವಿಯನ್ನೇ ತೆಗೆದುಕೊಂಡರೂ ಸಾಕು. ಒಂದು ಬೆಟ್ಟವನ್ನು ದೂರದಿಂದ ನೋಡಿರಿ. ಎಷ್ಟು ರಮಣೀಯವೂ ಶಾಂತವೂ ಆಗಿರುತ್ತದೆ? ಅನೇಕರು ಇಂಥ ಪ್ರಕೃತಿಸೌಂದರ್ಯವನ್ನು ಸವಿಯುವದಕ್ಕಾಗಿಯೇ ಪ್ರವಾಸ ಮಾಡುವರು. ಆದರೆ ಆ ಪ್ರಕೃತಿಯನ್ನು ಮೇಲೆಮೇಲೆ ನೋಡಿ ಜಡವೆಂದೇ ಭಾವಿಸುವರು. ಅದಕ್ಕೆ ಬದಲಾಗಿ ಅದು ಪರಮೇಶ್ವರನ ಶರೀರವೆಂದು ಚಿಂತಿ

ಸುತ್ತಾ ಒಳಹೊಕ್ಕರೆ ಕೂಡಲೇ ಶಾಂತನೂ ಚೇತನನೂ ಆದ ಮಂಗಳ ಮೂರ್ತಿಯ ದರ್ಶನವು ಹೃದಯದಲ್ಲಿ ಆದೀತು. ಅಂಥ ಮನಸ್ಸು ಮಾತ್ರ ಬೇಕು. ಇಂಥ ದಿವ್ಯಶರೀರಗಳು ಎಷ್ಟಿಲ್ಲ? ಸ್ಥಾವರಜಂಗಮಗಳೆಲ್ಲವೂ ಶಿವನೇ ಆಗಿರುವಾಗ ಮತ್ತೇಕೆ ಶಿವನನ್ನು ಹುಡುಕಬೇಕು ? ಅಂತೂ ಪರಮೇಶ್ವರನು ತನ್ನ ಶಿವರೂಪದಿಂದ ಎಲ್ಲರನ್ನೂ ಸುಖಪಡಿಸಲೆಂದು ಇಲ್ಲಿ ಪ್ರಾರ್ಥಿಸಲಾಗಿದೆ.

---

## ೩೦. ಮೃಡಾ ನೋ ರುದ್ರ

ರುದ್ರಾಧ್ಯಾಯದ ಹತ್ತನೆಯ ಅನುವಾಕದ ಎರಡು ಮಂತ್ರಗಳ ಅರ್ಥವನ್ನು ವಿವರಿಸಿದ್ದಾಗಿದೆ. ಈಗ ಮೂರನೆಯ ಮಂತ್ರವನ್ನು ವಿಚಾರ ಮಾಡೋಣ.

ಇಮಾಗ್‍ಂ ರುದ್ರಾಯ ತವಸೇ ಕಪರ್ದಿನೇ ಕ್ಷಯದ್ವೀರಾಯ ಪ್ರಭರಾಮಹೇ ಮತಿಮ್ । ಯಥಾ ನಶ್ಶಮಸದ್ದ್ವಿಪದೇ ಚತುಷ್ಪದೇ ವಿಶ್ವಂ ಪುಷ್ಟಂ ಗ್ರಾಮೇ ಅಸ್ಮಿನ್ನನಾತುರಮ್ ॥

"ತಪೋಬಲಸಮನ್ವಿತನೂ ಜಟಾಜೂಟಧಾರಿಯೂ ಪ್ರತಿಪಕ್ಷದವರನ್ನು ಕ್ಷಯಗೊಳಿಸುವವನೂ ಆದ ರುದ್ರನಿಗೆ ನಾವು ನಿರಂತರವಾಗಿ ಪ್ರಾರ್ಥನೆಯನ್ನು ಸಲ್ಲಿಸೋಣ. (ಅದು ಯಾವದೆಂದರೆ) ನಮ್ಮ ಸಂಬಂಧಿಯಾದ ಎರಡು ಮತ್ತು ನಾಲ್ಕು ಕಾಲಿನ ಪ್ರಾಣಿಗಳಿಗೂ ಮತ್ತು ಈ ಗ್ರಾಮದಲ್ಲಿರುವ ಎಲ್ಲ ಪ್ರಾಣಿಗಳಿಗೂ ಪುಷ್ಟಿಯೂ ರೋಗರಾಹಿತ್ಯವೂ ಸುಖವೂ ಹೇಗೆ ಉಂಟಾದೀತೋ ಹಾಗೆ ರುದ್ರನು ದಯೆಮಾಡಲಿ!"

ಈ ಪ್ರಾರ್ಥನೆಯು ಎಷ್ಟು ಸುಂದರವಾಗಿದೆ, ನೋಡಿರಿ. ರುದ್ರನು ಮಹಾತಪಸ್ವಿಯು. ಆದರೆ ಅತನ ತಪಃಫಲವು ಅವನಿಗಾಗಿ ಅಲ್ಲ. ಲೋಕದ ಕಲ್ಯಾಣಕ್ಕಾಗಿಯೇ ವಿನಿಯೋಗಿಸಲಾಗಿರುವದು. ಹಾಗೂ ಜಟಾಜೂಟಗಳನ್ನು ಧರಿಸಿರುವ ಈ ರುದ್ರನು ಕ್ಷಯದ್ವೀರನಾಗಿರುವನು; ಎಂದರೆ ಶತ್ರುಪಕ್ಷದವರ ಅಥವಾ ಅಹಂಕಾರಿಗಳ ಬಲವನ್ನು ಮುರಿಯುವವನಾಗಿರುತ್ತಾನೆ. ರಾವಣನು ದರ್ಪದಿಂದ ಕೈಲಾಸವನ್ನೆತ್ತಿದಾಗ ಪರಮೇಶ್ವರನು ಆತನ ಬಲವನ್ನು ನಿರ್ವೀರ್ಯಗೊಳಿಸಿದನಷ್ಟೆ? ಹಾಗೆಯೇ ಗಂಗೆಯು ಅಹಂಕಾರದಿಂದ ಪರಮೇಶ್ವರನನ್ನೇ ತೇಲಿಸಿಬಿಡುವೆನೆಂದು ಸ್ವರ್ಗದಿಂದ ಇಳಿದಾಗ ಭಗವಂತನು

ತನ್ನ ಜಟಾಜೂಟದಲ್ಲಿ ಆಕೆಯನ್ನು ಕಟ್ಟಿಹಾಕಿ ಅವಳ ದರ್ಪವನ್ನು ನಾಶ ಗೊಳಿಸಿದನಷ್ಟೆ? ಈ ದೃಷ್ಟಾಂತಗಳೆಲ್ಲವೂ ಆತನು ಕ್ಷುಸದ್ವೀರನೆಂಬುದನ್ನು ಸ್ಫುಟಗೊಳಿಸುವವು. ಪರಮೇಶ್ವರನನ್ನು ಎದುರಿಸಲು ಹೋದ ಯಾವನೂ ಉಳಿಯಲಾರನು. ಇಂಥ ಅಮೋಘವೀರ್ಯನಾದ ರುದ್ರನನ್ನು ನಾವು ನಿರಂತರವಾಗಿ ಪ್ರಾರ್ಥಿಸೋಣ-ಎಂದರೆ ಆತನ ಅನುಗ್ರಹವನ್ನು ಸಂಪಾದಿಸಲು ಸ್ತುತಿಸೋಣ-ಎಂದಭಿಪ್ರಾಯ.

ಈಗ ಪ್ರಾರ್ಥನೆಯ ವಿವರವನ್ನು ತಿಳಿಯೋಣ. "ಭಗವಂತ, ನಮಗೂ ನಮ್ಮ ಪಶುವರ್ಗಕ್ಕೂ ಮತ್ತು ನಮ್ಮ ಊರಿನಲ್ಲಿರುವ ಎಲ್ಲರಿಗೂ ಪುಷ್ಟಿ ಯನ್ನೂ ಆರೋಗ್ಯವನ್ನೂ ಉಂಟುಮಾಡುವವನಾಗು" ಎಂಬಿದೇ ಈ ಪ್ರಾರ್ಥ ನೆಯು. ಇದು ಎಲ್ಲರ ಹಿತಕ್ಕಾಗಿ ಮಾಡುವ ಸ್ತುತಿಯಾಗಿರುವದು. ರುದ್ರನು ನಮ್ಮ ಕುಟುಂಬವರ್ಗಕ್ಕೆಲ್ಲ ಕ್ಷೇಮದಾತನು. ಆತನ ಅನುಗ್ರಹವಿದ್ದರೆ ಮಾತ್ರ ನಮ್ಮ ಪರಿವಾರದ ಸದಸ್ಯರುಗಳು-ಎಂದರೆ ಮಕ್ಕಳು, ಮೊಮ್ಮಕ್ಕಳು, ಬಂಧುಮಿತ್ರರು-ಎಲ್ಲರೂ ಚೆನ್ನಾಗಿರುವರು. ನಮ್ಮ ಸುತ್ತುವಳೆಯವೂ ಹಾಗೆಯೇ ಚೆನ್ನಾಗಿ ಇದ್ದರೆ ಮಾತ್ರ ನಮಗೆ ಸುಖವಾದೀತು. ಆದ್ದರಿಂದ ಇಡಿಯ ಗ್ರಾಮದಲ್ಲಿರುವ ಎಲ್ಲ ಪ್ರಾಣಿಗಳಿಗೂ ಸುಖವನ್ನುಂಟುಮಾಡುವಂತೆ ಮತ್ತೊಮ್ಮೆ ಆತನನ್ನು ಇಲ್ಲಿ ಪ್ರಾರ್ಥಿಸಲಾಗಿದೆ. ಎಲ್ಲರ ಸುಖವೇ ನಮ್ಮ ಸುಖವೆಂಬುದು ಪ್ರಸಿದ್ಧವಷ್ಟೆ! ಮನೆಯಲ್ಲಿ ಯಾರಿಗಾದರೂ ಖಾಯಿಲೆ, ಅಥವಾ ತೊಂದರೆಯಾದರೂ ಅದು ಯಜಮಾನನ ಮೇಲೆ ಪರಿಣಾಮ ವನ್ನುಂಟುಮಾಡುತ್ತದೆ. ಅವನ ಸುಖಕ್ಕೆ ಅಡ್ಡಿಯೂ ಅಗುತ್ತದೆ. ಆದ್ದ ರಿಂದ ಮನೆಯ ಯಜಮಾನನು ರುದ್ರಾಧ್ಯಾಯಪಾಠಕನಾಗಬೇಕು. ಆಗ ಎಲ್ಲವೂ ಸರಿಹೋದೀತು. ಪುರಾಣದಲ್ಲಿ ರುದ್ರಾಧ್ಯಾಯಪಾಠಕನ ಮಹಿಮೆಯನ್ನು ಹೊಗಳಿರುವದನ್ನು ಕೇಳಿರಿ:

ರುದ್ರಾಧ್ಯಾಯೀ ವಸೇದ್ಯತ್ರ ಗ್ರಾಮೇ ವಾ ನಗರೇಽಪಿ ವಾ ।
ವ್ಯಾಧಿದುರ್ಭಿಕ್ಷಚೋರಾದಿಬಾಧಾ ತತ್ರ ನ ಜಾಯತೇ ॥

"ಎಲ್ಲಿ ರುದ್ರಾಧ್ಯಾಯಪಠನಮಾಡುವ ವೈದಿಕಬ್ರಾಹ್ಮಣನಿರುವನೋ ಆ ಊರಿನಲ್ಲಿಯಾಗಲಿ, ಪಟ್ಟಣದಲ್ಲಿಯಾಗಲಿ ರೋಗ, ದುರ್ಭಿಕ್ಷ, ಕಳ್ಳರ ಬಾಧೆಗಳು ಇರಲಾರವು" ಎಂದು ತಿಳಿಸಿರುತ್ತದೆ. ರುದ್ರ ಎಂಬ ಹೆಸರೇ ದುಃಖ

ವನ್ನು ಹೋಗಲಾಡಿಸುವನು-ಎಂಬರ್ಥವನ್ನು ಕೊಡುತ್ತಿದೆ. ಹೀಗೆ ರುದ್ರ ಪಾಠವು ಭಗವಂತನಾದ ಪರಮೇಶ್ವರನ ನಾನಾರೂಪಗಳ ಹಾಗೂ ಗುಣಗಳ ಸ್ತುತಿಪರವಾಗಿದ್ದು ಅತನ ಅನುಗ್ರಹಸಂಪಾದನೆಗೆ ರಾಜಮಾರ್ಗವಾಗಿರುತ್ತದೆ. ನಮ್ಮ ಸರ್ಕಾರದವರು ಪ್ರತಿಯೊಂದು ಗ್ರಾಮದಲ್ಲಿಯೂ ಒಬ್ಬೊಬ್ಬ ರುದ್ರಪಾಠಕನನ್ನು ನೇಮಿಸಿದರೂ ಸಾಕು. ಅವರ ಯೋಜನೆಗಳೆಲ್ಲ ಜಯಪ್ರದವಾಗುವವು.

ಈಗ ನಾಲ್ಕನೆಯ ಮಂತ್ರಾರ್ಥವನ್ನು ವಿಚಾರಮಾಡೋಣ.

**ಮೃಡಾ ನೋ ರುದ್ರೋತ ನೋ ಮಯಸ್ಕೃಧಿ ಕ್ಷಯದ್ವೀರಾಯ ನಮಸಾ ವಿಧೇಮ ತೇ । ಯಚ್ಛಂ ಚ ಯೋಶ್ಚ ಮನುರಾಯಜೇ ಪಿತಾ ತದಶ್ಯಾಮ ತವ ರುದ್ರ ಪ್ರಣೀತೌ ॥**

"ಎಲೈ ರುದ್ರನೆ, ನಮ್ಮನ್ನು ಸುಖಗೊಳಿಸುವವನಾಗು; ಮತ್ತು ನಮಗೆ ಮೋಕ್ಷಸುಖವನ್ನು ಉಂಟುಮಾಡು. ನಿನಗೆ ನಮಸ್ಕಾರಮಾಡುವದರಿಂದ ನಾಶಗೊಳಿಸಲ್ಪಟ್ಟ ಪಾಪವುಳ್ಳ ನಾವು ನಮ್ಮ ತಂದೆಯಾದ ಮನುವು ನಿನ್ನ ಪ್ರಸಾದದಿಂದ ಯಾವ ಭೋಗಮೋಕ್ಷಗಳನ್ನು ಸಂಪಾದಿಸಿದನೋ ಅದೆಲ್ಲವನ್ನೂ ಎಲೈ ರುದ್ರನೆ, ನಿನ್ನ ಅನುಗ್ರಹದಿಂದ ನಾವೂ ಪಡೆದುಕೊಳ್ಳುವವರಾಗುವೆವು."

ಈ ಮಂತ್ರದಲ್ಲಿ ಭೋಗಮೋಕ್ಷಗಳೆರಡನ್ನೂ ಉಂಟುಮಾಡುವಂತೆ ರುದ್ರನನ್ನು ಪ್ರಾರ್ಥಿಸಲಾಗಿದೆ. ರುದ್ರನ ಸೇವೆಯಿಂದ ನಮ್ಮ ಪಾಪಗಳು ನಾಶವಾಗಿ ನಾವು ಅವನ ಭಕ್ತರಾಗುವೆವಷ್ಟೆ ! ಅಂಥ ಭಕ್ತರ ಸಮೂಹವುಳ್ಳವನೇ ಕ್ಷಯದ್ವೀರನಾದ ರುದ್ರನು. ಆತನಿಗೆ ನಾವು ನಮಸಾ-ನಮಸ್ಕಾರದಿಂದ ಪರಿಚರ್ಯೆಯನ್ನು ಮಾಡಬೇಕು. ಆಗಲೇ ಆತನು ನಮಗೆ ಮೋಕ್ಷಸುಖವನ್ನು ಕೊಡುವವನಾಗುವನು. ಹಾಗಿಲ್ಲದೆ ಇದ್ದರೆ ಪಾಪಿಷ್ಠರಾದ ನಮ್ಮಗಳಿಗೆ ಆತನು ಸರ್ವಸಮರ್ಥನೇ ಆದರೂ ಮೋಕ್ಷವನ್ನು ಹೇಗೆತಾನೆ ಕೊಟ್ಟಾನು ? ಎಂಥ ದಯಾಳುವಾದ ಪ್ರಭುವಾದರೂ ಕಾನೂನನ್ನು ಮೀರಿ ಏನೂ ಮಾಡಲಾಗುವದಿಲ್ಲವಷ್ಟೆ ! ಆದ್ದರಿಂದ ರುದ್ರನು ನಮಗೆ ಪಾಪಗಳನ್ನು ಹೋಗಲಾಡಿಸುವದರ ಜೊತೆಗೆ ಭೋಗಮೋಕ್ಷಗಳನ್ನೂ ಕೊಟ್ಟು ಕಾಪಾಡಬೇಕಾಗಿದೆ.

ಇನ್ನೊಂದು ವಿಷಯವನ್ನು ಇಲ್ಲಿ ವಿಚಾರಮಾಡಬೇಕಾಗಿದೆ. ನಮ್ಮ ಭೋಗಮೋಕ್ಷಗಳ ಪ್ರಾಪ್ತಿಗಾಗಿ ರುದ್ರನನ್ನು ಆರಾಧಿಸಬೇಕೆಂಬ ಸಂಪ್ರದಾಯವು ನಮಗೆ ಬಂದದ್ದು ಹೇಗೆ? ಎಂದರೆ ಇಲ್ಲಿ ಹೀಗೆ ತಿಳಿಸಿದ್ದಾರೆ. 'ಮನುರಾಯಜೇ ಪಿತಾ' ಮನುಷ್ಯಕುಲಕ್ಕೆಲ್ಲ ತಂದೆಯಾದ ಹಾಗೂ ಶ್ರುತಿಪ್ರಸಿದ್ಧಮಾಹಾತ್ಮ್ಯವುಳ್ಳ ಮನುಚಕ್ರವರ್ತಿಯು ಈ ಸಂಪ್ರದಾಯವನ್ನು ಹಾಕಿಕೊಟ್ಟಿದ್ದಾನೆ. ಆತನು ಶಂಭುವಿನ ಪ್ರಸಾದದಿಂದಲೇ ಭೋಗಮೋಕ್ಷಸುಖಗಳನ್ನು ಸಂಪಾದಿಸಿಕೊಂಡನು. ಮತ್ತು ಪ್ರಜೆಗಳನ್ನು ಧರ್ಮದಿಂದ ಪರಿಪಾಲಿಸಿದನು. ಹಾಗೂ ಪ್ರಜೆಗಳ ಅಭ್ಯುದಯನಿಃಶ್ರೇಯಸ್ಸುಗಳಿಗೆ ಸಾಧನವಾದ ಧರ್ಮವನ್ನು ಉಪದೇಶಿಸಿದನು. 'ಮನುವು ಹೇಳಿದ್ದೆಲ್ಲವೂ ಔಷಧಿಯಂತೆ ಪಥ್ಯವಾದದ್ದು' ಎಂದು ವೇದದಲ್ಲಿ ತಿಳಿಸಿರುತ್ತದೆ. ಇಂಥ ಮನುವು ಸಂಪಾದಿಸಿದುದೆಲ್ಲವನ್ನೂ 'ತವ- ರುದ್ರ- ಪ್ರಣೀತೌ' 'ಎಲೈ ರುದ್ರನೆ, ನಿನ್ನ ಪ್ರಸಾದದಿಂದ ನಾವೂ ಪಡೆದುಕೊಳ್ಳುವೆವು'-ಎಂದಭಿಪ್ರಾಯ.

ಈಗ ಐದನೆಯ ಮಂತ್ರದ ಅರ್ಥವನ್ನು ವಿಚಾರಮಾಡೋಣ.

**ಮಾ ನೋ ಮಹಾಂತಮುತ ಮಾ ನೋ ಅರ್ಭಕಂ ಮಾ ನ ಉಕ್ಷಂತಮುತ ಮಾ ನ ಉಕ್ಷಿತಮ್ । ಮಾ ನೋ ವಧೀಃ ಪಿತರಂ ಮೋತ ಮಾತರಂ ಪ್ರಿಯಾ ಮಾ ನಸ್ತನುವೋ ರುದ್ರ ರೀರಿಷಃ ॥**

"ಎಲೈ ರುದ್ರನೆ, ನಮ್ಮವರಾದ ಹಿರಿಯನನ್ನೂ ಹಸುಗೂಸನ್ನೂ (ಪೌತ್ರೋತ್ಪಾದನ) ಸಮರ್ಥನಾದ ಮಗನನ್ನೂ ಗರ್ಭಸ್ಥನಾದ ಮಗನನ್ನೂ ತಂದೆಯನ್ನೂ ತಾಯಿಯನ್ನೂ ಮತ್ತು ನಮಗೆ ಪ್ರಿಯವಾದ ಶರೀರಗಳನ್ನೂ ಹಿಂಸೆಗೊಳಿಸಬೇಡ."

ಈ ಮಂತ್ರದಲ್ಲಿ ಕುಟುಂಬದ ಯಜಮಾನನ ಸಂಬಂಧಿಗಳೆಲ್ಲರನ್ನೂ ಕಾಪಾಡುವಂತೆ ಪ್ರಾರ್ಥಿಸಲಾಗಿದೆ. ಒಬ್ಬ ಯಜಮಾನನೆಂದರೆ ತಂದೆ, ತಾಯಿ, ಅಜ್ಜ, ಮಗ, ಹೆಂಡತಿ, ಗರ್ಭಸ್ಥಶಿಶು, ಅಣ್ಣ, ತಮ್ಮ, ಅಕ್ಕ, ತಂಗಿ, ಬಂಧುಗಳೇ-ಮುಂತಾದ ನೂರಾರು ಶರೀರಗಳಲ್ಲಿ ತಾನು ತನ್ನದೆಂಬ ಅಭಿಮಾನವುಳ್ಳವನು. ಇಂಥ ಯಜಮಾನನಿಗೆ, ಎಲ್ಲರೂ ಯಾವ ದುಃಖೋಪದ್ರವಗಳೂ ರೋಗರುಜಿನಗಳೂ ಇಲ್ಲದೆ ಚೆನ್ನಾಗಿದ್ದರೆ ಮಾತ್ರ ಸುಖವಾಗುವದು.

ಹಾಗಿಲ್ಲದೆ ಯಾರಿಗಾದರೂ ತೊಂದರೆಯಾದರೆ ಯಜಮಾನನಿಗೇ ಅನಿಷ್ಟವಾಗುವದು. ಆದ್ದರಿಂದ ಇಲ್ಲಿ ಕುಟುಂಬದ ಯಜಮಾನನು ಮಾಡಬೇಕಾದ ಪ್ರಾರ್ಥನೆಯನ್ನು ಕೊಟ್ಟಿರುತ್ತದೆ. ಹಿಂಸೆ, ದುಃಖ, ಸಂಕಟಗಳು ನಾವು ದೇವತೆಗಳಿಗೆ ಮಾಡುವ ಅಪರಾಧಗಳಿಂದಲೇ ಉಂಟಾಗುತ್ತದೆ. ಆದ್ದರಿಂದ ಮಹಾದೇವನೂ ಪಾಪಿಗಳಿಗೆ ಶಿಕ್ಷಕನೂ ಆದ ರುದ್ರನನ್ನು ಇಲ್ಲಿ 'ಎಲೈ ದೇವನೆ, ನನ್ನ ಕುಟುಂಬವರ್ಗದ ಹಿರಿಯ-ಕಿರಿಯರಾರನ್ನೂ ನೀನು ಹಿಂಸೆ ಮಾಡಬೇಡ' ಎಂದು ಕೇಳಿಕೊಳ್ಳಲಾಗಿದೆ. ಮತ್ತು ರುದ್ರನನ್ನು ನಮ್ಮ ಬಂಧುಗಳ ವಿಷಯದಲ್ಲಿಯೂ ಅಪರಾಧಗಳನ್ನು ಮನ್ನಿಸಿ ಪ್ರಸನ್ನನಾಗುವಂತೆ ಪ್ರಾರ್ಥಿಸಲಾಗಿದೆ.

---

## ೩೧. ಹವಿಷ್ಮನ್ತೋ ನಮಸಾ ವಿಧೇಮ

ರುದ್ರಾಧ್ಯಾಯದ ಹತ್ತನೆಯ ಅನುವಾಕದ ೬ನೆಯ ಮಂತ್ರವನ್ನು ಈಗ ವಿಚಾರಮಾಡೋಣ.

**ಮಾ ನಸ್ತೋಕೇ ತನಯೇ ಮಾ ನ ಆಯುಷಿ ಮಾ ನೋ ಗೋಷು ಮಾ ನೋ ಅಶ್ವೇಷು ರೀರಿಷಃ । ವೀರಾನ್ಮಾ ನೋ ರುದ್ರ ಭಾಮಿತೋ ವಧೀರ್ಹವಿಷ್ಮನ್ತೋ ನಮಸಾ ವಿಧೇಮ ತೇ ॥**

"ಎಲೈ ರುದ್ರನೆ, ವಿಹಿತವಾದ ಕರ್ಮವನ್ನು ನಾವು ಮಾಡದೆ ಇರುವದರಿಂದ ಸಿಟ್ಟುಗೊಂಡ ನೀನು ನಮ್ಮ ಮಕ್ಕಳು, ಗಂಡುಕೂಸು, ಆಯುಷ್ಯ, ಗೋವುಗಳು, ಕುದುರೆಗಳು, ವೀರರಾದ ಸೇವಕರು_ಇವರುಗಳನ್ನು ನಾಶಗೊಳಿಸಬೇಡ. ನಾವು ಹವಿಸ್ಸನ್ನುಳ್ಳವರಾಗಿ ನಮಸ್ಕಾರಪೂರ್ವಕವಾಗಿ ನಿನ್ನನ್ನು ಸೇವೆಮಾಡುತ್ತೇವೆ."

ಈ ಮಂತ್ರದಲ್ಲಿ ರುದ್ರನನ್ನು ತಪ್ಪುಗಳನ್ನು ಕ್ಷಮಿಸಿ ಕಾಪಾಡುವಂತೆ ಮತ್ತೊಮ್ಮೆ ಕೇಳಿಕೊಳ್ಳಲಾಗಿದೆ. ಶಾಸ್ತ್ರೋಕ್ತವಾದ ನಿತ್ಯಕರ್ಮಗಳನ್ನು ಅಧಿಕಾರಿಯಾದವನು ಮಾಡಲೇಬೇಕು. ಹಾಗೆ ಮಾಡದಿದ್ದರೆ ದೇವತೆಗಳನ್ನು ತಿರಸ್ಕರಿಸಿದ್ದರ ಫಲವಾಗಿ ದೋಷವು ಬಂದೇತೀರುವದು. ಇದರಿಂದ ರುದ್ರನು ಕೋಪಗೊಳ್ಳುವನು. ಆತನ ಕೋಪವಾದರೊ, ತುಂಬ ತೀಕ್ಷ್ಣವಾದುದು.

ಆದರಿಂದ ನಮ್ಮ ಐಹಿಕಸುಖಗಳೂ ಭೋಗಗಳೂ ನಾಶವಾಗಿಹೋಗುವ ಸಂಭವವಿದೆ. ಇಂಥ ಸಂದರ್ಭದಲ್ಲಿ ಈ ಮಂತ್ರದಿಂದ ರುದ್ರನನ್ನು ಶಾಂತಗೊಳಿಸಲು ಪ್ರಯತ್ನಮಾಡಿದೆ. 'ನಡೆಯುವವನು ಎಡವುತ್ತಾನೆ'–ಎಂದಂತೆ ನಾವು ಯಾವದಾದರೂ ನಿಮಿತ್ತದಿಂದ ಎಂದರೆ ಆಲಸ್ಯ, ಪ್ರಮಾದ, ಅಶ್ರದ್ಧೆ –ಮುಂತಾದ ಕಾರಣಗಳಿಂದ ದೇವತಾರಾಧನಾದಿಗಳನ್ನೂ ಯಜ್ಞಾದಿಗಳನ್ನೂ ಬಿಟ್ಟುಬಿಡುವೆವು. ಆಗ್ಗೆ ರುದ್ರನ ಸಮಾಧಾನಕ್ಕಾಗಿ ತಪ್ಪನ್ನು ಒಪ್ಪಿಕೊಂಡು ಆತನಿಗೇ ಶರಣಾಗತರಾಗಿ ನಮಸ್ಕರಿಸಿಬಿಡಬೇಕು; ಅಂಥ ಸಂದರ್ಭದಲ್ಲಿ ನಾವು ಹವಿಷ್ಮನ್ತರಾಗಬೇಕು. ಹವಿಷ್ಮಂತರು ಎಂದರೆ ಹವಿಸ್ಸು ಎಂಬ ಹೆಸರಿನ ಚರುಪುರೋಡಾಶಾದಿದ್ರವ್ಯಗಳು. ಅವುಗಳನ್ನುಳ್ಳವರಾಗಿ ರುದ್ರನನ್ನು ಉಪಚರಿಸಬೇಕು. ಅಂತೂ ಪೂಜಾಸಾಮಗ್ರಿಗಳೊಡನೆ ಆತನನ್ನು ಸ್ಮರಿಸಿ ಗೌರವಿಸಿ ವಂದನೆಯನ್ನು ಸಲ್ಲಿಸಬೇಕು. ಅನಂತರ ಪ್ರಾರ್ಥನೆಯನ್ನೂ ಮಾಡಿಕೊಳ್ಳಬೇಕು. 'ಎಲೈ ರುದ್ರನೆ, ನೀನು ಈವರೆಗಿನ ನಮ್ಮ ನಡತೆಯಿಂದ ಕುಪಿತನಾಗಿರಬಹುದು. ಅದು ನಮ್ಮ ತಪ್ಪೇ ಹೌದು. ಆದರೆ ಈಗ ಮತ್ತೆ ನಾವು ನಿನ್ನ ಪೂಜೆಗೆ ಸಿದ್ಧರಾಗಿ ಬೇಡುತ್ತಿದೇವೆ. 'ಹಿಂದಕ್ಕೆ ತಪ್ಪು, ಮುಂದಕ್ಕೆ ಬುದ್ಧಿ' ಎಂಬಂತೆ ನಾವು ಈಗ ತಿದ್ದಿಕೊಂಡಿರುವೆವು. ದಯವಿಟ್ಟು ನೀನು ನಮ್ಮ ಮಕ್ಕಳುಮರಿಗಳು, ಹಸುಕರುಗಳು, ಕುದುರೆಗಳು, ಸೇವಕರೇ ಮುಂತಾದ ಯಾವ ಸಂಪತ್ತನ್ನೂ ಹಿಂಸೆಗೊಳಿಸಬೇಡ. ನಮ್ಮ ಆಯುಷ್ಯವನ್ನೂ ಕಳೆಯಬೇಡ' ಎಂದು ಪ್ರಾರ್ಥಿಸಿಕೊಳ್ಳಬೇಕು. ಇದರಿಂದ ರುದ್ರನು ಸಂತುಷ್ಟನಾಗಿ ಸುಮುಖನಾಗುವನು. ಈ ಮಂತ್ರವನ್ನು ವೈದಿಕರು ಹೋಮದ ಅನಂತರ 'ರಕ್ಷೆ' (ಯಜ್ಞೇಶ್ವರನ ಪ್ರಸಾದರೂಪವಾದ ಭಸ್ಮ )ಯನ್ನು ಧಾರಣೆ ಮಾಡುವಾಗ ಉಪಯೋಗಿಸುತ್ತಾರೆ. ರುದ್ರನ ಕೋಪದಿಂದ ಸುಟ್ಟುಹೋದ ವಸ್ತುಗಳು ರುದ್ರನ ಪ್ರಸಾದವಾಗಿ ಮತ್ತೆ ನಮಗೆ ದಕ್ಕಲೆಂದು ಭಾವಿಸಿ ಹೀಗೆ ಆಚರಣೆಯನ್ನು ತಂದಿರಬಹುದು.

ಈಗ ಏಳನೆಯ ಮಂತ್ರದ ಅರ್ಥವನ್ನು ವಿಚಾರಮಾಡೋಣ.

**ಆರಾತ್ತೇ ಗೋಘ್ನ ಉತ ಪೂರುಷಘ್ನೇ ಕ್ಷಯದ್ವೀರಾಯ ಸುಮ್ನಮಸ್ಮೇ ತೇ ಅಸ್ತು। ರಕ್ಷಾ ಚ ನೋ ಅಧಿ ಚ ದೇವ ಬ್ರೂಹ್ಯಧಾ ಚ ನಶ್ಶರ್ಮ ಯಚ್ಛ ದ್ವಿಬರ್ಹಾಃ ॥**

"ಎಳೈ ದೇವನೆ, ಗೋಘ್ನನೂ, ಪೂರುಷಘ್ನನೂ, ಕ್ಷಯದ್ವೀರನೂ ಆದ ನಿನ್ನ ಮಂಗಳಕರನಾದ ರೂಪವಿದೆಯಲ್ಲ, ಅದು ನಮ್ಮ ಸಮೀಪದಲ್ಲಿಯೇ ಇರಲಿ; ಮತ್ತು ನೀನು ನಮ್ಮನ್ನು ಕಾಪಾಡಿ, ನಮ್ಮ ಪಕ್ಷವನ್ನೇ ವಹಿಸಿ ಮಾತನಾಡುವವನಾಗು; ಭೋಗಮೋಕ್ಷಗಳೆಂಬ ಫಲಗಳ ವರ್ಧಕನಾದ ನೀನು ನಮಗೆ ಮೋಕ್ಷಪರ್ಯಂತವಾದ ಸುಖಗಳನ್ನು ನೀಡುವವನಾಗು."

ಈ ಮಂತ್ರದಲ್ಲಿ ರುದ್ರನ ಶಿವವಾದ ಸ್ವರೂಪವು ನಮ್ಮ ಬಳಿಯೇ ಇರಲಿ-ಎಂದು ಕೇಳಿಕೊಳ್ಳಲಾಗಿದೆ. ರುದ್ರನು ಗೋವು, ಪುರುಷರು- ಎಂಬ ಎರಡು ಮತ್ತು ನಾಲ್ಕು ಕಾಲಿನ ಎಲ್ಲಾ ಜೀವರುಗಳನ್ನೂ ಕೊಲ್ಲುವವನು. ಹಾಗೂ ಎಲ್ಲಾ ವೀರರನ್ನೂ ಕ್ಷಯಗೊಳಿಸುವ ಮಹಾವೀರನು. ಈತನಿಗೆ ಸಮರಾದವರೇ ಇಲ್ಲ; ಇನ್ನು ಹೆಚ್ಚಿನವರೆಲ್ಲಿ ಬಂತು ? ಕಠೋಪನಿಷತ್ತಿನಲ್ಲಿ 'ಯಾವನಿಗೆ ಬ್ರಹ್ಮ ಕ್ಷತ್ರಾದಿಭೇದದಿಂದ ಕೂಡಿದ ಜಗತ್ತೇ ಅನ್ನವಾಗಿದೆಯೋ, ಜಗತ್ತನ್ನು ನುಂಗುವ ಮೃತ್ಯುವೆಂಬುವನೇ ಉಪ್ಪಿನಕಾಯಿಯಾಗಿ ಆಗಿಬಿಟ್ಟಿರುವನೋ ಅಂಥವನನ್ನು ಯಾರುತಾನೆ ಎದುರಿಸಬಲ್ಲರು ?' ಎಂದು ಸ್ತುತಿಸಿದೆ. ಇಂಥ ಅಮೋಘವೀರ್ಯನಾದ ರುದ್ರನು ಸಂಹಾರಕಾಲದಲ್ಲಿ ಎಲ್ಲರನ್ನೂ ನಾಶಗೊಳಿಸಬಲ್ಲವನಾಗಿರುತ್ತಾನೆ. ಆದರೆ ಈತನ ಈ ಭಯಂಕರ ರೂಪವು ನಮಗೆ ಮರೆಯಾಗಿರಲಿ; ಇದರ ಬದಲು ಸುಮ್ನ-ಎಂದರೆ ಶಿವವಾದ ರೂಪವೇ ನಮ್ಮೊಡನೆ ಸದಾ ಇದ್ದುಕೊಂಡಿರಲಿ. ರುದ್ರನು ಶಿವನಾಗಿ ನಮ್ಮನ್ನು ಅನುಗ್ರಹಿಸುತ್ತಿರಲಿ-ಎಂದಭಿಪ್ರಾಯ. ಮತ್ತು ಆತನು ನಮ್ಮನ್ನು ರಕ್ಷಿಸಲಿ. "ಎಲೈ ದೇವನೆ, ಸಂಹಾರಮಾಡುವ ಸಾಮರ್ಥ್ಯವುಳ್ಳ ನಿನಗೆ ಬದುಕಿಸುವ ಸಾಮರ್ಥ್ಯವೂ ಇದೆಯಷ್ಟೆ!" ಎಂದು ಭಕ್ತನು ಇಲ್ಲಿ ಕೇಳಿಕೊಂಡಿದ್ದಾನೆ. ಮೃತ್ಯುಂಜಯನು ಅಮೃತೇಶನೂ ಆಗಿದ್ದಾನೆ. ಅದ್ದರಿಂದಲೇ ಅಪಮೃತ್ಯುಭಯವು ಉಂಟಾದಾಗ ಮೃತ್ಯುಂಜಯನನ್ನು ಹೀಗೆ ನೆನೆಯಬೇಕು:—

"ಮೃತ್ಯುಂಜಯಾಯ ರುದ್ರಾಯ ನೀಲಕಂಠಾಯ ಶಂಭವೇ ।
ಅಮೃತೇಶಾಯ ಶರ್ವಾಯ ಮಹಾದೇವಾಯ ತೇ ನಮಃ ॥"

ಎಂಬ ಶ್ಲೋಕವನ್ನು ಕೇಳಿದ್ದೀರಷ್ಟೆ ! ಇಂಥ ಅಮೃತೇಶ್ವರನಾದ ಶಿವನು ಸದಾ ಶಿವನಾಗಿಯೇ ನಮ್ಮೊಡನೆ ಇದ್ದುಕೊಂಡಿರಲಿ, ನಮ್ಮನ್ನು ಕಾಪಾಡಲಿ ! ಎಂದಭಿಪ್ರಾಯ.

ಈಗ ರುದ್ರನನ್ನು ಯಾವಾಗಲೂ "ಅಧಿ-ಬ್ರೂಹಿ, ಪಕ್ಷಪಾತವಚನ ವನ್ನು ಆಡುವವನಾಗು" ಎಂದು ಕೇಳಿರುವದರ ಅಭಿಪ್ರಾಯವನ್ನು ನೋಡೋಣ. ಹಿಂದೊಮ್ಮೆ ಈ ಪ್ರಾರ್ಥನೆಯು ಬಂದಿತ್ತು. ಅಧಿವಚನ-ಎಂದರೆ ವಹಿಸಿಕೊಂಡು ಮಾತನಾಡುವದು. ರುದ್ರನೇ ನಮ್ಮ ಪಕ್ಷವನ್ನು ವಹಿಸಿಕೊಂಡರೆ ನಮಗೆ ಇನ್ನು ಭಯವೆಲ್ಲಿಯದು ? ಆದರೆ ಆತನು ಹಾಗೆ ಪಕ್ಷಪಾತಮಾಡುವದು ಸರಿಯೆ ? ವೈಷಮ್ಯನೈರ್ಘೃಣ್ಯಾದಿದೋಷಗಳು ಪರ ಮೇಶ್ವರನಿಗೆ ಬರುವದಿಲ್ಲವೆ ? ತಪ್ಪಿತಸ್ಥರನ್ನು ವಹಿಸಿಕೊಳ್ಳುವ ದೇವನು ನಿಜವಾಗಿಯೂ ದೇವರೆ ? ಎಂದು ಯಾರಾದರೂ ಕೇಳಬಹುದು. ಆದರೆ ಪರಮೇಶ್ವರನು ನಮ್ಮ ಪಕ್ಷವನ್ನು ವಹಿಸಬೇಕಾದರೆ ನಾವು ಅಪರಾಧಿಗಳೇ ಆಗಿದ್ದರೆ ಎಂದಿಗೂ ವಹಿಸುವದಿಲ್ಲ. ಇಲ್ಲಿ ಸ್ವಾರಸ್ಯವೇನೆಂದರೆ : ನಾವು ಶರಣಾಗತರಾದಕೂಡಲೇ ಪಾಪಗಳೆಲ್ಲ ಸುಟ್ಟುಬೂದಿಯಾಗಿಬಿಡುವದರಿಂದ ನಿರಪರಾಧಿಗಳೇ ಆಗಿಬಿಡುವೆವು. ಆಗ ಭಗವಂತನು ನಮ್ಮ ಪಕ್ಷವನ್ನು ವಹಿಸಿಯೇತೀರುವನು. ಹೀಗೆ ಯಾರುಬೇಕಾದರೂ ಪರಮೇಶ್ವರನಿಗೆ ಶರಣಾಗತರಾಗಿ ಉದ್ಧಾರವಾಗಬಹುದಾಗಿದೆ. ಬೆಂಕಿಯು ತನ್ನ ಹತ್ತಿರ ಬಂದವರಿಗೆ ಚಳಿಯನ್ನು ಕಳೆಯುವಂತೆ ಪರಮೇಶ್ವರನು ತನ್ನನ್ನು ಬಳಿಸಾರಿ ದವರನ್ನು ಉದ್ಧಾರಮಾಡಿಯೇತೀರುವನು. ಅಂಥವನ ಬಗ್ಗೆ ಅಧಿವಚನ ವನ್ನೂ ಆಡುತ್ತಾನೆ. ಹೀಗೆ ಭಗವಂತನು ಭಕ್ತರ ಬಂಧುವಾಗಿದ್ದು ಅವರಿಗೆ ಎಲ್ಲಾ ಸುಖಗಳನ್ನೂ ನೀಡುವವನಾಗಿದ್ದಾನೆ. ಆದ್ದರಿಂದಲೇ ಇಲ್ಲಿ ಭಕ್ತನು -ಭಗವಂತನನ್ನು "ದೇವ, ನನ್ನ ವಿಷಯದಲ್ಲಿ ಪಕ್ಷಪಾತವನ್ನು ವಹಿಸು" ಎಂದು ಕೇಳಿಕೊಂಡಿದ್ದಾನೆ.

ಈಗ 'ದ್ವಿಬರ್ಹಾಃ'ಎಂಬ ವಿಶೇಷಣದ ಅರ್ಥವನ್ನು ನೋಡೋಣ. 'ದ್ವಯೋಃ ಮೋಕ್ಷಸುಖಯೋಃ ಬರ್ಹಯಿತಃ ವರ್ಧಕಃ' ಎಂದು ಭಾಷ್ಯಕಾರರು ಈ ಪದದ ಅರ್ಥವನ್ನು ವಿವರಿಸಿದ್ದಾರೆ. ಭಗವಂತನು ಭೋಗ ಮೋಕ್ಷಗಳೆರಡನ್ನೂ ಕೊಡುವ ಸಾಮರ್ಥ್ಯವುಳ್ಳವನಾದರೂ ಭೋಗವನ್ನು ಕೇಳುವವರೇ ಲೋಕದಲ್ಲಿ ಹೆಚ್ಚಾಗಿರುತ್ತಾರೆ. ಇದರಿಂದ ಪರಮೇಶ್ವರ ನಿಗೇನೂ ಚಿಂತೆಯಿಲ್ಲ. ಭೋಗಗಳನ್ನು ನೀಡಲು ಆತನು ಸದಾ ಸಿದ್ಧನಾಗಿ ಯೇ ಇರುತ್ತಾನೆ. ಅಷ್ಟೇ ಅಲ್ಲ. ತಾನು ಎಲ್ಲ ಭೋಗಗಳನ್ನೂ ತ್ಯಜಿಸಿ

'ವೈರಾಗ್ಯವೇ ಅಭಯ'ವೆಂದು ಸಾರುತ್ತಾ ಭಿಕ್ಷಾಶನನಾಗಿ, ಮೃಗಚರ್ಮ ಧಾರಿಯಾಗಿ ಸ್ಮಶಾನವಾಸಿಯಾಗಿದ್ದಾನೆ. ಹೀಗಿದ್ದರೂ ತ್ರೈಲೋಕ್ಯದ ಐಶ್ವರ್ಯವನ್ನೂ ಕೊಡಲು ಸಮರ್ಥನಾಗಿದ್ದಾನೆ. ದೇವೇಂದ್ರಾದಿಗಳು ಕೂಡ ಪರಮೇಶ್ವರನ ಪ್ರಸಾದದಿಂದಲೇ ತಮ್ಮ ತಮ್ಮ ಸ್ಥಾನಮಾನಸಂಪತ್ತು ಗಳನ್ನು ಪಡೆದುಕೊಂಡಿರುತ್ತಾರೆ. ಅದಕ್ಕಿಂತ ಹೆಚ್ಚಿನ ಮೋಕ್ಷಸುಖವನ್ನೇ ಬಯಸುವವರಿಗೆ–ವಾಮದೇವಾದಿ ಸಿದ್ಧಮುನಿಗಳಿಗೆ–ಮೋಕ್ಷವನ್ನೇ ಅನುಗ್ರಹಿ ಸಿರುತ್ತಾನೆ. ಹೀಗೆ ಭೋಗಮೋಕ್ಷಗಳೆರಡನ್ನೂ ವಿಸ್ತರಿಸಿ ನೀಡುವ ಭಗವಂತ ನು ದ್ವಿಬರ್ಹನೆಂದು ಸ್ತುತಿಸಲ್ಪಡಲು ತಕ್ಕವನೇ ಆಗಿದ್ದಾನೆ. ಆದ್ದರಿಂದ 'ಎಲೈ ದ್ವಿಬರ್ಹನೆ, ನಮಗೆ ಶರ್ಮ–ಸುಖವನ್ನು ಕೊಡು, ಎಂದರೆ ಭೋಗ ಮೋಕ್ಷಗಳೆಂಬ ಎರಡು ವಿಧವಾದ ಸುಖವನ್ನೂ ಆಯಾ ಕಾಲಕ್ಕೆ ನೀನೇ ಅನುಗ್ರಹಿಸು–' ಎಂದು ಈ ಮಂತ್ರದಲ್ಲಿ ಕೇಳಿಕೊಳ್ಳಲಾಗಿದೆ.

---

## ೩೨. ಶಿವೋ ನಃ ಸುಮನಾ ಭವ

ರುದ್ರಾಧ್ಯಾಯದ ಹತ್ತನೆಯ ಅನುವಾಕದ ಎಂಟನೆಯ ಮಂತ್ರವನ್ನು ಈಗ ವಿಚಾರಮಾಡಬೇಕಾಗಿದೆ.

**ಸ್ತುಹಿ ಶ್ರುತಂ ಗರ್ತಸದಂ ಯುವಾನಂ ಮೃಗಂ ನ ಭೀಮ ಮುಪಹತ್ನುಮುಗ್ರಮ್ । ಮೃಡಾ ಜರಿತ್ರೇ ರುದ್ರ ಸ್ತವಾನೋ ಅನ್ಯಂ ತೇ ಅಸ್ಮನ್ನಿವಪಂತು ಸೇನಾಃ ॥**

"ಎಲೈ ಮನಸ್ಸೆ, ಸುಪ್ರಸಿದ್ಧನೂ ಹೃದಯಗುಹೆಯಲ್ಲಿರುವವನೂ ನಿತ್ಯ ತರುಣನೂ ಉಗ್ರನೂ ಆಗಿರುವ, ಮೃಗವನ್ನು ಹೊಡೆಯುವ ಸಿಂಹದಂತಿರುವ ರುದ್ರನನ್ನು ಸ್ತುತಿಸು. ಎಲೈ ರುದ್ರನೆ, ಸ್ತೋತ್ರಮಾಡಲ್ಪಡುವ ನೀನು ಮುಪ್ಪಿನ ಸ್ವಭಾವವುಳ್ಳ, ಈ ಶರೀರದಲ್ಲಿರುವ ನಮ್ಮನ್ನು ಸುಖಗೊಳಿಸುವವ ನಾಗು. (ನಿನ್ನ ಪ್ರಸಿದ್ಧವಾದ) ಸೇನೆಗಳು ನಮಗಿಂತ ಬೇರೆಯಾದ ಶತ್ರು ವನ್ನು ನಾಶಗೊಳಿಸಲಿ !"

ಪರಮೇಶ್ವರನು ಎಲ್ಲರ ಹೃದಯದಲ್ಲಿಯೂ ಇದ್ದುಕೊಂಡಿರುವನು. ವೇದಶಾಸ್ತ್ರಗಳಿಂದ ಪ್ರತಿಪಾದ್ಯನಾಗಿದ್ದು ಪ್ರಸಿದ್ಧನಾಗಿರುವನು. ಜಗತ್ತಿಗೇ

ಒಡೆಯನಾಗಿರುವದರಿಂದ ಎಲ್ಲರಿಗೂ ಪರಿಚಿತನೇ ಆಗಿರುವನು. ಅಜ್ಞಾನಿಗಳಿಗೂ ಆತನು ನಾನುರೂಪವಿಶಿಷ್ಟನಾಗಿ ನಾನಾರೂಪಗಳಿಂದ ತೋರಿಬರುತ್ತಿರುವನು. ಇಂಥ ಮಹಾದೇವನನ್ನು ಸ್ತೋತ್ರಮಾಡುವದು ಪ್ರತಿಯೊಬ್ಬರ ಕರ್ತವ್ಯವೂ ಆಗಿದೆ. ಆದ್ದರಿಂದ ಇಲ್ಲಿ ಮನಸ್ಸಿಗೇ ಸಂಬೋಧಿಸಿ ಆ ಭಗವಂತನನ್ನು ಸ್ತುತಿಸುವಂತೆ ಹೇಳಿದೆ. ಭಗವಂತನನ್ನು ನಿತ್ಯಯುವಕನೆಂದೂ ಇಲ್ಲಿ ಹೊಗಳಿದೆ. ಸಾಮಾನ್ಯವಾಗಿ ದೇವತೆಗಳಿಗೇ ಮುಪ್ಪು ಎಂಬ ಅವಸ್ಥೆಯಿರುವದಿಲ್ಲ. ಇನ್ನು ದೇವದೇವನಾದ ಪರಮೇಶ್ವರನಿಗಂತೂ ಅದು ಇರುವ ಸಂಭವವೇ ಇಲ್ಲ. ಹೀಗೆ ಸ್ತುತ್ಯನೂ ಪೂಜ್ಯನೂ ಆಗಿರುವ ದೇವನನ್ನು ನಾವು ಸ್ತೋತ್ರಮಾಡದೆ ಇದ್ದಲ್ಲಿ ದೊಡ್ಡ ತಪ್ಪಾಗುವದು. ಅಂಥ ಅಪರಾಧಿಗಳನ್ನು ಭಗವಂತನು ಶಿಕ್ಷಿಸುವದೂ ಖಂಡಿತವೆಂದು ತಿಳಿಯಬೇಕು. ಸಿಂಹವು ಜಿಂಕೆಯನ್ನು ಹೊಡೆಯುವಂತೆ, ಅಥವಾ ಮೃಗವೆಂಬ ಶಬ್ದದಿಂದ ಸಿಂಹವನ್ನೇ ತೆಗೆದುಕೊಂಡರೆ ಅದನ್ನೂ ಹೊಡೆಯುವ ಶರಭದಂತೆ–ಮಹಾದೇವನು ಅಪರಾಧಿಗಳನ್ನು ನಾಶಗೊಳಿಸುತ್ತಾನೆಂದರ್ಥ. ಆದರೆ ಅವನು ಉಗ್ರ ಎಂದರೆ ಸಹಿಸಲಸಾಧ್ಯನಾದ್ದರಿಂದ ಅವನನ್ನು ಮಾತ್ರ ಯಾರೂ ಎದುರಿಸಲಾರರು. ಇಂಥ ರುದ್ರನನ್ನು ಸ್ತೋತ್ರಮಾಡಲೇಬೇಕಾದದ್ದು ಎಲ್ಲರ ಮುಖ್ಯಕರ್ತವ್ಯವೂ ಆಗಿದೆ.

ನಮ್ಮ ಶರೀರವು ಜರೆಯಿಂದ (ಮುಪ್ಪಿನಿಂದ) ಆವೃತವಾಗಿರುವದು. ಮುಪ್ಪೆಂಬುದು ಅಪರಿಹಾರ್ಯವಾದ ಅವಸ್ಥೆಯು. ಅದಕ್ಕೆ ಯಾವ ಔಷಧಿಯೂ ಕಂಡುಹಿಡಿಯಲ್ಪಟ್ಟಿಲ್ಲ. ಕೆಲವರಿಗಂತೂ ಮನೋದೌರ್ಬಲ್ಯ, ಹಾಗೂ ಇತರ ದುರಭ್ಯಾಸಗಳಿಂದ ಜಾಗ್ರತೆಯಾಗಿಯೇ ಮುಪ್ಪು ಬಂದುಬಿಡುವದು. ಇಂಥದ್ದರಲ್ಲಿ ನಾವು ಸುಖಪಡುವದು ಯಾವಾಗ? ಅದಕ್ಕಾಗಿ ರುದ್ರನನ್ನು "ಎಲೈ ದೇವನೆ, ಈ ಶರೀರವು ದುರ್ಬಲವಾದುದು; ಆದರೂ ಇದನ್ನೇ ಆಶ್ರಯಿಸಿಕೊಂಡು ಇರುವ ನಮ್ಮನ್ನು ಸುಖಗೊಳಿಸುವನಾಗು" ಎಂದು ಪ್ರಾರ್ಥಿಸಿದೆ. ಈ ಶರೀರವು ಅನಿತ್ಯವಾದರೂ, ಮುಪ್ಪಿಗೆ ತುತ್ತಾಗುತ್ತದೆಯಾದರೂ ಬದುಕಿರುವಷ್ಟುಕಾಲವಾದರೂ ನಾವು ರೋಗವಿಲ್ಲದವರಾಗಿ ದೃಢಕಾಯರಾಗಿ, ಸುಖಿಗಳಾಗಿರುವಂತೆ ದಯಪಾಲಿಸು– ಎಂಬಿದು ಈ ಪ್ರಾರ್ಥನೆಯ ಅಭಿಪ್ರಾಯ. ಹಾಗಾದರೆ ರೋಗರುಜಿನಾದಿಗಳಿಗೆ ಅಧಿಪತಿಗಳಾದ ರುದ್ರರೇನುಮಾಡಬೇಕು? ಅವರು ನಿರುದ್ಯೋಗಿಗಳಾಗುವದಿಲ್ಲವೆ? ಎಂದರೆ ಆ ಸೇನಾಸಮೂಹಗಳು

ನಮ್ಮ ಶತ್ರುಗಳನ್ನು ಹಿಂಸಿಸಲಿ-ಎಂದು ಕೇಳಿಕೊಳ್ಳಲಾಗಿದೆ. ಆದ್ದರಿಂದ ರುದ್ರಭಕ್ತನನ್ನು ದ್ವೇಷಿಸುವವನಿಗೆ ಕೇಡು ಎಂದಿಗೂ ತಪ್ಪಿದ್ದಲ್ಲ ಎಂದು ಎಚ್ಚರಿಸಲಾಗಿದೆ.

ಈಗ ಒಂಭತ್ತನೆಯ ಮಂತ್ರವನ್ನು ವಿಚಾರಮಾಡೋಣ :

**ಪರಿ ಣೋ ರುದ್ರಸ್ಯ ಹೇತಿರ್ವೃಣಕ್ತು ಪರಿ ತ್ವೇಷಸ್ಯ ದುರ್ಮತಿರಘಾಯೋಃ । ಅವ ಸ್ಥಿರಾ ಮಘವದ್ಭ್ಯಸ್ತನುಷ್ವ ಮೀಢ್ವಸ್ತೋಕಾಯ ತನಯಾಯ ಮೃಡಯ ॥**

"ಅಘಾಯುವಾದ ರುದ್ರನ ಹನನಬುದ್ಧಿಯು ನಮ್ಮಿಂದ ದೂರವಾಗಲಿ; ರುದ್ರನ ಆಯುಧವು ನಮ್ಮನ್ನು ಕೈಬಿಡಲಿ; ಎಲೈ ಮೀಢ್ವನೆ, ನಿನ್ನ ಸ್ಥಿರ ವಾದ ಬುದ್ಧಿ ಹಾಗೂ ಆಯುಧವನ್ನು ಪಾಪವಂತರಾದ ನಮ್ಮ ವಿಷಯದಲ್ಲಿ ಕೆಳಗೆ ಇಳಿಸುವವನಾಗು; ಮತ್ತು ನಮ್ಮ ಮಕ್ಕಳಿಗೆ ಎಂದರೆ ವಿಶೇಷವಾಗಿ ಮಗನಿಗೆ ಸುಖವಾಗುವಂತೆ ಮಾಡು"

ಅಘಾಯುವೆಂದರೆ: ಅಘ- ಪಾಪಗಳ ನಿಮಿತ್ತವಾಗಿ ಕೋಪಗೊಳ್ಳುವ ಸ್ವಭಾವದವನಾದ ರುದ್ರನು ಎಂದರ್ಥ. ಕುಪಿತನಾದ ರುದ್ರನಿಗೆ ನಮ್ಮನ್ನು ಹೊಡೆಯುವ ದುರ್ಮತಿಯು ಉಂಟಾಗುವದು. ಅದರಿಂದ ನಮ್ಮ ಇಹಪರ ಸೌಖ್ಯಗಳೆಲ್ಲ ಹಾಳಾಗುವವು. ಆದ್ದರಿಂದ ರುದ್ರನಿಗೆ ನಮ್ಮನ್ನು ಶಿಕ್ಷಿಸುವ ಬುದ್ಧಿಯು ಬರದಿರಲಿ-ಎಂದು ಕೇಳಲಾಗಿದೆ. ಇಲ್ಲಿ ಬುದ್ಧಿಯ ಪ್ರಾರ್ಥನೆಯ ಜೊತೆಗೆ ಆಯುಧಗಳನ್ನೂ ಹಿಂತೆಗೆದುಕೊಳ್ಳುವಂತೆ ಬೇಡಿದೆ. ಏಕೆಂದರೆ ಆಯುಧಗಳು ಕೈಯಲ್ಲಿದ್ದು ಹೊಡೆಯುವ ಬುದ್ಧಿಯೂ ಇದ್ದುಕೊಂಡುಬಿಟ್ಟರೆ ನಮ್ಮಂಥ ಪಾಪಿಗಳ ಗತಿ ಏನಾಗಬೇಕು ? "ಹರ ಕೊಲ್ಲಲ್ ಪರ ಕಾವನೆ ?" ಎಂದಂತೆ ಪರಮೇಶ್ವರನೇ ಸಂಹಾರಮಾಡಲೆಳಸಿದರೆ ತಡೆಯುವವರಾರು ? ಆದ್ದರಿಂದ ಸಂಹಾರಬುದ್ಧಿಯೇ ಆತನಿಗೆ ಬರದಂತೆ ಇರಲೆಂದು ಇಲ್ಲಿ ಪ್ರಾರ್ಥಿಸಿದೆ. ಮಘವಂತರು ಎಂದರೆ ಸ್ತುತಿ, ನಮಸ್ಕಾರ ಮುಂತಾದ ರೂಪದಿಂದ ಪರಮೇಶ್ವರನನ್ನು ಪೂಜಿಸುವವರು ಎಂದರ್ಥ. ಮಹಾದೇವನ ಪೂಜಾದಿಗಳಲ್ಲಿ ನಿರತರಾದ ನಮ್ಮಗಳ ವಿಷಯದಲ್ಲಿ 'ಎಲೈ ರುದ್ರನೆ, ಈಗ ನೀನು ಆಯುಧಗಳನ್ನು ಹಿಂತೆಗೆದುಕೊಳ್ಳುವವನಾಗು' ಎಂದು ಕೇಳಿದೆ. ಆಯುಧಗಳು ಸ್ಥಿರಾ

–ಎಂದರೆ ಅಮೋಘವಾದವುಗಳೇನೋ ಹೌದು. ಆದರೂ ಶರಣಾಗತರನ್ನು ಕಾಪಾಡುವ ಕೃಪಾಳುವಾದ ನೀನು ಅಂಥ ಅಮೋಘಾಯುಧಗಳನ್ನೂ ಸಹ ಶಾಂತಗೊಳಿಸುವವನಾಗು-ಎಂದು ಪ್ರಾರ್ಥಿಸಲಾಗಿದೆ. ಏಕೆಂದರೆ ನೀನು ಮೀಢ್ವನು. ವಂದಿಸಿದವರಿಗೆ ಇಷ್ಟಾರ್ಥಗಳನ್ನೂ ಕೊಡುವಾತನು. ಮತ್ತು ನಮ್ಮಗಳ ತೋಕಾಯ- ಮಕ್ಕಳ ಗುಂಪಿಗೂ, ವಿಶೇಷವಾಗಿ ತನಯಾಯ –ಮಗನಿಗೂ ಸುಖವನ್ನು ಕೊಡುವವನಾಗು. ಮಕ್ಕಳ ಸುಖವು ತಂದೆತಾಯಿ ಗಳನ್ನೇ ಅವಲಂಬಿಸಿರುತ್ತದೆ. ಹಾಗೆಯೇ ತಂದೆತಾಯಿಗಳಿಗೆ ಏನಾದರೂ ಲಾಭವಾದರೆ, ಅದನ್ನು ಮಕ್ಕಳ ಯೋಗ–ಎನ್ನುತ್ತಾರೆ. ಒಬ್ಬ ತಾಯಿಯು ಕಾಹಿಲೆಯಾಗಿದ್ದವಳು ಬದುಕಿಕೊಂಡರೆ ಮಕ್ಕಳ ಪುಣ್ಯ-ಎನ್ನುವರು. ಆದ್ದ ರಿಂದ ರುದ್ರನು ಮಕ್ಕಳನ್ನು ಸುಖಗೊಳಿಸಬೇಕಾದರೆ ಅವರ ಮಾತಾಪಿತೃ ಗಳನ್ನು ಕಾಪಾಡಲೇಬೇಕು. ಆದಕ್ಕಾಗಿ ಇಲ್ಲಿ ಮಕ್ಕಳನ್ನು ಸುಖಗೊಳಿಸು- ಎಂದು ಬೇಡಿದೆ. ಮಗನನ್ನು ಸುಖಗೊಳಿಸು ಎಂಬ ವಿಶೇಷಪ್ರಾರ್ಥನೆಯು ಮಗನು ಜೀವತ್- ಪಿತೃಕನಾಗಿರಲಿ- (ಬದುಕಿರುವ ತಂದೆಯುಳ್ಳವನಾಗಿರಲಿ) ಎಂಬರ್ಥದಲ್ಲಿ ಬಂದಿದೆ. ಏಕೆಂದರೆ ಚಿಕ್ಕಂದಿನಲ್ಲಿಯೇ ಮಗನಿಗೆ ಪ್ರೇತಕರ್ಮ ಯೋಗವು ಬಂದರೆ ತಂದೆಯು ಸಾಯುವನು ನಿಶ್ಚಿತ. ಹಾಗಾಗದಿರಲೆಂದು ರುದ್ರನನ್ನು ಪ್ರಾರ್ಥಿಸಿದೆ.

ಈಗ ಹತ್ತನೆಯ ಮಂತ್ರವನ್ನು ವಿಚಾರಮಾಡೋಣ :

**ಮೀಢುಷ್ಟಮ ಶಿವತಮ ಶಿವೋ ನಸ್ಸುಮನಾ ಭವ । ಪರಮೇ ವೃಕ್ಷ ಆಯುಧಂ ನಿಧಾಯ ಕೃತ್ತಿಂ ವಸಾನ ಆಚರ ಪಿನಾಕಂ ಬಿಭ್ರದಾಗಹಿ ॥**

"ಎಲೈ ಮೀಢುಷ್ಟಮನೆ, ಶಿವತಮನೆ, ನಮ್ಮಗಳಿಗೆ ಶಿವನೂ ಸುಮನಸ್ಕ ನೂ ಆಗು. ಅತ್ಯುನ್ನತವಾದ ವೃಕ್ಷದಲ್ಲಿ ನಿನ್ನ ಆಯುಧಗಳನ್ನು ಇಟ್ಟು ನಮ್ಮ ಬಳಿಗೆ ಬರುವವನಾಗು. ಹಾಗೆ ಬರುವಾಗ ಹುಲಿಯ ಚರ್ಮವನ್ನು ಉಟ್ಟು (ಅಲಂಕಾರಕ್ಕಾಗಿ) ಪಿನಾಕಧನುಸ್ಸನ್ನು ಹಿಡಿದು ಬಾ."

ಇಲ್ಲಿ ಪರಮೇಶ್ವರನನ್ನು ಅತಿಶಯವಾಗಿ ಇಷ್ಟಾರ್ಥಗಳನ್ನು ನೀಡುವವನು ಎಂಬರ್ಥದಲ್ಲಿ ಮೀಢುಷ್ಟಮನೆಂದು ಕರೆದಿದೆ. ಹಾಗೆಯೇ ಪರಮಶ್ರೇಯ

ಸ್ಸನ್ನುಂಟುಮಾಡುವವನಾದ್ದರಿಂದ ಶಿವತಮನೆಂದೂ ಸಂಬೋಧಿಸಲಾಗಿದೆ. ಇಂಥ ರುದ್ರನನ್ನು ನಮ್ಮಗಳಿಗೆ ಮಂಗಳಕಾರಕನೂ ಸುಪ್ರೀತನೂ ಆಗಿ ಅನುಗ್ರಹಿಸು–ಎಂದು ಬೇಡಿಕೊಳ್ಳಲಾಗಿದೆ. ಹೀಗೆ ಅನುಗ್ರಹಮಾಡುವಾಗ ಭಗವಂತನು ತನ್ನ ಭಯಂಕರವಾದ ಆಯುಧಗಳನ್ನೆಲ್ಲ ಕೈಲಾಸದಲ್ಲಿರುವ ದೊಡ್ಡ ಆಲದಮರದಲ್ಲಿಯೇ ಇಟ್ಟುಬರಬೇಕೆಂದು ಕೇಳಿಕೊಂಡಿದೆ. ಕೈಲಾಸ ಲೋಕದಲ್ಲಿರುವ ಆ ನ್ಯಗ್ರೋಧವೃಕ್ಷವು ನೂರು ಯೋಜನಗಳಷ್ಟು ಎತ್ತರವಾಗಿಯೂ ನೂರ ಎಪ್ಪತ್ತೈದು ಯೋಜನಗಳಷ್ಟು ಅಗಲವಾಗಿಯೂ ಇದ್ದುಕೊಂಡು ಸುತ್ತಲೂ ಸೊಗಸಾದ ನೆರಳನ್ನು ಹರಡಿದೆಯಂತೆ. ಅಲ್ಲಿ ಸೆಕೆಯಾಗಲಿ ಅಶುಚಿಯಾಗಲಿ ಇರುವದಿಲ್ಲ. ಬಹಳ ಪರಿಶುದ್ಧವಾದ ಸ್ಥಳವದು. ಮಹಾಮಹಿಮರಾದ ಮುಮುಕ್ಷುಗಳು ಅಲ್ಲಿ ಒಂದುಕಡೆ ಸೇರಿ ಪರಶಿವನನ್ನು ಧ್ಯಾನಿಸುತ್ತಾ ಇರುವರು. ಭಗವಂತನು ಅವರಿಗೆಲ್ಲ ದರ್ಶನವನ್ನು ಅಲ್ಲಿಯೇ ನೀಡುವನು. ಆದ್ದರಿಂದ ಆ ವೃಕ್ಷಕ್ಕೆ ಪರಮವೃಕ್ಷವೆಂದೇ ಹೆಸರಿದೆ. ಇಂಥ ಪರಮವೃಕ್ಷದಲ್ಲಿ ಮಹಾದೇವನು ತನ್ನ ಭಯಂಕರವಾದ ಆಯುಧಗಳನ್ನೆಲ್ಲ ತೆಗೆದಿಟ್ಟು ಬರಬೇಕೆಂತ ಕೇಳಿಕೊಳ್ಳಲಾಗಿದೆ. ಮತ್ತು ಆತನು ಪಿನಾಕ ಧನುಸ್ಸನ್ನು ಮಾತ್ರ ಅಲಂಕಾರಕ್ಕಾಗಿ ಕೈಯಲ್ಲಿ ಹಿಡಿದುಕೊಂಡುಬರಲಿ-ಎಂದು ಪ್ರಾರ್ಥಿಸಿದೆ. ಭಗವಂತನ ಈ ರೂಪವೇ ಶ್ರೇಯಸ್ಕರವು-ಎಂದಭಿಪ್ರಾಯ. ಮತ್ತು ಆತನು ಹುಲಿಯ ಚರ್ಮವನ್ನುಟ್ಟು ಬರಬೇಕು– ಎಂಬುದೂ ಭಕ್ತನ ಮತ್ತೊಂದು ಬಯಕೆ. ಏಕೆಂದರೆ 'ಕೃತ್ತಿವಾಸನೂ ಪಿನಾಕಿಯೂ ಆದವನೇ ಪ್ರಾಣೇಶ್ವರನು'– ಎಂದು ವೇದಗಳಲ್ಲಿ ಹೊಗಳಿರುವದರಿಂದ ಅಂಥ ರೂಪವೇ ಮಂಗಳಕರವೆಂದು ಭಕ್ತನ ಅಭಿಪ್ರಾಯವು. ಕೃತ್ತಿ ಎಂದರೆ ಆನೆಯ ಚರ್ಮವೆಂಬರ್ಥವೂ ಇದೆ. ಎರಡೂ ಆಗಬಹುದು. ಭಾಷ್ಯಾನುಸಾರವಾಗಿ ವ್ಯಾಘ್ರ ಚರ್ಮವೆಂದು ವ್ಯಾಖ್ಯಾನಮಾಡಲಾಗಿದೆ.

ಇಲ್ಲಿ ಪರಮೇಶ್ವರನು ಆನೆಯ ಅಥವಾ ಹುಲಿಯ ಚರ್ಮವನ್ನುಟ್ಟು ದರ್ಶನವನ್ನು ಕೊಡಲಿ ಎಂದು ಕೇಳಿಕೊಂಡಿರುವದರಿಂದ ಆತನಿಗೆ ವಸ್ತ್ರದ ಅಭಾವವಿರಬಹುದೆ ? ಮತ್ತೆ ಕೆಲವುಕಡೆ ಭಗವಂತನನ್ನು ದಿಗಂಬರನೆಂದೂ ವರ್ಣಿಸಿರುತ್ತದೆ. ಆತನ ವಾಸಸ್ಥಾನವು ಶ್ಮಶಾನವೂ ಮೈಗೆಲ್ಲ ಭಸ್ಮವನ್ನು

ಲೇಪಿಸಿಕೊಂಡಿರುವದೂ ಕೈಯಲ್ಲಿ ಭಿಕ್ಷಾಪಾತ್ರೆಯಿರುವದೂ ಆತನು ದರಿದ್ರನೆಂಬುದರ ಕುರುಹಾಗಿರಬಹುದೆ? ಎಂದು- ಅಜ್ಞರು ಭಾವಿಸಬಹುದು. ಆದರೆ ಹಾಗಿಲ್ಲ. ಆತನು ಸರ್ವೇಶ್ವರನು. ನವನಿಧಿಗಳೊಡೆಯನಾದ ಕುಬೇರನೇ ಆತನ ಮಿತ್ರನು. ಸರ್ವಮಂಗಳೆಯೂ ಸಕಲೈಶ್ವರ್ಯಸಂಪನ್ನಳೂ ಆದ ಗಿರಿರಾಜಪುತ್ರಿಯೇ ಆತನ ಪತ್ನಿಯು. ಹೀಗಿರುವಲ್ಲಿ ಅವನಿಗೆ ಬಟ್ಟೆಯ ಅಭಾವವು ಚರ್ಮಧಾರಣೆಗೆ ಕಾರಣವಾಗಲಾರದು. ಮತ್ತೇನೆಂದರೆ: ಬೇಕಾದವರಿಗೆ ಬೇಕಾದಷ್ಟು ಐಶ್ವರ್ಯವನ್ನು ಕೊಡುವ ಆತನು ತ್ರೈಲೋಕ್ಯದ ಐಶ್ವರ್ಯಕ್ಕಿಂತಲೂ ವೈರಾಗ್ಯವೆಂಬುದೇ ಹೆಚ್ಚಿನ ಐಶ್ವರ್ಯವೆಂದೂ ಆತ್ಮಾನಂದರೂಪದಲ್ಲಿ ನೆಲೆನಿಂತಿರುವವನಿಗೆ ಬಾಹ್ಯವಿಷಯಗಳ ಆವಶ್ಯಕತೆಯಿಲ್ಲವೆಂದೂ ತಿಳಿಸುವದಕ್ಕಾಗಿ ಹೀಗೆ ಮೃಗಚರ್ಮವನ್ನು ಧರಿಸಿದ್ದಾನೆ. ಮತ್ತು ಭಗವಂತನು ಧರಿಸಿದ ಪದಾರ್ಥಗಳೆಲ್ಲವೂ ಪವಿತ್ರವೆನಿಸಿ ಲೋಕದಲ್ಲಿ ಹೆಚ್ಚುಗಾರಿಕೆಯನ್ನು ಪಡೆಯುವವು. ಅವುಗಳಿಗೆ ಗೌರವವೂ ಸಲ್ಲುವದು. ಆದ್ದರಿಂದ ಗಜಾಸುರನ ಪ್ರಾರ್ಥನೆಯಂತೆ ಆತನ ಚರ್ಮವನ್ನು ಭಗವಂತನು ಹೊದೆದುಕೊಂಡನು. ವಿಷಪೂರಿತವಾದ ಹಾವುಗಳನ್ನು ಆಭರಣವಾಗಿ ಧರಿಸಿದನು- ಇತ್ಯಾದಿ. ಹೀಗೆ ಭಗವಂತನ ಪರಮವಾದ ವೈರಾಗ್ಯವೂ ತೃಷ್ಣಾರಾಹಿತ್ಯವೂ ಆತ್ಮತೃಪ್ತಿಯೂ, ಉದಾರತೆಯೂ, ಭಕ್ತಾನುಗ್ರಹತತ್ಪರತೆಯೂ ಪ್ರಕಟವಾಗುವ ಈ ರೂಪವು ಸಕಲರಿಗೂ ಧ್ಯೇಯವಾಗಿದೆ. ಅದನ್ನು ಈ ಮಂತ್ರದಲ್ಲಿ ತಿಳಿಸಿ ಭಗವಂತನ ಸ್ತುತಿಮಾಡಿದೆ. ಸ್ವಾತ್ಮಾರಾಮನಾದ ಮಹಾದೇವನಿಗೆ ವಿಷಯಲಾಭಗಳ ಆಶೆಯಿರುವದಿಲ್ಲವೆಂದೂ ಆತನು ಉಪಶಾಂತಸ್ವರೂಪನೆಂದೂ ಭಾವಿಸಿ ಕೃತ್ತಿಯನ್ನು ಧರಿಸಿ ಬರುವಂತೆ ಇಲ್ಲಿ ಬೇಡಿಕೊಂಡಿದೆ.

ಇನ್ನು ಪಿನಾಕಪಾಣಿಯಾಗಿ ಬರುವದರ ಔಚಿತ್ಯವೇನೆಂದರೆ : ಪಿನಾಕ ಎಂಬ ಹೆಸರಿನ ವ್ಯುತ್ಪತ್ತಿಯಂತೆ ಭಕ್ತರನ್ನು ಕಾಪಾಡುವದೇ ಅದರ ಧಾರಣೆಯ ಉದ್ದೇಶವಾಗಿರುವದು. ಅದನ್ನು ಹಿಡಿದು ಬರುವ ಮಹಾದೇವನು ತನ್ನ ಆಶ್ರಿತರಲ್ಲಿ ಪ್ರೇಮವುಳ್ಳವನಾಗಿಯೇ ಇರುತ್ತಾನೆಂಬುದು ಸ್ಪಷ್ಟ. ಅಂತೂ ಪ್ರೀತಿಚಿಹ್ನೆಯಾದ ಪಿನಾಕವನ್ನು ಹಿಡಿದು ಭಗವಂತನು ತೋರಿಕೊಳ್ಳಲೆಂದು ಇಲ್ಲಿ ಕೇಳಿಕೊಂಡಿರುವದು ಸಮಂಜಸವಾಗಿಯೇ ಇದೆ-ಎಂದು ತಿಳಿಯಬೇಕು.

# ೩೩. ನಮಸ್ತೇ ಅಸ್ತು ಭಗವಃ

ರುದ್ರಾಧ್ಯಾಯದ ಹತ್ತನೆಯ ಅನುವಾಕದ ಹನ್ನೊಂದನೆಯ ಮಂತ್ರವನ್ನು ಈಗ ವಿಚಾರಮಾಡಬೇಕಾಗಿದೆ.

ವಿಕಿರಿದ ವಿಲೋಹಿತ ನಮಸ್ತೇ ಅಸ್ತು ಭಗವಃ । ಯಾಸ್ತೇ ಸಹಸ್ರಗ್ಂ ಹೇತಯೋಽನ್ಯಮಸ್ಮನ್ನಿವಪಂತು ತಾಃ ॥

"ಪಾಪಾದಿಗಳನ್ನು ಖಂಡನೆಮಾಡುವವನೆ, ನಸುಗೆಂಪಾದ ಬಣ್ಣವುಳ್ಳವನೆ, ಷಡ್ಗುಣೈಶ್ವರ್ಯಸಂಪನ್ನನೆ, ನಿನಗೆ ನಮಸ್ಕಾರ! ಯಾವ ನಿನ್ನ ಲೆಕ್ಕವಿಲ್ಲದಷ್ಟು ಸಂಖ್ಯೆಯ ಆಯುಧಗಳುಂಟೋ ಅವೆಲ್ಲವೂ ನಮ್ಮನ್ನು ಹೊರತಾಗಿ ಬೇರೆಯವುಗಳನ್ನು (ಪಾಪಾದಿಗಳನ್ನು) ನಾಶಗೊಳಿಸಲಿ!"

ಈ ಮಂತ್ರದಲ್ಲಿ ಭಗವಂತನನ್ನು ಮೂರು ವಿಶೇಷಣಗಳಿಂದ ಸಂಬೋಧಿಸಿದೆ. ವಿಕಿರಿದ-ಎಂಬುದು ಮೊದಲನೆಯದು. ಕಿರನ್ತಿ- ಎಂದರೆ ಹಿಂಸೆ ಮಾಡುತ್ತವೆ-ಎಂದರ್ಥ. ಆ ಮೂಲಕ ನಮಗೆ ತೊಂದರೆಯನ್ನುಂಟುಮಾಡುವ ಪಾಪ, ರೋಗ, ದಾರಿದ್ರ್ಯಾದಿಗಳು ಉಂಟಷ್ಟೆ! ಅವುಗಳನ್ನು ತುಂಡುಮಾಡುತ್ತಾನಾದ್ದರಿಂದ ಭಗವಂತನಿಗೆ ವಿಕಿರಿದನೆಂದು ಹೆಸರು. ಹಾಗೆಯೇ ವಿಲೋಹಿತನು. ನಸುಗೆಂಪಿನಿಂದ ಕೂಡಿದ ಶುದ್ಧವರ್ಣವುಳ್ಳವನು. ಮತ್ತು ಭಗವನು- ಎಂದರೆ ಷಡ್ಗುಣೈಶ್ವರ್ಯಸಂಪನ್ನನು. ಭೂತಗಳ ಉತ್ಪತ್ತಿ, ನಾಶ, ಬರುವಿಕೆ, ಹೋಗುವಿಕೆ, ವಿದ್ಯೆ, ಅವಿದ್ಯೆ- ಇವುಗಳನ್ನು ಯಾವನು ಬಲ್ಲನೋ ಅವನು ಭಗವನೆಂದು ಪುರಾಣವಚನವಿದೆ. ಮತ್ತು ಜ್ಞಾನ, ಶಕ್ತಿ, ಬಲ, ಐಶ್ವರ್ಯ, ವೀರ್ಯ, ತೇಜಸ್ಸುಗಳು ಯಾವಾತನಲ್ಲಿ ಶಾಶ್ವತವಾಗಿ ಅಪರಿಮಿತವಾಗಿ ಹೇಯಗುಣರಹಿತವಾಗಿದ್ದುಕೊಂಡಿರುವವೋ ಅವನು ಭಗವಂತನೆಂದೂ ಹೊಗಳಿದೆ. ಇಂಥ ಭಗವಂತನಾದ ರುದ್ರನನ್ನು 'ಎಲೈ ರುದ್ರನೆ, ನೀನು ಆಯುಧಗಳನ್ನು ಪಾಪಗಳ ನಾಶಕ್ಕಾಗಿ ಪ್ರಯೋಗಿಸುವವನಾಗು ; ನಮ್ಮಮೇಲೆ ಬೇಡ' ಎಂದು ಪ್ರಾರ್ಥಿಸಲಾಗಿದೆ. ಭಗವಂತನ ಆಯುಧಗಳ ಸಂಖ್ಯೆಗೆ ಲೆಕ್ಕವೇ ಇಲ್ಲ.. ಹಾಗೆಯೇ ನಾವು ಮಾಡಿರುವ ಪಾಪಗಳ ಸಂಖ್ಯೆಯೂ ಲೆಕ್ಕಕ್ಕೆ ಸಿಗುವಂತಿಲ್ಲ. ಆದ್ದರಿಂದ ಅನಂತಾಯುಧಧಾರಿಯಾದ ಆತನ ಹೊರತು ಪಾಪಗಳನ್ನು ನಾಶಮಾಡುವಂಥ ಸಮರ್ಥರು

ಬೇರೆ ಯಾರಿದ್ದಾರೆ? ಹೀಗೆ ಆತನು ಮತ್ತೆಮತ್ತೆ ನಮ್ಮ ಪಾಪಗಳನ್ನು ನಾಶಗೊಳಿಸುತ್ತಿದ್ದಾನಾದರೂ ನಾವು ಪಾಪಗಳನ್ನು ಮಾಡುತ್ತಲೇ ಇದೇವೆ. ಇದಕ್ಕಾಗಿ ಪ್ರತಿನಿತ್ಯವೂ ಆತನನ್ನು ಬೇಡಿಕೊಳ್ಳಬೇಕಾಗಿದೆ. ಹೀಗೆ ಪಾಪಗಳನ್ನು ನಾಶಗೊಳಿಸಿ ನಮ್ಮನ್ನು ಉದ್ಧಾರಮಾಡುತ್ತಿರುವ ಆತನಿಗೆ ನಾವು ಕೊಡುವದಾದರೂ ಏನು ? ಅವನು ಆಪ್ತಕಾಮನಲ್ಲವೆ ? ಅವನಿಗೆ ಬಯಕೆಯೊದರೂ ಏನಿದ್ದೀತು ? ಆದ್ದರಿಂದ 'ಎಲೈ ಭಗವನೆ, ನಿನಗೆ ನಮಸ್ಕಾರವೊಂದೇ ನಮ್ಮ ಕಾಣಿಕೆ'- ಎಂದು ಭಕ್ತನು ನಿವೇದಿಸುತ್ತಿದ್ದಾನೆ. ಒಂದು ರೀತಿಯಿಂದ ನೋಡಿದರೆ ನಮಸ್ಕಾರಕಿಂತ ಹೆಚ್ಚಿನ ಕಾಣಿಕೆ ಯಾವದೂ ಇರುವದಿಲ್ಲ. ಇದನ್ನೇ 'ನಮಸ್ತೇ ಅಸ್ತು ಭಗವಃ' ಎಂದು ಹಾಡಿದೆ.

ಈಗ ಹನ್ನೆರಡನೆಯ ಮಂತ್ರವನ್ನು ವಿಚಾರಮಾಡೋಣ.

**ಸಹಸ್ರಾಣಿ ಸಹಸ್ರಧಾ ಬಾಹುವೋಸ್ತವ ಹೇತಯಃ । ತಾಸಾಮೀಶಾನೋ ಭಗವಃ ಪರಾಚೀನಾ ಮುಖಾ ಕೃಧಿ ॥**

"ಎಲೈ ಭಗವಂತನೆ, ನಿನ್ನ ಬಾಹುಗಳಲ್ಲಿ ಸಾವಿರಾರು ವಿಧವಾದ, ಸಾವಿರಾರು ಆಯುಧಗಳಿದ್ದುಕೊಂಡಿರುವವು. ನೀನು ಸರ್ವೇಶ್ವರನಾದ್ದರಿಂದ ಅವುಗಳನ್ನು ಕೆಳಮುಖವಾಗಿ ಮಾಡುವವನಾಗು"

ಇಲ್ಲಿ ಭಗವಂತನನ್ನು ಅಯುಧಗಳನ್ನು ಶಮನಗೊಳಿಸುವಂತೆ ಮತ್ತೊಮ್ಮೆ ಪ್ರಾರ್ಥಿಸಲಾಗಿದೆ. ಆಯುಧಗಳು ಪ್ರತಿಯೊಂದೂ ಶಕ್ತಿರೂಪವಾಗಿರುವವು. ಒಂದೊಂದಕ್ಕೂ ಒಬ್ಬೊಬ್ಬ ಆಧಿಷ್ಠಾತೃದೇವತೆಗಳಿರುತ್ತಾರೆ. ಆ ಎಲ್ಲಾ ದೇವತೆಗಳನ್ನೂ ತನ್ನ ಸ್ವಾಧೀನದಲ್ಲಿಟ್ಟುಕೊಂಡಿರುವದರಿಂದಲೇ ಭಗವಂತನು ಈಶಾನನೆನಿಸಿರುತ್ತಾನೆ. ಆಯುಧಗಳನ್ನು ಯಾವಾಗಲೂ ಧರಿಸಿಕೊಂಡಿರುವದೂ ಸರ್ವಶಕ್ತನಾದ ಭಗವಂತನಿಗೆ ಮಾತ್ರವೇ ಸಾಧ್ಯ. ನಾವು ಹಾಗೆ ಏನನ್ನೂ ಯಾವಾಗಲೂ ಹಿಡಿದುಕೊಂಡಿರಲಾಗುವದಿಲ್ಲ. ಆಯಾಸವಾದಾಗ ನಾವು ಹಿಡಿದಿರುವದನ್ನು ಕೆಳಕ್ಕೆ ಹಾಕಿಬಿಡುತ್ತೇವೆ. ನಿದ್ರೆ ಬಂದಾಗ ಶರೀರವನ್ನು ಕೂಡ ಬಿಸುಟು ಹಗುರವಾಗಿರುತ್ತೇವೆ. ಹೀಗಿರುವಲ್ಲಿ ಎಂದೆಂದೂ ಆಯುಧಗಳನ್ನು ಹೊತ್ತೇ ಇರುವ ರುದ್ರನು ಎಂಥ ಗಟ್ಟಿಗನಿರಬೇಕು ? ಅದು ಕೂಡ ಅವು ಲೆಕ್ಕವಿಲ್ಲದಷ್ಟು ಸಂಖ್ಯೆಯುವು. ಅಮೋಘಶಕ್ತಿಯಿಂದ ಕೂಡಿರು

ವಂಥವು. ಇವುಗಳನ್ನೆಲ್ಲ ಉಪಯೋಗಿಸಲು ತಕ್ಕವಾಗಿರುವಂತೆ ಸದಾ ಕಾಲವೂ ಸಜ್ಜುಗೊಳಿಸಿ ಸುಸ್ಥಿತಿಯಲ್ಲೇ ಇಟ್ಟುಕೊಂಡಿರಬೇಕಾದರೆ ಆ ರುದ್ರನ ಮಹಿಮೆ ಎಂಥದ್ದಿರಬೇಕು ? ದೇವರಿಗೆ ನಾವು ಅಲಂಕಾರಮಾಡಿ ಒಡವೆ ಹೂಹಾರಗಳನ್ನು ಹೇರಿಬಿಡುತ್ತೇವೆ. ಕಣ್ಣು ಕೋರೈಸುವ ದೀಪಗಳನ್ನು ಎದುರಾಗಿ ಜೋಡಿಸುತ್ತೇವೆ. ಮಂಗಳಾರತಿ ಊದುಗಡ್ಡಿಗಳ ಹೊಗೆಯಂತೂ ಸಹಿಸಲಸಾಧ್ಯ. ಜೊತೆಗೆ ಜನಸಂದಣಿಯೂ ಸೇರಿದಾಗ ನಿಜವಾಗಿಯೂ ಆ ದೇವರು ಶಾಂತನಾಗಿದ್ದು ಎಲ್ಲವನ್ನೂ ಹೇಗೆ ಸಹಿಸಿಕೊಳ್ಳುತ್ತಾನೊ, ಎನಿಸುತ್ತದೆಯಲ್ಲವೆ ? ಒಬ್ಬ ಮನುಷ್ಯನನ್ನೇ ಘಂಟೆಗಟ್ಟಲೆ ಹಾಗೆ ಕೂಡಿಸಿದರೆ ಏನಾಗಬಹುದು ? ಯೋಚಿಸಿರಿ. ಒಂದುವೇಳೆ ಆ ದೇವರನ್ನು ಕಲ್ಲೆಂದು ತಿಳಿದರೂ ಅಂಥ ಕಲ್ಲನ್ನಾದರೂ ಸೃಷ್ಟಿಸಿರುವ ಭಗವಂತನು ಎಂಥ ಸಮರ್ಥನಿರಬೇಕು ? ಆದ್ದರಿಂದ ಪರಮೇಶ್ವರನ ಅಮೋಘಶಕ್ತಿಯು ಈಗಲಾದರೂ ನಮಗೆ ಮನಸ್ಸಿಗೆ ಬರಬೇಕು. ಇಂಥ ಭಗಂತನು ಜಗತ್ತಿನ ವ್ಯಾಪಾರಗಳೆಲ್ಲಕ್ಕೂ ಸಾಕ್ಷಿಯಾಗಿರುವದರಿಂದ ಬಹಳಮಟ್ಟಿಗೆ ಆತನ ದೃಷ್ಟಿಗೆ ಜೀವರುಗಳ ಅಪರಾಧಗಳೇ ಕಾಣುವವು. ಏಕೆಂದರೆ ಪರಮೇಶ್ವರನನ್ನು ಸ್ಮರಿಸುವವರಿಗಿಂತ ಆತನನ್ನು ಮರೆತಿರುವವರೇ ಪ್ರಪಂಚದಲ್ಲಿ ಹೆಚ್ಚಲ್ಲವೆ ? ಆದ್ದರಿಂದ ಇಲ್ಲಿ ಭಕ್ತನಾದವನು ಎಲ್ಲರ ಪರವಾಗಿ "ಎಲೈ ದೇವನೆ, ನೀನು ಧರಿಸಿರುವ ಆಯುಧಗಳು ಹೇಗೂ ನಿನ್ನ ಅಧೀನದಲ್ಲೇ ಇರುವದರಿಂದ ನಮ್ಮ ವಿಷಯದಲ್ಲಿ ಅನುಗ್ರಹಮಾಡುವವನಾಗಿ ಅವುಗಳನ್ನು ಹಿಮ್ಮುಖವಾಗಿ ಮಾಡು. ನಾವು ಅವುಗಳ ಅಮೋಘಶಕ್ತಿಯನ್ನು ಸಹಿಸಲಾರೆವು. ನಿನ್ನ ಪರಾಕ್ರಮವು ನಮ್ಮನ್ನು ನಾಶಗೊಳಿಸದೆ ಇರಲಿ; ಹಾಗೂ ನೀನು ಪಶುಪತಿಯಾದ್ದರಿಂದ ಪಶುಗಳಾದ ನಮ್ಮನ್ನು ಎಲ್ಲಾ ರೀತಿಯಿಂದಲೂ ಕ್ಷಮಿಸು" ಎಂದು ಬೇಡಿರುತ್ತಾನೆ.

ಈಗ ಹನ್ನೊಂದನೆಯ ಹಾಗೂ ಕೊನೆಯ ಅನುವಾಕವನ್ನು ವಿಚಾರ ಮಾಡಬೇಕಾಗಿದೆ. ಈ ಅನುವಾಕದಲ್ಲಿ ಒಟ್ಟು ಹದಿಮೂರು ಮಂತ್ರಗಳಿವೆ. ಮೊದಲನೆಯ ಮಂತ್ರವನ್ನು ನೋಡೋಣ.

ಸಹಸ್ರಾಣಿ ಸಹಸ್ರಶೋ ಯೇ ರುದ್ರಾ ಅಧಿ ಭೂಮ್ಯಾಮ್ ।
ತೇಷಾಗ್ಂ ಸಹಸ್ರಯೋಜನೇಽವ ಧನ್ವಾನಿ ತನ್ಮಸಿ ॥

ಅನೇಕಸಹಸ್ರಸಂಖ್ಯಾಕರಾದ, ಭೂಮಿಯನ್ನಾಶ್ರಯಿಸಿಕೊಂಡಿರುವ, ಹಾಗೂ ಒಡೆಯರಾದ ಯಾವ ರುದ್ರರಿರುವರೋ, ಅವರ ಧನುಸ್ಸುಗಳನ್ನು ನಮ್ಮಿಂದ ಸಹಸ್ರಯೋಜನಗಳಷ್ಟು ದೂರದದಲ್ಲಿಯೇ ಕೆಳಗಿಳಿಸುವಂತೆ (ಪ್ರಾರ್ಥನೆಯಿಂದ) ಮಾಡೋಣ.”

ಈ ಅನುವಾಕವು ವಿಶೇಷಮಹತ್ತ್ವವುಳ್ಳದ್ದಾಗಿರುವದು. ಈ ವರೆಗಿನ ಸ್ತುತಿಭಾಗದಲ್ಲಿ ರುದ್ರನು ಒಬ್ಬನೇ ಎಂಬ ದೃಷ್ಟಿಯಿಂದ ಪ್ರಾರ್ಥಿಸಲಾಯಿತು. ಈಗ ಆತನದೇ ಅಂಶಭೂತರಾದ, ಆತನಿಗಿಂತ ಬೇರೆಯಲ್ಲದ ಹಾಗೂ ಮಹಿಮಾರೂಪರಾದ ಅನೇಕ ರುದ್ರರುಗಳನ್ನು ಕುರಿತು ಪ್ರಾರ್ಥಿಸಲಾಗುವದು. ಸರ್ವಲೋಕೇಶ್ವರನಾದ ರುದ್ರನ ಅಂಶಸಂಭೂತರಾದ, ಹಾಗೂ ಆಯಾ ಲೋಕಗಳಲ್ಲಿದ್ದುಕೊಂಡು ಅಲ್ಲಿರುವ ಪ್ರಾಣಿಗಳ ಕರ್ಮಾನುಗುಣವಾಗಿ ನಿಗ್ರಹಾನುಗ್ರಹಗಳನ್ನು ಮಾಡುತ್ತಾ ಇರುವ ಅನೇಕರು ರುದ್ರರು ಶ್ರುತಿಸ್ಮೃತಿಗಳಲ್ಲಿ ಪ್ರಸಿದ್ಧರಾಗಿರುತ್ತಾರೆ. ‘ರುದ್ರನೊಬ್ಬನೇ ಎಂದು ಹೇಳಲ್ಪಟ್ಟರೂ ಆತನ ಅನುಚರರು ಲೆಕ್ಕವಿಲ್ಲದಷ್ಟಿರುವರು, ಅವರು ಕೇಳಬಂದರೂ ಕಾಣುವದಿಲ್ಲ’ ಎಂದು ತೈತ್ತಿರೀಯಾರಣ್ಯಕದಲ್ಲಿ ಹೇಳಿದೆ. ‘ಅಘೋರರರೂ ಘೋರರರೂ ಘೋರತರರೂ ಆದ, ಜಗತ್ತನ್ನು ಹಿಂಸಿಸುವ ರುದ್ರರುಗಳಿಗೆ ನಮಸ್ಕಾರ’ ಎಂದು ಮಹಾನಾರಾಯಣೋಪನಿಷತ್ತಿನಲ್ಲಿದೆ. ‘ದಿವ್ಯರಾದ ಬಹುರೂಪರಾದ ಸನಾತನರಾದ ರುದ್ರರು ನಮ್ಮ ಆಯುಷ್ಯವನ್ನು ನಾಶಗೊಳಿಸುವ ಮೃತ್ಯುವನ್ನು ಹಿಮ್ಮೆಟ್ಟಿಸಲಿ’ ಎಂದು ಆಯುಷ್ಯಸೂಕ್ತದಲ್ಲಿ ಹೊಗಳಿದೆ. ಅಮೃತರೂಪರಾದ ಯಾವ(ರುದ್ರರು) ದಿವ್ಯವಾದ ಸ್ಥಾನಗಳನ್ನು ಆಶ್ರಯಿಸಿರುವರೋ’ ಎಂದು ಶ್ವೇತಾಶ್ವತರೋಪನಿಷತ್ತಿನಲ್ಲಿದೆ. ಶಿವಪುರಾಣಗಳಲ್ಲಿ ಕೊಟ್ಟಿರುವ ಈ ರುದ್ರರ ವರ್ಣನೆಯನ್ನು ಕೇಳಿರಿ : “ನಿತ್ಯಮುಕ್ತರೂ, ಉಪಮಾನರಹಿತರೂ, ದ್ವಂದ್ವಗಳಿಲ್ಲದವರೂ, ಸಂಕಟಗಳಿಲ್ಲದವರೂ ಆದ, ಶಕ್ತಿ, ಸೇವಕರುಗಳಿಂದ ಕೂಡಿದ, ಎಲ್ಲರಿಂದಲೂ ನಮಸ್ಕರಿಸಲ್ಪಡುತ್ತಿರುವ, ಎಲ್ಲಾ ಲೋಕಗಳ ಸೃಷ್ಟಿಸಂಹಾರಗಳಲ್ಲಿ ಸಮರ್ಥರಾದ, ಅನ್ಯೋನ್ಯಪ್ರೀತಿಯುಳ್ಳವರೂ, ಅನ್ಯೋನ್ಯವಾಗಿ ನಮಸ್ಕಾರಮಾಡಲ್ಪಡುವವರೂ ಆದ, ಪರಮೇಶ್ವರನಿಗೆ ಪ್ರಿಯರೂ ಆತನಂತೆಯೇ ವೇಷಭೂಷಣಗಳುಳ್ಳವರೂ ಸಾಧುಗಳೂ, (ಕೆಲವು ವೇಳೆ) ಭಯಂಕರರೂ, ಮಿಶ್ರಗುಣವುಳ್ಳವರೂ ಎರಡೂ ತುದಿಗಳಲ್ಲಿ (ಲೋಕಗಳ ಅಂಚಿನಲ್ಲಿ)ರುವವರೂ ವಿಕಾರರೂಪರೂ, ಸುಂದರರೂ, ಅನೇಕವಾದ

ವೇಷಗಳನ್ನು ಧರಿಸಿರುವವರೂ ಆದ, ಮಹಾದೇವನ ಗುಂಪಿನ ಸದಸ್ಯರಾದ ಸಾವಿರಾರು ರುದ್ರರಿರುವರು. ಇವರಲ್ಲಿ ಕುಳ್ಳರು, ಜಟಾಧಾರಿಗಳು, ಬೋಳು ತಲೆಯವರು, ಶಂಖದಂತೆ ಕುತ್ತಿಗೆಯುಳ್ಳವರು, ದಪ್ಪ ಹೊಟ್ಟೆಯುಳ್ಳವರು, ಶೂಲ, ಖಡ್ಗಗಳನ್ನು ಕೈಗಳಲ್ಲಿ ಹಿಡಿದವರಾಗಿ ಎತ್ತರವಾದ ಕಿರೀಟಗಳನ್ನು ಧರಿಸಿರುವ, ಶತ್ರುಗಳನ್ನು ಪುಡಿಪುಡಿಮಾಡುವ, ಅದ್ಭುತಪರಾಕ್ರಮಶಾಲಿಗಳಾದ ಇಷ್ಟವಾದ ಕೆಲಸವನ್ನು ಮಾಡುವ, ತ್ರಿಲೋಕಗಳಿಗೂ ಒಡೆಯರಾದ ಸಿದ್ಧ ರಾದ ರುದ್ರರಿರುವರು. ಇಂಥ ತನ್ನವರೇ ಆದ ರುದ್ರರಿಂದ ಪಾರ್ವತೀಸಹಿತ ನಾದ, ಭೂತಭವಿಷ್ಯತ್ತುಗಳಿಗೆ ಒಡೆಯನಾದ ಶಂಕರನು ಎಲ್ಲಾ ಭೂತಗಣ ಗಳಿಂದಲೂ ಕೂಡಿ ಜಗತ್ತನ್ನು ಆಳುತ್ತಿರುವನು" ಎಂದು ವರ್ಣಿಸಿದೆ.

ಲಿಂಗಪುರಾಣದಲ್ಲಿ ಹೀಗೆಂದು ಹೇಳಿದೆ; "ರುದ್ರನು ನೆನೆಸಿಕೊಂಡ ಮಾತ್ರದಿಂದ ಆ ಗಣಗಳೆಲ್ಲರೂ ಬಂದರು. ದೇವದೇವಿಯರಿಗೆ ನಮಸ್ಕರಿಸಿ ಹೀಗೆಂದರು: 'ಮಹಾದೇವನೆ, ನಮ್ಮನ್ನು ನೆನೆಸಿಕೊಂಡದ್ದೇಕೆ ? ನಮ್ಮಿಂದ ಏನಾಗಬೇಕು ? ಅಪ್ಪಣೆಯಾಗಲಿ; ಮಹಾಪ್ರಭುವೆ, ಸಮುದ್ರವನ್ನೇ ಒಣಗಿ ಸೋಣವೆ ? ಕಿಂಕರಸಮೇತನಾದ ಯಮನನ್ನು ಹೊಡೆದುತರೋಣವೆ ? ಬ್ರಹ್ಮನನ್ನಾಗಲೀ ಸೂರ್ಯನನ್ನಾಗಲೀ ಹಿಡಿದುಕೊಂಡುಬರೋಣವೆ ? ಇಂದ್ರನನ್ನೂ ದೇವತೆಗಳ ಸಮೇತನಾದ ವಿಷ್ಣುವನ್ನೂ ಕಟ್ಟಿಹಾಕಿ ನಿನ್ನ ಪಾದ ಗಳಿಗೆ ಕೆಡವೋಣವೆ ? ದೈತ್ಯದಾನವರನ್ನೆಲ್ಲ ಎಳೆದುಕೊಂಡು ಬರೋಣವೆ ? ಯಾರಿಗೆ ದುಃಖವನ್ನು ಉಂಟುಮಾಡೋಣ ? ಯಾರಿಗೆ ಸುಖವುಂಟು ಮಾಡೋಣ ?' ಎಂದು ಕೇಳಿದರು." ಈ ವರ್ಣನೆಯು ನಮಗೆ ರುದ್ರರ ನಿರತಿಶಯಮಹತ್ತ್ವವನ್ನು ತಿಳಿಸುತ್ತಿದೆ.

ಮತ್ತೊಂದು ಕಡೆ ಶೈವಪುರಾಣದಲ್ಲಿ "ಈ ರುದ್ರರು ದ್ಯುಲೋಕನಿವಾಸಿ ಗಳೂ ಆಗಿದ್ದಾರೆ. ಹಾಗೆಯೇ ಅಂತರಿಕ್ಷಲೋಕ, ಭೂಲೋಕ, ಪಾತಾಳ ಲೋಕಾದಿ ಸಮಸ್ತಜಾಗಗಳಲ್ಲಿಯೂ ಇದ್ದುಕೊಂಡಿರುವರು. ಇವರೆಲ್ಲರೂ ರುದ್ರನಂತೆಯೇ ಮಹಿಮಾನ್ವಿತರಾಗಿರುವರು"- ಎಂದು ತಿಳಿಸಿದೆ. ಅಂತೂ ಸಹಸ್ರಾರು ಸಂಖ್ಯಾಕರಾದ ಈ ರುದ್ರರ ಪರಾಕ್ರಮವನ್ನೂ ಕಾರ್ಯಗಳನ್ನೂ ಶಕ್ತಿ ಐಶ್ವರ್ಯಾದಿಗಳನ್ನೂ ಹೊಗಳುವದಕ್ಕಾಗಿಯೇ ಈ ಅನುವಾಕದ ಮಂತ್ರಗಳು ವಿನ್ಯಾಸಲಾಗಿವೆ. ಆದ್ದರಿಂದ ಇವುಗಳ ಅರ್ಥವನ್ನು ಈಗ ತಿಳಿಯೋಣ.

ಪ್ರಾರಂಭದ ಈ ಮಂತ್ರದಲ್ಲಿ ವಿಶೇಷವಾಗಿ ಭೂಮಿಯಲ್ಲಿಯೇ ಇರುವ ರುದ್ರರನ್ನು ಪ್ರಾರ್ಥಿಸಲಾಗಿದೆ. ಏಕೆಂದರೆ ನಾವಿರುವದು ಭೂಮಿಯ ಮೇಲೆ. ನಮಗೆ ಸುಖವುಂಟಾಗಬೇಕಾದರೆ ಈ ರುದ್ರರ ದಯೆ ನಮ್ಮಮೇಲೆ ಇರಬೇಕು. ಮೊದಲನೆಯದಾಗಿ ಇವರು ನಮ್ಮನ್ನು ಹಿಂಸಿಸಬಾರದು. ಇವರ ಆಯುಧಗಳ ದರ್ಶನವಾಗಲಿ, ಶಬ್ದವಾಗಲಿ ಯಾವದೂ ನಮಗೆ ಸಹಿಸಲಸಾಧ್ಯವೇ ಆಗಿರುವದು. ಯುದ್ಧದ ಸುದ್ದಿಯನ್ನು ಕೇಳಬಹುದೇ ಹೊರತು ನೋಡಲು ಎಷ್ಟು ಜನರಿಗೆತಾನೆ ಧೈರ್ಯವಿದ್ದೀತು ? ಹಾಗೆಯೇ ರುದ್ರರ ದರ್ಶನವೂ ಭಯವನ್ನುಂಟುಮಾಡುವಂತಹುದು. ಆದ್ದರಿಂದ ಸಾವಿರ ಯೋಜನಗಳ ದೂರದಲ್ಲಿಯೇ ಇದ್ದುಕೊಂಡು ಅವರು ತಮ್ಮ ಆಯುಧಗಳನ್ನು ಶಾಂತಗೊಳಿಸಿ ನಮ್ಮನ್ನು ಅನುಗ್ರಹಿಸಲಿ ; ನಾವು ಅವರನ್ನು ಮರೆಯದೆ ನಮಸ್ಕರಿಸೋಣ– ಎಂದು ಇಲ್ಲಿ ಪ್ರಾರ್ಥಿಸಲಾಗಿದೆ.

---

## ೩೮. ನೀಲಗ್ರೀವಾಃ ಶಿತಿಕಂಠಾಃ

ರುದ್ರಾಧ್ಯಾಯದ ಕೊನೆಯ ಅನುವಾಕದ ವಿಚಾರವನ್ನು ಈಗಾಗಲೆ ಪ್ರಾರಂಭಿಸಿದ್ದೇವೆ. ಇದರಲ್ಲಿರುವ ಹದಿಮೂರು ಮಂತ್ರಗಳಲ್ಲಿ ಒಂದನೆಯ ಮಂತ್ರದ ಅರ್ಥವನ್ನು ವಿಚಾರಮಾಡಿದ್ದಾಗಿದೆ. ಈಗ ಮುಂದಿನ ಮಂತ್ರವನ್ನು ನೋಡೋಣ.

ಅಸ್ಮಿನ್ ಮಹತ್ಯರ್ಣವೇಽನ್ತರಿಕ್ಷೇ ಭವಾ ಅಧಿ ॥

"ಈ ಎದುರಿಗೆ ಕಾಣುತ್ತಿರುವ ದೊಡ್ಡದಾದ ಸಮುದ್ರ ಮತ್ತು ಅಂತರಿಕ್ಷಗಳಲ್ಲಿ ಮೇಲೂ ಒಳಗೂ ಯಾವ ಭವರೆಂಬ ರುದ್ರರಿರುವರೋ (ಅವರ ಧನುಸ್ಸುಗಳು ಸಾವಿರ ಯೋಜನಗಳ ದೂರದಲ್ಲಿಯೇ ಇಳಿಮುಖವಾಗಲಿ"

ಇಲ್ಲಿಂದ ಮುಂದಿನ ಎಲ್ಲಾ ಮಂತ್ರಗಳಿಗೂ "ತೇಷಾಗ್ಂ ಸಹಸ್ರಯೋಜನೇ...." ಎಂಬ ವಾಕ್ಯದ ಅನುಷಂಗವುಂಟು. ಅನುಷಂಗವೆಂದರೆ ಪಲ್ಲವಿಯಿದ್ದಂತೆ. ಅದನ್ನು ಪ್ರತಿಯೊಂದು ಮಂತ್ರಕ್ಕೂ ಮತ್ತೆ ಮತ್ತೆ ಜೋಡಿಸಿಕೊಳ್ಳುತ್ತಿರಬೇಕು. ಪ್ರಕೃತ– ಈ ಮಂತ್ರದಿಂದ ಮುಂದಕ್ಕೆ ರುದ್ರ

ರುಗಳು ಅನೇಕರಿರುವರಾದ್ದರಿಂದ ಅವರುಗಳ ಸ್ಥಾನಗಳನ್ನು ಗುರುತಿಸಿ ಒಬ್ಬೊಬ್ಬರನ್ನಾಗಿ ಸ್ತೋತ್ರಮಾಡಲಾರಂಭಿಸಲಾಗಿದೆ. ಈ ಮಂತ್ರದಲ್ಲಿ ಸಮುದ್ರ ಹಾಗೂ ಅಂತರಿಕ್ಷಗಳೆಂಬ ಸ್ಥಾನಗಳನ್ನು ರುದ್ರರಿಗೆ ಹೇಳಲಾಗಿದೆ. ಸಮುದ್ರವು ಮಹತ್ತರವಾದ ಜಲರಾಶಿಯು. ಅದರ ಗಾಂಭೀರ್ಯವೂ ವ್ಯಾಪ್ತಿಯೂ ಐಶ್ವರ್ಯವೂ ಮಿಗಿಲಾದುದು. ಆಳವಾಗಿರುವ ಸಮುದ್ರಕ್ಕೆ ಸಮುದ್ರವೇ ಉಪಮಾನವು. ಹಾಗೆಯೇ ಅದು ರತ್ನಾಕರವೆನಿಸಿರುವದು. ಒಬ್ಬ ಕವಿಯು ಸಮುದ್ರವನ್ನು ಹೊಗಳುವಾಗ ಹೀಗೆಂದಿರುತ್ತಾನೆ. "ಜಹ್ನು ಮಹರ್ಷಿಯ ಮಗಳೂ ಜಗತ್ತಿನಲ್ಲೇ ಪವಿತ್ರಳೂ ಆದ ಗಂಗೆಯೇ ಈತನ ಹೆಂಡತಿ. ಚಂದ್ರನೂ ಮಹಾಲಕ್ಷ್ಮಿಯೂ ಮಕ್ಕಳು. ಇನ್ನು ಲಕ್ಷ್ಮೀಪತಿಯಾದ ಜಗದೀಶನಾದ ಶ್ರೀಮನ್ನಾರಾಯಣನೇ ಈತನ ಅಳಿಯನು. ಹೀಗಿದೆ ಈ ಸಮುದ್ರರಾಜನ ವೈಭವ" ಎಂದಿರುತ್ತಾನೆ. ಇದು ನಿಜವೇ. ಈಗಿನ ನಾಗರಿಕಪ್ರಪಂಚದಲ್ಲಿಯೂ ಸಮುದ್ರಕ್ಕೆ ಬಹಳ ಬೆಲೆ. ಮೇಲೆ ಮೇಲೆ ಸಿಕ್ಕುವ ಉಪ್ಪು, ಮೀನುಗಳಿಂದ ಹಿಡಿದು ಎಣ್ಣೆಗಳು, ಮುತ್ತುರತ್ನಗಳು ಎಲ್ಲವೂ ಸಮುದ್ರದ ಉತ್ಪನ್ನಗಳೇ. ಆಧ್ಯಾತ್ಮಿಕದೃಷ್ಟಿಯಿಂದಲೂ ಸಮುದ್ರವು ಪರಮೇಶ್ವರನ ವಿಭೂತಿಯು. ಸೂರ್ಯನು ಸಮುದ್ರದ ನೀರನ್ನೇ ಆವಿಯಾಗಿಸಿ ಮಳೆಯನ್ನು ನಮಗೆ ಸುರಿಸುವನು. ಎಲ್ಲ ನದಿಗಳೂ ಸಮುದ್ರವನ್ನೇ ಸೇರುವದರಿಂದ ಸಮುದ್ರವು ಮಹಾತೀರ್ಥವು. ಇಂಥ ಮಹಾಸಮುದ್ರವನ್ನೆಲ್ಲ ಒಳಭಾಗದಲ್ಲಿಯೂ ಮೇಲೂ ವ್ಯಾಪಿಸಿಕೊಂಡು ರುದ್ರರುಗಳು ಇದ್ದುಕೊಂಡಿರುವರು. ಹಾಗೆಯೇ ಅಂತರಿಕ್ಷವೂ ರುದ್ರರ ವಾಸಸ್ಥಾನವೇ ಆಗಿರುವದು. ಅಂತರಿಕ್ಷವು ಸಮುದ್ರಕ್ಕಿಂತ ಮಿಗಿಲಾದುದು. ಅದು ಸೂರ್ಯಾದಿದೇವತೆಗಳ ವಾಸಸ್ಥಾನವು. ಭಗವಂತನು ತನ್ನ ಪಾದವನ್ನಿರಿಸಿ ಪವಿತ್ರಗೊಳಿಸಿರುವ ಜಾಗವು. ಎಷ್ಟೋ ಪಕ್ಷಿವರ್ಗವೇ ಮುಂತಾದವುಗಳಿಗೆ, ಕ್ರಿಮಿಕೀಟಗಳಿಗೆ ಅಂತರಿಕ್ಷವು ಅವಲಂಬನವು. ಇಂಥ ಅಂತರಿಕ್ಷವನ್ನೆಲ್ಲ ವ್ಯಾಪಿಸಿಕೊಂಡು ಹರಡಿಕೊಂಡಿರುವ ಭವ-ಎಂಬ ಹೆಸರಿನ ರುದ್ರರುಗಳನ್ನು ನಾವು ಸ್ತೋತ್ರಗಳಿಂದ ಸಂತೋಷಗೊಳಿಸಿ ದೂರದಲ್ಲೇ ಧನುಸ್ಸುಗಳನ್ನು ಇರಿಸುವಂತೆ ಮಾಡುವೆವು- ಎಂಬುದು ಈ ಮಂತ್ರದ ಅಭಿಪ್ರಾಯವು.

ಈಗ ಎರಡು ಮತ್ತು ಮೂರನೆಯ ಮಂತ್ರಗಳನ್ನು ವಿಚಾರಮಾಡೋಣ.

ನೀಲಗ್ರೀವಾಃ ಶಿತಿಕಂಠಾಃ ಶರ್ವಾ ಅಧಃ ಕ್ಷಮಾಚರಾಃ ||
ನೀಲಗ್ರೀವಾಃ ಶಿತಿಕಂಠಾ ದಿವಗ್ಂ ರುದ್ರಾ ಉಪಶ್ರಿತಾಃ ||

"ನೀಲಗ್ರೀವರೂ ಶಿತಿಕಂಠರೂ ಆದ ಯಾವ ಶರ್ವರಿರುವರೋ ಮತ್ತು ಭೂಮಿಯ ತಳಭಾಗದ ಪಾತಾಲಲೋಕಗಳಲ್ಲಿ ಸಂಚರಿಸುತ್ತಿರುವರೋ ಅಂಥವರ ಹಾಗೂ ಸ್ವರ್ಗಲೋಕವನ್ನು ಆಶ್ರಯಿಸಿರುವವರಾದ ರುದ್ರರುಗಳ (ಧನುಸ್ಸುಗಳನ್ನು ಶಾಂತಗೊಳಿಸೋಣ)"

ಈ ಮಂತ್ರಗಳಲ್ಲಿ ಎರಡುಬಾರಿ ನೀಲಗ್ರೀವ, ಶಿತಿಕಂಠರೆಂಬ ವಿಶೇಷಣಗಳನ್ನು ಉಚ್ಚರಿಸಲಾಗಿದೆ. ಹಿಂದೆ ಐದನೆಯ ಅನುವಾಕದಲ್ಲಿಯೂ ಈ ವಿಶೇಷಣಗಳನ್ನು ಹೇಳಿದೆ. ಅಲ್ಲಿ ಕೊಟ್ಟಿರುವ ವಿವರಣೆಯನ್ನು ಇಲ್ಲಿಯೂ ಅನುಸಂಧಾನಮಾಡಿಕೊಳ್ಳಬೇಕು. ರುದ್ರನು ತಾನೊಬ್ಬನೇ ನೀಲಗ್ರೀವನೂ ಶಿತಿಕಂಠನೂ ಅಲ್ಲ. ಅವನ ಅನುಚರರೂ ಸಹಚರರೂ ಕೂಡ ಅದೇ ರೂಪ, ಆಕಾರವುಳ್ಳವರಾಗಿರುತ್ತಾರೆಂದು ಇಲ್ಲಿ ತಿಳಿಸಿದೆ. ಮಿಲಿಟರಿ ಕಮ್ಯಾಂಡರ್ ಮಾತ್ರವೇ ಸಮವಸ್ತ್ರಧಾರಿಯಲ್ಲ. ಅವನೊಡನೆ ಎಲ್ಲ ಸಿಪಾಯಿಗಳೂ ಸಮವಸ್ತ್ರಧಾರಿಗಳೂ ಶಸ್ತ್ರಗಳನ್ನು ಹಿಡಿದವರೂ ಆಗಿರುತ್ತಾರಲ್ಲವೆ? ಹಾಗೆಯೇ ಇಲ್ಲಿಯೂ ತಿಳಿಯಬೇಕು ಇಂಥ ರುದ್ರರು ಪಾತಾಳದಿಂದ ಭೂಲೋಕದವರೆಗಿನ ಅಧೋಲೋಕಗಳನ್ನೆಲ್ಲ ವ್ಯಾಪಿಸಿಕೊಂಡಿರುವರು. ಅವರಿಲ್ಲದ ಸ್ಥಳವೇ ಇಲ್ಲ–ಎಂದು ಹೇಳಬಹುದಾಗಿದೆ. ಈ ರುದ್ರರು ತಾವುತಾವು ವ್ಯಾಪಿಸಿಕೊಂಡಿರುವಲ್ಲೆಲ್ಲ ತಮ್ಮ ಶಕ್ತಿಬಲಗಳಿಂದ ಎಲ್ಲಾ ಜೀವರುಗಳ ಮೇಲೂ ಅಧಿಕಾರವನ್ನು ಹೊಂದಿರುತ್ತಾರೆ. ಹೀಗೆ ಪಾತಾಳಲೋಕದ ಎಲ್ಲಾ ವಿಭಾಗಗಳಲ್ಲೂ ಇವರೇ ಎಲ್ಲರನ್ನೂ ನಿಯಮನಮಾಡುವರು. ಹೇಗೆಂದರೆ: ಪಾತಾಳಕ್ಕೆ ಒಡೆಯರಾದ ಅನಂತ, ವಾಸುಕಿ, ತಕ್ಷಕ–ಮೊದಲಾದ ನಾಗದೇವತೆಗಳೆಲ್ಲ ಈ ರುದ್ರರ ಅಧೀನರೇ ಆಗಿರುತ್ತಾರೆ. ಹಾಗೆಯೇ ಭೂಮಿಯ ಮೇಲ್ಭಾಗದಲ್ಲಿರುವ ಸ್ವರ್ಗ, ಸತ್ಯಾದಿಲೋಕಗಳೂ ಇವರ ವ್ಯಾಪ್ತಿಯಿಂದ ಹೊರತಲ್ಲ. ಅಲ್ಲಿಯ ಯಜಮಾನರುಗಳಾದ ಇಂದ್ರ, ಬ್ರಹ್ಮಾದಿದೇವತೆಗಳೂ ಈ ರುದ್ರರ ಆಡಳಿತದಲ್ಲಿಯೇ ಇದ್ದುಕೊಂಡಿರುವರು. ಆದ್ದರಿಂದ ಯಾರೇ ಆಗಲಿ ಈ ರುದ್ರರನ್ನು ಮರೆತರೆ ಅವರಿಗೆ ಕೇಡು ತಪ್ಪಿದ್ದಲ್ಲ. ಹಿಂದೊಮ್ಮೆ ದಕ್ಷಪ್ರಜಾಪತಿಯು ತಾನು ಮಾಡಿದ ಯಜ್ಞದಲ್ಲಿ ರುದ್ರನನ್ನು ತಿರಸ್ಕರಿಸಿದ್ದರ ಫಲವಾಗಿ ಸರ್ವನಾಶವನ್ನು

ಹೊಂದಿದ್ದೂ ಅವನನ್ನು ಬೆಂಬಲಿಸಿದ ದೇವತೆಗಳು ವೀರಭದ್ರನ ಶಿಕ್ಷೆಗೊಳಗಾದದ್ದೂ ಪುರಾಣಪ್ರಸಿದ್ಧವಾದ ಕಥೆಯಾಗಿರುತ್ತದೆ. ಇಂಥ ದೇವತೆಗಳ ಪಾಡೇ ಹೀಗಾದರೆ ಮನುಷ್ಯರ ಗತಿಯೇನು ? ರುದ್ರರುಗಳನ್ನು ಅಪಚಾರ ಮಾಡಿದ ಮನುಷ್ಯನು ಸುಖಿಯಾಗುವ ಸಂಭವವೇ ಇರುವದಿಲ್ಲ. ಆದ್ದರಿಂದ ನಾವು ಪ್ರತಿದಿನವೂ ರುದ್ರರನ್ನು ಸ್ತುತಿಸಲೇಬೇಕು. ಅವರನ್ನು ಶಾಂತರಾಗಿರುವಂತೆ ಪ್ರಾರ್ಥಿಸಿಕೊಳ್ಳಬೇಕು. ಅವರ ಆಯುಧಗಳು ನಮ್ಮನ್ನು ಹಿಂಸಿಸದಂತೆ ಬೇಡಿಕೊಳ್ಳಬೇಕು. ಅವರ ಅಸ್ತಿತ್ವವನ್ನು ನಾವು ಸದಾ ಚಿಂತಿಸುತ್ತಾ ಪಾಪಭೀತರಾಗಿ ನಡೆದುಕೊಳ್ಳಬೇಕು.

ಈಗ ಐದು, ಆರು, ಏಳನೆಯ ಮಂತ್ರಗಳನ್ನು ನೋಡೋಣ.

ಯೇ ವೃಕ್ಷೇಷು ಸಸ್ಪಿಂಜರಾ ನೀಲಗ್ರೀವಾ ವಿಲೋಹಿತಾಃ । ಯೇ ಭೂತಾನಾಮಧಿಪತಯೋ ವಿಶಿಖಾಸಃ ಕಪರ್ದಿನಃ । ಯೇ ಅನ್ನೇಷು ವಿವಿಧ್ಯಂತಿ ಪಾತ್ರೇಷು ಪಿಬತೋ ಜನಾನ್ ॥

"ಸಸ್ಪಿಂಜರರೂ, ನೀಲಗ್ರೀವರೂ, ವಿಲೋಹಿತರೂ ಆದ ಯಾವ ರುದ್ರರು ವೃಕ್ಷಗಳನ್ನು ಆಶ್ರಯಿಸಿಕೊಂಡು ಇರುವರೋ ಬಾಲಗ್ರಹಾದಿ ಭೂತಗಳ ಒಡೆಯರಾಗಿ, ಕೆಲವರು ಜುಟ್ಟಿಲ್ಲದೆಯೂ ಮತ್ತೆ ಕೆಲವರು ಜಡೆಯುಳ್ಳವರಾಗಿಯೂ ಇದ್ದುಕೊಂಡಿರುವರೋ, ತಿನ್ನುವ ಪದಾರ್ಥಗಳಲ್ಲಿ ಹಾಗೂ ಕುಡಿಯುವ ವಸ್ತುಗಳಲ್ಲಿ ಒಳಹೊಕ್ಕು ಇದ್ದುಕೊಂಡು ರೋಗಾದಿಗಳ ಮೂಲಕ ಜನರನ್ನು ಯಾರು ಹಿಂಸಿಸುತ್ತಿರುವರೋ (ಅಂಥ ರುದ್ರರ ಧನುಸ್ಸುಗಳು ಶಾಂತವಾಗುವಂತೆ ಪ್ರಾರ್ಥಿಸೋಣ.)"

ಈ ಮೂರು ಋಕ್ಕುಗಳೂ ಸೇರಿ-ಅರ್ಥದೃಷ್ಟಿಯಿಂದ ಒಂದು ಮಂತ್ರವೆಂದು ಭಾಷ್ಯಕಾರರು ತಿಳಿಸಿದ್ದಾರೆ. ರುದ್ರರುಗಳು ಎಷ್ಟುಮಂದಿ ? ಅವರುಗಳಲ್ಲಿ ಒಬ್ಬೊಬ್ಬರದೂ ಸ್ವರೂಪವೇನು ? ಎಂಬುದನ್ನು ಯಾರಿಂದಲೂ ವರ್ಣಿಸಲಾಗುವದಿಲ್ಲ. ಪ್ರತಿಯೊಬ್ಬರೂ ರುದ್ರರೇ ಆಗಿದ್ದಾರಾದರೂ ತಮ್ಮ ಒಂದೊಂದು ಗುಣವಿಶೇಷಗಳಿಂದ ಬೇರೆಬೇರೆಯಾಗಿಯೇ ಇರುತ್ತಾರೆ. ಹೇಗೆ ಮನುಷ್ಯರೆಲ್ಲ ಒಂದೇ ಎಂದರೂ ಪ್ರತಿಯೊಬ್ಬ ವ್ಯಕ್ತಿಯೂ ಭಿನ್ನಭಿನ್ನನೇ ಆಗಿರುತ್ತಾನಲ್ಲವೆ ? ಜನರು ಪ್ರತಿಯೊಬ್ಬರೂ ಒಂದೊಂದು ಸಮಸ್ಯೆಯನ್ನು

ತಮ್ಮತಮ್ಮದೇ ಪ್ರತ್ಯೇಕವಾಗಿ ಹೊಂದಿರುವಂತೆ ರುದ್ರರು ಪ್ರತಿಯೊಬ್ಬರೂ ಒಂದೊಂದು ಶಕ್ತಿವಿಶೇಷವನ್ನು ಹೊಂದಿ ಒಟ್ಟಾಗಿಯೂ ಒಂದೊಂದು ಗುಂಪಾಗಿ ಇರುತ್ತಾರೆ. ಈ ಗುಂಪುಗಳಲ್ಲಿ ಮರಗಳನ್ನು ಆಶ್ರಯಿಸಿ ಅವುಗಳಿಗೆ ಅಭಿಮಾನಿದೇವತೆಗಳಾಗಿ ವಾಸಿಸುತ್ತಿರುವವರು ಕೆಲವರು. ಇವರಲ್ಲಿ ಕೆಲವರು ಎಳೆಯ ಗರಿಕೆಯಂತೆ ಹಸಿರಾದ ಬಣ್ಣವುಳ್ಳವರಾಗಿರುತ್ತಾರೆ. ಇಂಥ ನೀಲ ಗ್ರೀವರಾದ ರುದ್ರರನ್ನು ಶಾಂತರಾಗುವಂತೆ ಇಲ್ಲಿ ಪ್ರಾರ್ಥಿಸಲಾಗಿದೆ.

ಇನ್ನು ಭೂತಗಳ ಒಡೆಯರಾದ ರುದ್ರರ ಮಹಿಮೆಯನ್ನು ನೋಡೋಣ. ನಮ್ಮ ಕರ್ನಾಟಕದ ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹಾಗೂ ಕೇರಳದಲ್ಲಿ ಭೂತಾ ರಾಧನೆ ತುಂಬ ಪ್ರಚುರವಾಗಿದೆ. ಕೆಲವುವೇಳೆ ಜನರು ಕಾಮಕ್ರೋಧವಶ ರಾಗಿ ಈ ಭೂತಗಳನ್ನು ತಮ್ಮ ಸ್ವಾರ್ಥಸಿದ್ಧಿಗಾಗಿಯೂ ಉಪಯೋಗಿಸುವ ದುಂಟು. ಆದರೆ ಅದು ಭೂತಗಳ ಆತ್ಮರಾದ ರುದ್ರರಿಗೆ ಮೆಚ್ಚಾದದ್ದಲ್ಲ. ರುದ್ರರು ಭೂತಗಳಲ್ಲಿರುವಂತೆಯೇ ಮನುಷ್ಯರಲ್ಲೂ ಇದ್ದಾರಷ್ಟೆ? ಆದ್ದರಿಂದ ಒಬ್ಬ ಮನುಷ್ಯನು ಮತ್ತೊಬ್ಬನನ್ನು ತನ್ನಂತೆಯೇ ಕಾಣುವದೇ ನಿಜವಾದ ಭೂತಾರಾಧನೆ. ಹಾಗಿಲ್ಲದಿದ್ದರೆ ಆಯಾ ಉಪಾಧಿಗಳಲ್ಲಿ ಅಡಗಿರುವ ರುದ್ರ ರಿಗೆ ನೋವೇ ಉಂಟಾಗಿ ಅದು ಆಸುರೀಸಂಪತ್ತಿನ ಪರಮಾವಧಿಯಾಗುವದು. ಆದ್ದರಿಂದ ಭೂತಾಧಿಪತಿಗಳಾದ ರುದ್ರರನ್ನು ಬಾಹ್ಯವಾಗಿ ಅರ್ಚಿಸುವಂತೆ ಅಂತರ್ಯದಿಂದಲೂ ಪೂಜಿಸಬೇಕು. ಇದು ಸಕಲಭೂತವ್ಯಾಪಿಯಾದ ರುದ್ರನ ಸಾಕ್ಷಾತ್ಕಾರಕ್ಕೆ ಸಾಧನವಾಗುವದು. ಪ್ರಕೃತ–ನಾವು ಪೂಜಿಸುವ ಮಾರಿ ದುರ್ಗಿ, ಚಂಡಿ, ಮಾತೃಕೆಯರು, ಹಾಗೂ ಇನ್ನೂ ಕೆಲವು ಆಯಾ ದೇಶಭಾಷೆ ಯ ನಾಮಗಳಿಂದ ಪ್ರಸಿದ್ಧವಾದ ಸ್ತ್ರೀಪುಲ್ಲಿಂಗವಾಚಕಶಬ್ದಗಳಿಂದ ಹೆಸರಿಸ ಲ್ಪಡುವ ಎಲ್ಲಾ ಭೂತಗಳಲ್ಲಿಯೂ ಭೂತನಾಥನಾದ ರುದ್ರನೇ ತನ್ನ ವಿಭೂತಿ ರೂಪರಾದ ರುದ್ರರುಗಳ ಅಂಶದಿಂದ ಕಂಡುಬರುತ್ತಿರುವನು. ಆದ್ದರಿಂದ ರುದ್ರಾರಾಧಕನು ಸರ್ವಭೂತಾರಾಧಕನೂ ಆಗಿರುವನೆಂಬುದರಲ್ಲಿ ಸಂಶಯ ವಿಲ್ಲ.

ಈಗ ಅನ್ನಪಾನಗಳಲ್ಲಿ ಅಧಿಷ್ಠಾತೃಗಳಾಗಿದ್ದುಕೊಂಡಿರುವ ರುದ್ರರುಗಳನ್ನು ವಿಚಾರಮಾಡೋಣ. ತಿನ್ನತಕ್ಕ ಪದಾರ್ಥಗಳಿಗೆ ಅನ್ನವೆನ್ನುವರು. ಕುಡಿಯ ತಕ್ಕ ಪದಾರ್ಥಗಳು ಪಾನವೆನಿಸುವವು. ಅಕ್ಕಿ, ಗೋಧಿ, ರಾಗಿ–ಮುಂತಾದ

ಧಾನ್ಯಗಳೆಲ್ಲವೂ ಮನುಷ್ಯನಿಗೆ ಆಹಾರವಾಗಿರುವವು. ಇವುಗಳಲ್ಲದೆ ತರಕಾರಿಗಳು, ಮಾಂಸ, ಮೊಟ್ಟೆ, ಸಕ್ಕರೆ- ಮುಂತಾದವುಗಳೂ ಭಕ್ಷ್ಯಪದಾರ್ಥಗಳಾಗಿವೆ. ಹಾಲು, ನೀರು, ಮಜ್ಜಿಗೆ-ಇತ್ಯಾದಿಗಳು ಪಾನೀಯಗಳು. ಇವುಗಳನ್ನು ಸಮಯಾನುಸಾರ ಮನುಷ್ಯನು ಹಸಿವು ಬಾಯಾರಿಕೆಗಳನ್ನು ತೀರಿಸಿಕೊಳ್ಳಲು ಆಹಾರವಾಗಿ ಮಾಡಿಕೊಂಡಿರುವನಷ್ಟೆ! ಆದರೆ ಇವುಗಳನ್ನು ಅತಿಯಾಗಿ ತಿಂದರೆ ಅಥವಾ ಕುಡಿದರೆ ರೋಗಗಳು ಪ್ರಾಪ್ತವಾಗುವವು. ಮತ್ತು ರೋಗವಿರುವಾಗಲೇ ತಿಂದರಂತೂ ಅವು ಇನ್ನೂ ಹೆಚ್ಚಾಗಿಬಿಡುವವು. ಈಗಿನ ಕಾಲಕ್ಕೆ ನಾನಾರೀತಿಯ ಸಿದ್ಧವಾದ ಖಾದ್ಯವಸ್ತುಗಳು ಅಂಗಡಿಗಳಲ್ಲಿ ಹಾಗೂ ಹೋಟೆಲುಗಳಲ್ಲಿ ದೊರಕುವದರಿಂದ ಜನರು ದೇಶಕಾಲಗಳ ನಿಯಮವಿಲ್ಲದೆ ನಾಲಿಗೆಯ ರುಚಿಗೆ ವಶರಾಗಿ ಅತಿಯಾಗಿ ತಿಂದು ಖಾಯಿಲೆಗಳಿಗೆ ಒಳಗಾಗುವದು ಸರ್ವಸಾಮಾನ್ಯವಾಗಿಬಿಟ್ಟಿದೆ. ಇಂಥ ಸಂದರ್ಭಗಳಲ್ಲೆಲ್ಲ ಆ ಜನರಿಗೆ ರುದ್ರದೇವತೆಗಳ ಶಾಪವೂ ಸೇರಿರುತ್ತದೆ. ಏಕೆಂದರೆ ಎಲ್ಲಾ ಆಹಾರವಸ್ತುಗಳಲ್ಲಿಯೂ ರುದ್ರರು ವ್ಯಾಪಕರಾಗಿದ್ದುಕೊಂಡಿದ್ದರೂ ಅವರನ್ನು ಒಮ್ಮೆಯೂ ನೆನೆಯದೆ, ಅವರ ಅಸ್ತಿತ್ವವನ್ನು ಲೆಕ್ಕಿಸದೆ ಅನ್ನಪಾನಗಳನ್ನು ತೆಗೆದುಕೊಂಡರೆ ಅವರಿಗೆ ಕೋಪವು ಬರುವದಿಲ್ಲವೆ? ಹೀಗಾಗಿ ಮಾನವನು ರುದ್ರರ ಅಪಚಾರದಿಂದಲೇ ರೋಗಗ್ರಸ್ತನೂ ಅನಂತರ ಅಪಮೃತ್ಯುವಿಗೆ ವಶನಾಗುವವನೂ ಆಗಿದ್ದಾನೆ. ಆದ್ದರಿಂದ ಅನ್ನಗಳಲ್ಲಿದ್ದುಕೊಂಡು ರೋಗರುಜಿನಗಳನ್ನು ಉಂಟುಮಾಡುವ ಹಾಗೂ ಪಾತ್ರ-ಎಂದರೆ ಕುಡಿಯುವ ದ್ರವ್ಯಗಳಲ್ಲಿಯೂ ಗೂಢರಾಗಿದ್ದುಕೊಂಡಿರುವ ಯಾವ ರುದ್ರರಿರುವರೋ ಅಂಥವರನ್ನು ನಾವು ಪ್ರಾರ್ಥಿಸಿ ಶಾಂತರಾಗುವಂತೆ ಮಾಡಿಕೊಳ್ಳಬೇಕೆಂದು ಇಲ್ಲಿ ತಿಳಿಸಿರುತ್ತದೆ. ರುದ್ರರನ್ನು ಸುಪ್ರೀತರನ್ನಾಗಿ ಮಾಡುವ ವಿಧಾನವೆಂದರೆ: ಆಯಾ ಅನ್ನಪಾನಗಳನ್ನು ಅವರ ಹೆಸರು ಹೇಳಿಕೊಂಡು ಮನಸ್ಸಿನಲ್ಲೇ ಅವರಿಗೆ ಅರ್ಪಿಸುವದು. ಇದನ್ನು 'ನಿವೇದನ'ವೆನ್ನುವರು. ರುದ್ರರಿಗೆ ನಿವೇದಿತವಾದ ಹಾಗೂ ಅವರ ಪ್ರಸಾದರೂಪವಾದ ಪದಾರ್ಥಗಳು 'ಅಮೃತ'ವೆನಿಸುತ್ತವೆ. ಅಮೃತಭೋಜನ ಮಾಡುವವರನ್ನು ಯಾವ ರೋಗರುಜಿನಗಳೂ ಕಾಡಲಾರವು- ಎಂದು ಇಲ್ಲಿ ತಿಳಿಸಿದಂತಾಗಿರುತ್ತದೆ.

---

## ೩೫. ನಮೋ ರುದ್ರೇಭ್ಯಃ

ರುದ್ರಾಧ್ಯಾಯದ ಕೊನೆಯ ಅನುವಾಕದ ಕೊನೆಯ ಆರು ಮಂತ್ರಗಳನ್ನು ಈಗ ವಿಚಾರಮಾಡಬೇಕಾಗಿದೆ.

ಯೇ ಪಥಾಂ ಪಥಿರಕ್ಷಯ ಐಲಬೃದಾ ಯವ್ಯುಧಃ । ಯೇ ತೀರ್ಥಾನಿ ಪ್ರಚರನ್ತಿ ಸೃಕಾವನ್ತೋ ನಿಷಂಗಿಣಃ । ಯ ಏತಾವಂತಶ್ಚ ಭೂಯಾಗ್ಂಸಶ್ಚ ದಿಶೋ ರುದ್ರಾ ವಿತಸ್ಥಿರೇ । ತೇಷಾಗ್ಂ ಸಹಸ್ರ ಯೋಜನೇವ ಧನ್ವಾನಿ ತನ್ಮಸಿ ॥

ನಮೋ ರುದ್ರೇಭ್ಯೋ ಯೇ ಪೃಥಿವ್ಯಾಂ ಯೇಽನ್ತರಿಕ್ಷೇ ಯೇ ದಿವಿ ಯೇಷಾಮನ್ನಂ ವಾತೋ ವರ್ಷಮಿಷವಸ್ತೇಭ್ಯೋ ದಶ ಪ್ರಾಚೀರ್ದಶ ದಕ್ಷಿಣಾ ದಶ ಪ್ರತೀಚೀರ್ದಶೋದೀಚೀರ್ದಶೋ-ರ್ಧ್ವಾಸ್ತೇಭ್ಯೋ ನಮಸ್ತೇ ನೋ ಮೃಡಯಂತು ತೇ ಯಂ ದ್ವಿಷ್ಮೋ ಯಶ್ಚ ನೋ ದ್ವೇಷ್ಟಿ ತಂ ವೋ ಜಂಭೇ ದಧಾಮಿ ॥

"ಯಾರು ಪಥಗಳ ರಕ್ಷಕರೂ, ಅನ್ನದಾತೃಗಳೂ, ಪಾಪಿಷ್ಠರೊಡನೆ ಕಾದಾಡುವವರೂ, ಆಗಿದ್ದು ಸೃಕೆಯೆಂಬ ಆಯುಧದಿಂದ ಕೂಡಿ ತೀರ್ಥಗಳನ್ನು ಕುರಿತು ಸಂಚರಿಸುತ್ತಿರುವರೋ ಖಡ್ಗಾಯುಧಧಾರಿಗಳೋ, ಅಂಥ ಎಷ್ಟು ಜನ ರುದ್ರರಿರುವರೋ ಮತ್ತು ಸಂಖ್ಯೆಯನ್ನು ಮೀರಿ ಇನ್ನೂ ಹೆಚ್ಚಾಗಿರುವರೋ, ಎಲ್ಲಾ ದಿಕ್ಕುಗಳಲ್ಲಿಯೂ ವ್ಯಾಪಿಸಿಕೊಂಡಿರುವರೋ ಅವರುಗಳ ಧನುಸ್ಸುಗಳು ಸಾವಿರಯೋಜನಗಳ ದೂರದಲ್ಲಿಯೇ ಇಳಿಮುಖವಾಗುವಂತೆ ಪ್ರಾರ್ಥನೆಯಿಂದ ಮಾಡೋಣ!"

"ಪೃಥಿವಿಯಲ್ಲಿಯೂ ಅಂತರಿಕ್ಷದಲ್ಲಿಯೂ ದ್ಯುಲೋಕದಲ್ಲಿಯೂ ಇದ್ದುಕೊಂಡಿರುವ ಯಾವ ರುದ್ರರಿಗೆ ಕ್ರಮವಾಗಿ ಅನ್ನವೂ ಗಾಳಿಯೂ ಮಳೆಯೂ ಬಾಣಗಳಾಗಿರುವವೋ ಅಂಥವರಿಗೆ ಪೂರ್ವದಿಕ್ಕಿನಲ್ಲಿಯೂ ದಕ್ಷಿಣ, ಪಶ್ಚಿಮ, ಉತ್ತರದಿಕ್ಕುಗಳಲ್ಲಿಯೂ ಮೇಲ್ಭಾಗದಲ್ಲಿಯೂ ನಾನು ತ್ರಿಕರಣಗಳಿಂದಲೂ ಹತ್ತು (ಬೆರಳುಗಳನ್ನೂ) ಚಾಚಿ ನಮಸ್ಕರಿಸುವೆನು. ಅವರು ನಮ್ಮನ್ನು ಸುಖಗೊಳಿಸಲಿ! ನಾವು ಯಾರನ್ನು ದ್ವೇಷಿಸುವೆವೋ ಯಾರು ನಮ್ಮನ್ನು ದ್ವೇಷಿಸುವರೋ ಅಂಥವರನ್ನು ಅವರ ತೆರೆದ ಬಾಯಲ್ಲಿ ಅರ್ಪಿಸಿಬಿಡುವೆವು."